

'ಪ್ರಕೃತಿ ಚಿತ್ರ' – ಎ. ಕೆ. ಜುಬೇರ್

# ಕೆಲವು ಕೊಲಾಜ್ ಕಲಾಕೃತಿಗಳು

**'ಕೊ**ಲಾಜ್' ಕಲಾಕೃತಿ ರಚನೆಗೆ ಬಣ್ಣಗಳಾಗಲಿ, ಕುಂಚಗಳಾಗಲಿ ಬಳಸದಿರುವುದೇ ವಿಶೇಷ. ಬಣ್ಣಗಳ ಬದಲು ಸಿದ್ಧ ಬಣ್ಣದ ಕಾಗದದ ಸಣ್ಣ ಸಣ್ಣ ತುಣುಕುಗಳನ್ನು ಕತ್ತರಿಸಿ, ಅವುಗಳನ್ನು ಬೇಕಾದ ಸ್ಥಳದಲ್ಲಿ ಅಂಟಿಸುವ ಮೂಲಕ ಕಲಾಕೃತಿ ಪೂರ್ಣ. ಈ ವಿಧಾನ ಬಳಸಿ ತದ್ರೂಪ ಅಥವಾ ರಿಯಲಿಸ್ಟಿಕ್ ಕಲಾಕೃತಿಗಳನ್ನು ರಚಿಸುವುದು ಕಷ್ಟ. ಪ್ರಾರಂಭಿಕ ಹಂತದಲ್ಲಿರುವ ಕಲಾ ವಿದ್ಯಾರ್ಥಿಗಳಲ್ಲಿ ಏಕಾಗ್ರತೆಯ ಕೊರತೆ ಇರುತ್ತದೆ. ಅಂತಹ ವಿದ್ಯಾರ್ಥಿಗಳಲ್ಲಿ ಏಕಾಗ್ರತೆ ಮೂಡಿಸುವಲ್ಲಿ ಈ ಕಲಾ ವಿಧಾನ ತುಂಬ ಯಶಸ್ವಿಯಾಗಬಲ್ಲುದು. ಆದರೆ ಇದಕ್ಕೆ ಹೆಚ್ಚಿನ ಸಮಯ ಹಿಡಿಸುವುದರಿಂದ ಸಾಮಾನ್ಯವಾಗಿ ಚಿತ್ರಕಲಾ ಶಾಲೆಗಳಲ್ಲಿ ಇದನ್ನು ಹೇಳಿಕೊಡುವುದು ತುಂಬ ವಿರಳ. ಮಂಗಳೂರಿನ ''ಮಹಾಲಸಾ ಚಿತ್ರಕಲಾ ಶಾಲೆ'' ಯಲ್ಲಿ ಕಲೆಯ ಹಲವಾರು ಪ್ರಕಾರಗಳನ್ನು ಅಭ್ಯಾಸ ಮಾಡಿಸಲಾಗುತ್ತದೆ. ಅದರಲ್ಲಿ 'ಕೊಲಾಜ್' ಸಹ ಸೇರಿದೆ. ಇತ್ತೀಚೆಗೆ ಈ ಶಾಲೆಯಲ್ಲಿ ಒಂದು ತಿಂಗಳ ಅವಧಿಯ ''ಕೊಲಾಜ್ ಶಿಬಿರ''ವನ್ನು ಶ್ರೀ ಸೈಯದ್ ಆಸಿಫ್ ಅಲಿ ಹಾಗೂ ಶ್ರೀ ಬಿ. ಪಿ. ಮೋಹನ್ ಕುಮಾರ್‌ರವರು ಆಯೋಜಿಸಿದ್ದರು. ೪೫ ವಿದ್ಯಾರ್ಥಿಗಳು, ೫೫ಕ್ಕೂ ಹೆಚ್ಚಿನ ಕೊಲಾಜ್ ಕೃತಿಗಳನ್ನು ರಚಿಸುವಲ್ಲಿ ಯಶಸ್ವಿಯಾದರು. ಬೆಂಗಳೂರಿನ ಚಿತ್ರಕಲಾಪರಿಷತ್ತಿನಲ್ಲಿ ಈ ವಿದ್ಯಾರ್ಥಿಗಳ ಚಿತ್ರಗಳ ಪ್ರದರ್ಶನ ನಡೆಯಿತು.

–ಸೈಯದ್ ಆಸಿಫ್ ಅಲಿ



ಸೈಯದ್ ಆಸಿಫ್ ಅಲಿ

ಕಲಾವಿದರು
ಉಪನ್ಯಾಸಕರು
ಮಹಾಲಸಾ ಚಿತ್ರಕಲಾ ಶಾಲೆ
ಹಮೀದ್ ಕಾಂಪ್ಲೆಕ್ಸ್
೨ನೇ ಮಹಡಿ
ಕಂಬ್ಳ ಕ್ರಾಸ್, ಅಳಕೆ
ಮಂಗಳೂರು - ೩.



ಬಿ. ಪಿ. ಮೋಹನ್ ಕುಮಾರ್



'ಪ್ರಕೃತಿ ಚಿತ್ರ' – ಪ್ರಕಾಶ್



'ಪ್ರಕೃತಿ ಚಿತ್ರ' – ವಿಲ್ಸನ್



'ಮನೆಗಳು' – ಆಶಾಲತಾ



'ರಾತ್ರಿ' – ದೇವಿಪ್ರಸಾದ್

# ಹೊಸತು

## ಒಳಗೇನಿದೆ.....




*ಚಿತ್ರಗಳು : ಶ್ರೀಹರಿ, ಸತೀಶ್‌ಕುಮಾರ್, ಜಿ. ಎಂ. ಬೊಮ್ನಳ್ಳಿ, ರಾಂಚಂದ್ರ*

*ಮುಖಚಿತ್ರ : ಲಕ್ಷ್ಮೀಕಿರಣ ಪಳ್ಳತ್ತಡ್ಕ*

*(ವರ್ಣಚಿತ್ರ : ಶ್ಯಾಮಲಾ ಎಸ್. ಎನ್. ಭಟ್)*

*ವಿನ್ಯಾಸ : ನವಕರ್ನಾಟಕ ವಿನ್ಯಾಸ*

*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

**ಶಾ**ಲೆಗಳಲ್ಲಿ ಮಕ್ಕಳಿಗೆ ಊಟ ಕೊಡುವ ಯೋಜನೆಯ ಬಗ್ಗೆ ಎಷ್ಟೇ ಅಪಸ್ವರಗಳು ಕೇಳಿಬಂದಿದ್ದರೂ ಅದು ಸ್ವಾಗತಾರ್ಹವಾದ ಕ್ರಮವೆಂಬುದು ನಿಶ್ಚಯ. ಪಾತ್ರೆ - ಪರಡಿಗಳನ್ನು ಒದಗಿಸಿಲ್ಲ, ಅಡಿಗೆ ಮಾಡುವ ಸ್ಥಳಗಳು ಚೊಕ್ಕಟವಾಗಿಲ್ಲ, ಅಡಿಗೆ ಮಾಡಿಸಲು ಸಿಬ್ಬಂದಿಯನ್ನು ನೇಮಿಸಿಲ್ಲ, ಮುಂತಾದ ಟೀಕೆಗಳು ಬಂದಿವೆ. ಆದರೆ ಅದಾವುದೂ ಸರಿಪಡಿಸಲು ಸಾಧ್ಯವಿಲ್ಲದಂತಹ ಅಂಶಗಳಲ್ಲ. ಶಾಲೆಯಿಂದ ಹೊರಗೆ ಉಳಿದುಬಿಡುತ್ತಿದ್ದ ಮಕ್ಕಳು ಊಟದ ಸೌಲಭ್ಯದಿಂದಾಗಿ ವ್ಯಾಸಂಗ ಮುಂದುವರಿಸುವ ಸಾಧ್ಯತೆ ಹೆಚ್ಚುವುದು ಖಂಡಿತ. ಉನ್ನತ ಶಿಕ್ಷಣದ ಹಂತದ ಮೀಸಲಾತಿಗಳಿಗೆ ಏನಾದರೂ ಅರ್ಥ ಬರಬೇಕಾದರೆ ಮೊದಲು ಮಕ್ಕಳು ಶಾಲೆಗಳಲ್ಲಿ ಉಳಿಯುವಂತಾಗುವುದು ಬಹಳ ಮುಖ್ಯ. ದುಡಿಮೆಯು ಅನಿವಾರ್ಯವಾಗಿ ಯಾವ ಮಕ್ಕಳು ಶಾಲೆಗೆ ಬಾರದಿರುತ್ತಾರೋ ಅಂಥವರಿಗೆ ವಸತಿ ಶಾಲೆಗಳನ್ನು ಕಲ್ಪಿಸಬೇಕಾಗಿದ್ದುದು ಸಮಾಜದ ಜವಾಬ್ದಾರಿಯಾಗಿತ್ತು. ಊಟದ ಸೌಲಭ್ಯ ಅದಕ್ಕೆ ಪರ್ಯಾಯವಲ್ಲ; ಆದರೂ ಅದು ದಿಟ್ಟ ಹೆಜ್ಜೆ ನಾಗರಿಕ ಪ್ರಜ್ಞೆಯ ಒಂದು ಮೆಟ್ಟಿಲು. ನ್ಯೂನತೆಗಳನ್ನು ಕ್ರಮೇಣ ತೊಡೆದುಹಾಕಿದರೆ ಇದೊಂದು ಕ್ರಾಂತಿಕಾರಿ ಘಟ್ಟವೂ ಆಗಬಹುದು. ಈ ಸಂಬಂಧದಲ್ಲಿ ಜಾತಿ ಮತ್ತು ಅಸ್ಪೃಶ್ಯತೆಯ ಗೋಡೆಗಳನ್ನು ಎಬ್ಬಿಸುತ್ತಿರುವ ಧೂರ್ತ ಅಧಿಕಾರಿಗಳಿಗೆ ಮತ್ತು ಇತರ ತಂಟೆಕೋರರಿಗೆ ಸೊಪ್ಪುಹಾಕದೆ ಯೋಜನೆಯನ್ನು ಯಶಸ್ವಿಯಾಗಿ ಮುಂದುವರಿಸುವ ತೀರ್ಮಾನ ಕೈಗೊಂಡಿರುವ ಶಿಕ್ಷಣ ಸಚಿವ ಡಾ|| ಬಿ. ಕೆ. ಚಂದ್ರಶೇಖರ್ ಅವರಿಗೆ ಸಾರ್ವಜನಿಕ ಬೆಂಬಲವಿರುತ್ತದೆ.

ಈ 'ಬಿಸಿಯೂಟ'ದ ಯೋಜನೆಯನ್ನು ಎಂಥದೋ ಲಾಟರಿಯಿಂದ ಶೇಖರವಾಗುವ ಹಣದಿಂದ ನಡೆಸಲಾಗುವುದೆಂದು ಮುಖ್ಯಮಂತ್ರಿಗಳು ಘೋಷಿಸಿದ್ದರು. ಆ ಲಾಟರಿ ಆಯೋಜಕರು ಅವರ ಆಪ್ತವಲಯದವರೇ ಅಲ್ಲವೇ ಎಂಬುದು ಅಪ್ರಸ್ತುತ. ಅಂತಹ ಪಾಪದ ಹಣವಿಲ್ಲದೆಯೂ ಈ ಯೋಜನೆ ಕಾರ್ಯಗತವಾಗಬೇಕಿತ್ತು. ನಮ್ಮ ರಾಜ್ಯದಲ್ಲಿ ಮಾರಾಟವಾಗುವ ಪೆಟ್ರೋಲ್ ಮತ್ತು ಡೀಸೆಲ್ ಬೆಲೆಗಳನ್ನು ೩೭ ಪೈಸೆ, ೨೮ ಪೈಸೆ ಇತ್ಯಾದಿಯಾಗಿ ನಿಗದಿಗೊಳಿಸುವಾಗ ಅದನ್ನು ಹತ್ತಿರದ ಐವತ್ತಕ್ಕೆ ಏರಿಸಿದರೆ ಯಾರೂ ಗೊಣಗುವುದಿಲ್ಲ, ಏಕೆಂದರೆ ಹೇಗಿದ್ದರೂ ಅವರು ಪಾವತಿಸುತ್ತಿರುವುದು ಐವತ್ತರ ಲೆಕ್ಕದಲ್ಲೇ. ಅದರಿಂದ ಸಂದಾಯವಾಗುವ ಹಣ ಈ ತುಚ್ಛ ಲಾಟರಿಯ ಹಣಕ್ಕಿಂತಲೂ ಆರೋಗ್ಯಕರ. ಲಾಟರಿ ಹಣದಿಂದ ನಡೆಯುವ ಯೋಜನೆ ಇದಾದರೆ ಮುಖ್ಯಮಂತ್ರಿಗಳು ಒಂದು ಪ್ರಶ್ನೆಗೆ ಉತ್ತರ ನೀಡಬೇಕು: ಮಾರುಕಟ್ಟೆಯಲ್ಲಿ ದೊರೆಯುವ ಸ್ವಚ್ಛ ಆಹಾರ ಸಾಮಗ್ರಿಗಳನ್ನು ಕೊಳ್ಳದೆ ಮುಗ್ಗಿದ ಅಕ್ಕಿಯನ್ನೇಕೆ ಶಾಲೆಗಳಿಗೆ ಸರಬರಾಜು ಮಾಡುತ್ತಿದ್ದೀರಿ ? ಅದರಿಂದಾಗಿ ಮಕ್ಕಳು ಅಸು ನೀಗಿದ್ದಾರೆ, ಅನಾರೋಗ್ಯದಿಂದ ಆಸ್ಪತ್ರೆಗಳಿಗೆ ದಾಖಲಾಗಿದ್ದಾರೆ. ವಿಷಪೂರಿತ ಸಾರಾಯಿ ಸರಬರಾಜು ಮಾಡಿ ಕುಡುಕರನ್ನು ಸಾಯಿಸುವುದು ಅಪರಾಧವಾದರೆ ಮುಗ್ಗಿದ ಅಕ್ಕಿಯನ್ನು ಮಕ್ಕಳಿಗೆ ಉಣಿಸುವುದು ಕಡಿಮೆ ಮಟ್ಟದ ಅಪರಾಧವೆ ? ಈ ಪ್ರಜ್ಞೆ ನಮ್ಮ ಮನಸ್ಸನ್ನು ಚುಚ್ಚಬೇಡವೆ ? ಇದಕ್ಕೆಲ್ಲಾ ಯಾರು ಹೊಣೆಗಾರರೋ ಅವರನ್ನು ಗುರುತಿಸಿ ಶಿಕ್ಷಿಸಬೇಕು, ಪದಚ್ಯುತಿಗೊಳಿಸಬೇಕು, ಮಕ್ಕಳ ಸ್ವಾಸ್ಥ್ಯವನ್ನು ಕಾಪಾಡಬೇಕು.

ನಮ್ಮ ಸರ್ಕಾರ ಹತ್ತು ಮಕ್ಕಳಿಗೆ ಕುತ್ತು ತಂದರೆ ಜಯಲಲಿತಾ ಸರ್ಕಾರ ಒಂದೂವರೆ ಲಕ್ಷ ಕುಟುಂಬಗಳ ಕತ್ತು ಕುಯ್ಯುವ ಕೆಲಸ ಮಾಡುತ್ತಿದೆ. ದುರಹಂಕಾರ ಮತ್ತು ಅಧಿಕಾರದ ದುರುಪಯೋಗಕ್ಕೆ ಮಿತಿಯಿಲ್ಲವೆಂಬುದಕ್ಕೆ ಮುಷ್ಕರನಿರತ ಸರ್ಕಾರಿ ನೌಕರರನ್ನು ತಮಿಳುನಾಡು ಸರ್ಕಾರ ನಡೆಸಿಕೊಂಡಿರುವ ರೀತಿ ಒಂದು ಉದಾಹರಣೆ. ನ್ಯಾಯಾಲಯ, ಪ್ರಜಾಪ್ರಭುತ್ವ, ನಾಗರಿಕ ಹಕ್ಕುಗಳು, ಹೋರಾಟದ ಹಕ್ಕು, ಇವಕ್ಕೆಲ್ಲಾ ಮರುವ್ಯಾಖ್ಯಾನ ನೀಡಬೇಕಾದ ಸಂಭವ ಹೆಚ್ಚುತ್ತಿದೆ. ತುರ್ತು ಪರಿಸ್ಥಿತಿ ಘೋಷಿಸದಿರುವಾಗಲೂ ಇಂತಹ ಉಗ್ರ ಶಾಸನಗಳು ಹಾಗೂ ಕ್ರಮಗಳು ಜಾರಿಯಾಗುತ್ತಿವೆ. ಇದಕ್ಕೆ ವಾಜಪೇಯಿ ಸರ್ಕಾರದ ಧೋರಣೆ ಮತ್ತು ಜಾಗತೀಕರಣದ ಹುಚ್ಚು ಅಲೆ ಎರಡೂ ಸಮಾನವಾಗಿ ಪೋಷಣೆ ನೀಡುತ್ತಿವೆ. ನೌಕರರ ಹಕ್ಕೊತ್ತಾಯಗಳನ್ನು ಮಾನ್ಯ ಮಾಡಬೇಕೆ, ಬೇಡವೆ, ಎಂಬುದು ಬೇರೆಯೇ ಪ್ರಶ್ನೆ, ಆದರೆ ದುಮನಕಾರಿ ನೀತಿಯು ನಮ್ಮನ್ನು ಸರ್ವಾಧಿಕಾರ ಪಾತಕದೆಡೆಗೆ ಕೊಂಡೊಯ್ಯುತ್ತಿದೆಯೆಂಬುದನ್ನು ಗಮನಿಸಬೇಕು. ಇಂದು ತಮಿಳುನಾಡು ಸರ್ಕಾರ ಮಾಡಿರುವುದನ್ನು ನಾಳೆ ಅದ್ವಾನಿ ಸರ್ಕಾರ ಮಾಡುವುದಿಲ್ಲವೆಂಬ ಖಾತರಿಯೇನೂ ಇಲ್ಲ. ನಮ್ಮ ಗೃಹಮಂತ್ರಿಗೆ ಕೊಂಡಲಿಸ್ಸಾ - ರಮ್ಸ್‌ಫೆಲ್ಡ್ - ಪವೆಲ್ - ಬುಶ್ ಎಂಬ ದುಷ್ಟಚತುಷ್ಟಯವೇ ಆರಾಧ್ಯ ಬಣ. ಇರಾಕಿಗೆ ನಮ್ಮ ಸೈನ್ಯದ ತುಕಡಿ ಕಳಿಸಲಾಗದೆಂಬ ತೀರ್ಮಾನ ಅವರಿಗೆ ರುಚಿಸಿರಲಾರದು. ನಮ್ಮ ದೇಶವನ್ನು ಮಣಿಸುವ ಹಾಗೂ ತಣಿಸುವ ಕುತಂತ್ರ ಅಮೆರಿಕಾದಲ್ಲಿ ಈಗಾಗಲೇ ಆರಂಭವಾಗಿದೆ. ಕೋಫಿ ಅನ್ನಾನ್ ಇದಕ್ಕೆ ಚಾಲನೆ ನೀಡುವ ಕುಹಕಿ. ಇರಾಕಿನ ಜನರನ್ನು ಹಿಂಸಿಸಲಾಗುತ್ತಿದೆ, ಅಪಮಾನಕ್ಕೆ ಗುರಿಮಾಡಲಾಗುತ್ತಿದೆ. ಭಗತ್ ಸಿಂಗ್ ಪರಂಪರೆಗೆ ಸೇರಿದವರಾರೂ ಇದನ್ನು ಖಂಡಿಸದಿರುವುದಿಲ್ಲ, ಪ್ರತೀಕಾರವನ್ನು ದೂಷಿಸುವುದಿಲ್ಲ. ಅಮೆರಿಕಾದ ಬಲೆಗೆ ಬೀಳಲು ಕಾತುರರಾಗಿರುವ ಅದ್ವಾನಿ-ಜಸವಂತ ಸಿಂಗ್ - ಯಶವಂತ ಸಿನ್ಹಾ ಇದನ್ನು ಅರಿತುಕೊಂಡರೆ ನಮ್ಮ ದೇಶದ ಗೌರವ ಉಳಿಯಲು ಸಾಧ್ಯ.



ತಿಂಗಳ ಪತ್ರಿಕೆ

# ಹೊಸತು

ನಮ್ಮಿಬ್ಬರ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೫ ಸಂಚಿಕೆ - ೧ ಆಗಸ್ಟ್ ೨೦೦೩

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಚಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೦೪೮೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com


## ಸೇಂಟ್ ಜಾನ್ಸ್‌ಗೆ ಸಮಾನತೆಯ ಸಂಹಿತೆ

**ಸಂಪಾದಕೀಯ**

ಬೆಂಗಳೂರಿನ ಸೇಂಟ್ ಜಾನ್ಸ್ ವೈದ್ಯಕೀಯ ಕಾಲೇಜು ಕಳೆದ ಮೂರು ದಶಕಗಳಿಂದ ಯಾವ ಕಾನೂನಿನ ಮಿತಿಗೂ ಸಿಕ್ಕದೆ ತನ್ನದೇ ಪ್ರಭುತ್ವ ಸ್ಥಾಪಿಸಿಕೊಂಡಿದೆ. ಈ ಬಾರಿ ಕರ್ನಾಟಕ ಸರ್ಕಾರವು ಸಿ.ಇ.ಟಿ.ಯಲ್ಲಿ ಆಯ್ಕೆಯಾದ ೪೫ ವಿದ್ಯಾರ್ಥಿಗಳಿಗೆ ಆ ಕಾಲೇಜಿನಲ್ಲಿ ಪ್ರವೇಶ ಕೊಡಬೇಕೆಂದು ಆಜ್ಞೆ ಹೊರಡಿಸಿದೆ. ಹಿಂದೆಲ್ಲಾ ಈ ಕಾಲೇಜಿಗೆ ನ್ಯಾಯಾಲಯಗಳ ರಕ್ಷಣೆ ದೊರೆತು ಸ್ವೇಚ್ಛೆಯಿಂದ ವರ್ತಿಸಲು ಸಾಧ್ಯವಾಗಿತ್ತು. ಈಗ ಮತ್ತೆ ಸರ್ವೋಚ್ಚ ನ್ಯಾಯಾಲಯಕ್ಕೆ ಮನವಿ ಸಲ್ಲಿಸಲು ಕಾಲೇಜಿನ ಆಡಳಿತ ವರ್ಗ ಭರದಿಂದ ಸಿದ್ಧತೆ ನಡೆಸಿದೆ. ಇದೇ ನ್ಯಾಯಾಲಯವು ಈ ಕಾಲೇಜನ್ನು ಅನನ್ಯವೆಂದು ಘೋಷಿಸಿ ಅದಕ್ಕೆ ಯಾವುದೇ ಸರ್ಕಾರಿ ನಿಯಮ ಅನ್ವಯವಾಗಕೂಡದೆಂದು ಹಿಂದೆ ತೀರ್ಪು ನೀಡಿತ್ತು. ಈಗಿನ ಸರ್ಕಾರಿ ಆಜ್ಞೆಗೆ ಇನ್ನೇನು ಭವಿಷ್ಯ ಕಾದಿದೆಯೋ ಕಾದು ನೋಡಬೇಕು.

ಈ ಸಂಸ್ಥೆ ಅಸ್ತಿತ್ವಕ್ಕೆ ಬಂದ ಹಿನ್ನೆಲೆ ಹಾಗೂ ಆಗ ಅಂಗೀಕೃತವಾದ ನಿಯಮಗಳನ್ನು ಪರಿಗಣಿಸದೆ ಸರ್ಕಾರ ಮತ್ತು ನ್ಯಾಯಾಲಯ ಅದನ್ನು 'ಅಲ್ಪಸಂಖ್ಯಾತ' ಎಂದು ಅರ್ಹೈಸಿ ಸಂವಿಧಾನದತ್ತವಾದ ಸೌಲಭ್ಯ ನೀಡಿದುವು. ಆಮೇಲೆ ಸರ್ವಾಧಿಕಾರವನ್ನೂ ದಯಪಾಲಿಸಲಾಯಿತು. ತಾನೇ ನಡೆಸುವ ಪ್ರವೇಶ ಪರೀಕ್ಷೆಯ ಮೂಲಕ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುವುದಾಗಿ ಹೇಳುತ್ತಿದ್ದ ಕಾಲೇಜಿನಲ್ಲಿ ಅದಾವ ಚಮತ್ಕಾರದಿಂದಲೋ ಏನೋ ಆಯ್ಕೆಯಾದವರೆಲ್ಲಾ ಬಹುಮಟ್ಟಿಗೆ ಒಂದೇ ಕೋಮಿನವರು, ಒಂದೇ ರಾಜ್ಯದವರು ಆಗಿರುತ್ತಿದ್ದರು. ಅಂದರೆ, ಆ ಪರೀಕ್ಷೆ ಎಷ್ಟು ಖೋಟಾ ಎಂದು ತಿಳಿಯುತ್ತದೆ. ಬೆಂಗಳೂರು ವಿಶ್ವವಿದ್ಯಾನಿಲಯವು ಈ ಪರೀಕ್ಷೆಗಳು ಮೋಸದಿಂದ ತುಂಬಿವೆಯೆಂದು ಬಹಿರಂಗವಾಗಿಯೇ ಸಾರಿತ್ತು.

ಶಿಕ್ಷಣ ಸಂಸ್ಥೆಗಳಲ್ಲೂ ಶ್ರೇಣೀಕರಣವಿರುವುದು ನಮ್ಮ ದೇಶದ ವೈಚಿತ್ರ್ಯ. ಒಂದು ಸಾಮಾನ್ಯ ಅಲ್ಪಸಂಖ್ಯಾತ ಸಂಸ್ಥೆಗಿಂತಲೂ ಹೆಚ್ಚಿನ ಸರ್ವತಂತ್ರ ಸ್ವತಂತ್ರ ಸವಲತ್ತನ್ನು ಸೇಂಟ್ ಜಾನ್ಸ್ ಪಡೆಯಿತು. ರಾಜ್ಯ ಮತ್ತು ಕೇಂದ್ರ ಪ್ರಭುತ್ವಗಳನ್ನು ಮೀರಿ ನಿಲ್ಲುವ ಸ್ವಾಯತ್ತ ಪ್ರಭುತ್ವ ಈ ಕಾಲೇಜಿನದಾಯಿತು. ಆ ಕಾಲೇಜಿನ ಮಾನ್ಯತೆಯನ್ನು ರದ್ದು ಮಾಡಬೇಕೆಂಬ ವಿಚಾರ ಕೂಡ ವಿಶ್ವವಿದ್ಯಾನಿಲಯಕ್ಕಿತ್ತು. ಆದರೆ ನ್ಯಾಯಲಯದ ಗುರಾಣಿಯು ಎಲ್ಲ ಹೊಡೆತಗಳನ್ನೂ ಇಲ್ಲವಾಗಿಸಿತ್ತು.

ಸೇಂಟ್ ಜಾನ್ಸ್‌ನ ಡೀನ್ ಆಗಿದ್ದ ಮಾಂಟೀರೋ ಎಂಬುವರು ೧೯೬೨ರ ತಮ್ಮ ಪತ್ರದಲ್ಲಿ ಕಾಲೇಜನ್ನು ಯಾವುದೇ ಕೋಮಿನ ಉಗ್ರಾಣವಾಗದಂತೆ ನಡೆಸುವುದಾಗಿ ಸರ್ಕಾರಕ್ಕೆ ತಿಳಿಸಿದ್ದರು. ಅದು ಕ್ಯಾಥೋಲಿಕರು ನಡೆಸುವ ಕಾಲೇಜಾದರೂ ಸರ್ವಮತಸ್ಥರ ಪ್ರವೇಶಕ್ಕೆ ಅಡ್ಡಿ ಇರುವುದಿಲ್ಲವೆಂಬ ಆಶ್ವಾಸನೆ ನೀಡಲಾಗಿತ್ತು. ಮೇಜರ್ ಜನರಲ್ ಎಸ್. ಎಲ್. ಭಾಟಿಯಾ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಿದ ಮೈಸೂರು ವಿಶ್ವವಿದ್ಯಾನಿಲಯವು ಕೆಲವು ನಿಬಂಧನೆಗಳನ್ನು ಕಟ್ಟುನಿಟ್ಟಾಗಿ ಸೂಚಿಸಿತ್ತು. ಆಗಿನ್ನೂ ಬೆಂಗಳೂರು ವಿಶ್ವವಿದ್ಯಾಲಯವಿರಲಿಲ್ಲ. ಒಟ್ಟು ೮೦ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಬೇಕು, ದೇಶದ ಎಲ್ಲ ಭಾಗದವರಿಗೂ ಸಮಾನಾವಕಾಶ ಇರಬೇಕು, ಯಾವುದೇ ಒಂದು ಕೋಮಿಗೆ ಸೀಮಿತವಾಗಕೂಡದು ಮತ್ತು ಪ್ರವೇಶವನ್ನು ಅರ್ಹತೆಯ ಆಧಾರದಿಂದ ನೀಡಬೇಕು, ಎಂಬುವು ಆ ನಿಬಂಧನೆಗಳು. ಕ್ಯಾಥೊಲಿಕ್ ಕಾನ್ಫರೆನ್ಸ್ ಅದಕ್ಕೆ ಒಪ್ಪಿಗೆ ನೀಡಿತ್ತು. ದೇವರ ಪ್ರತಿನಿಧಿಯೆಂದು ಹೇಳಿಕೊಳ್ಳುವ ಚರ್ಚಿನ ಮಂದಿ ತಮ್ಮ ಆಶ್ವಾಸನೆಯನ್ನು ಮೊದಲ ವರ್ಷದಲ್ಲೇ ಸುಳ್ಳಾಗಿಸಿ ಸೈತಾನನ ಸಂತತಿಗೆ ಸೇರಿಬಿಟ್ಟರು ! ಮಾನ್ಯತೆ ಪಡೆಯಲು ಹೂಡಿದ ಆಟ ಕಣ್ಣಿಗೆ ರಾಚುತ್ತಿತ್ತು.

ಈ ಕಾಲೇಜಿಗೆ ಜಾಗ ಒದಗಿಸಲು ''ಸಾರ್ವಜನಿಕ ಹಿತಕ್ಕಾಗಿ'' ಎಂದು ಹೇಳಿ ಅಂದಿನ ಕರ್ನಾಟಕದ ಸರ್ಕಾರ ರೈತರಿಂದ ಅತ್ಯಲ್ಪ ದರದಲ್ಲಿ ೧೬೫ ಎಕರೆ ಭೂಮಿ ಸ್ವಾಧೀನಪಡಿಸಿಕೊಂಡಿತು. ರೈತರಿಗೆ ಮಾರುಕಟ್ಟೆ ಬೆಲೆ ದೊರೆಯದೆ ಅವರು ಆಸ್ತಿ ಕಳೆದುಕೊಂಡು ಕಂಗಾಲಾದರು. ಆಗಲೂ ಕಾಲೇಜು ಕೋಮು ಹಣೆಪಟ್ಟಿ ಧರಿಸಿಕೊಳ್ಳಕೂಡದೆಂಬ ಷರತ್ತನ್ನು ವಿಧಿಸಲಾಗಿತ್ತು. ಷರತ್ತನ್ನು ಉಲ್ಲಂಘಿಸಿದರೆ ಭೂಮಿಯನ್ನು ಸರ್ಕಾರ ಹಿಂದಕ್ಕೆ ಪಡೆಯಬೇಕೆಂಬ ವಿಧಿ ಭೂಮಿ ಸ್ವಾಧೀನತೆಯ ಕಾಯಿದೆಯಲ್ಲಿದೆ. ಅದರಂತೆ ಮಾಡಿದ್ದರೆ ರೈತರಿಗೆ ಭೂಮಿಯನ್ನು ವಾಪಸ್ಸು ನೀಡಬಹುದಾಗಿತ್ತು. ಈಗ ಅವರಿಗೆ ಭೂಮಿಯೂ ಇಲ್ಲ, ಮಾರುಕಟ್ಟೆ ಬೆಲೆಯೂ ಇಲ್ಲ, 'ಸಾರ್ವಜನಿಕ ಹಿತ'ಕ್ಕೆಂದು ಸ್ವಾಧೀನಕ್ಕೆ ತೆಗೆದುಕೊಳ್ಳಲಾದ ಭೂಮಿಗೆ ಸಾರ್ವಜನಿಕ ಎನಿಸಿಕೊಳ್ಳುವ ಸಂಹಿತೆಯೂ ಇಲ್ಲ ಎಂಬಂತಾಗಿದೆ. ಸರ್ಕಾರವು ಈ ಕಾಲೇಜಿಗಾಗಿ ರೈತರಿಂದ ಭೂಮಿಯನ್ನು ಸ್ವಾಧೀನ ಪಡಿಸಿಕೊಂಡು ವರ್ಗಾಯಿಸಿತು ಎಂಬುದನ್ನು ಮರೆಯಬಾರದು. ಇದರ ಮುಂದಿನ ಹಂತದಲ್ಲಿ ಈ ಕಾಲೇಜಿಗೆ ಅಮೆರಿಕಾದ ಪಿ. ಎಲ್ - ೪೮೦ರ ಅಡಿಯಲ್ಲಿ ಹನ್ನೆರಡು ಕೋಟಿಗೂ ಅಧಿಕವಾದ ಮೊತ್ತ ಮಂಜೂರಾಯಿತು. ಕೇಂದ್ರ ಸರ್ಕಾರದ ಆಜ್ಞೆಯ ಪ್ರಕಾರ ಈ ಹಣ ಪಡೆಯುವ ಸಂಸ್ಥೆ ಯಾವುದೇ ಒಂದು ಕೋಮಿನದಾಗಿರಕೂಡದೆಂಬ ನಿರ್ಬಂಧವಿತ್ತು. ಈ ಬಗ್ಗೆ ಅಂದಿನ ಕೇಂದ್ರ ಆರೋಗ್ಯ ಮಂತ್ರಿ ಕೆ. ಕೆ. ಷಾ ಅವರಿಗೆ ೧೯೭೪ರ ಜೂನ್ ೨೫ರಂದು ಮುಂಬೈನ ಆರ್ಚ್‌ಬಿಷಪ್ ಪತ್ರವೊಂದನ್ನು ಬರೆದು ಸೇಂಟ್ ಜಾನ್ಸ್ ವೈದ್ಯಕೀಯ ಕಾಲೇಜು ಸರ್ವಥಾ ಕೋಮು ಹಣೆಪಟ್ಟಿ ಧರಿಸದೆ ಎಲ್ಲರಿಗೂ ಅನ್ವಯವಾಗುವಂತೆ ನಡೆದುಕೊಳ್ಳುವುದೆಂದು ಆಶ್ವಾಸನೆ ನೀಡಿದ್ದರು. ಅಂದರೆ, ಪ್ರವೇಶವನ್ನು ಯಾವೊಂದು ಕೋಮಿನವರಿಗೂ ಮೀಸಲಿಡಲಾಗುವುದಿಲ್ಲವೆಂದು ಇದರರ್ಥ. ಈ ರೀತಿ ಒಪ್ಪಿಗೆ ನೀಡಿ ಹಣ ಪಡೆದ ಕಾಲೇಜು ರಾತ್ರೋರಾತ್ರಿ ಕ್ಯಾಥೋಲಿಕರ ಅಲ್ಪಸಂಖ್ಯಾತ ಕಾಲೇಜಾಗಿ ಪರಿವರ್ತನೆ ಹೊಂದಿತು. ಅದಕ್ಕೆ ಯಾವ ಸರ್ಕಾರವೂ ಪರವಾನಗಿ ನೀಡಿರಲಿಲ್ಲ. ಒಬ್ಬೊಬ್ಬ ವಿದ್ಯಾರ್ಥಿಯಿಂದ ಒಂದು ಲಕ್ಷದಷ್ಟು ಕ್ಯಾಪಿಟೇಷನ್ ಶುಲ್ಕ ಪಡೆಯುವುದು ಆಗ್ಗೆ ಬೇರೆ ಕಾಲೇಜುಗಳ ರೂಢಿಯಾಗಿತ್ತು. ಸೇಂಟ್ ಜಾನ್ಸ್‌ಗೆ ರೈತರ ಜಮೀನು ಮತ್ತು ಪಿ. ಎಲ್ – ೪೮೦ರ ಹಣ ಸೇರಿ ಒಮ್ಮೆಗೇ ಸುಮಾರು ೫೦ ಕೋಟಿ ರೂಪಾಯಿಗಳಷ್ಟು ಕ್ಯಾಪಿಟೇಷನ್ ಶುಲ್ಕ ದೊರೆತಂತಾಯಿತು. ''ಸಾರ್ವಜನಿಕ ಹಿತಕ್ಕಾಗಿ'' ಸ್ವಾಧೀನಕ್ಕೆ ಪಡೆದ ಜಮೀನನ್ನು ಸರ್ಕಾರದ ನಿಬಂಧನೆಗಳ ಪ್ರಕಾರ ಉಪಯೋಗಿಸದಿದ್ದರೆ ಅದನ್ನು ಸರ್ಕಾರ ಹಿಂದಕ್ಕೆ ಪಡೆಯಬೇಕೆಂಬ ನಿಯಮವಿದೆ. ಹಾಗೆ ಮಾಡಿದ್ದರೆ ಜಮೀನು ಮತ್ತೆ

ರೈತರಿಗೆ ಹಿಂದಿರುಗಿಸಬಹುದಿತ್ತು. ಎಲ್ಲ ನಿಯಮಗಳನ್ನೂ ಗಾಳಿಗೆ ತೂರುತ್ತಿದ್ದ ಕಾಲೇಜಿಗೆ ಸರ್ಕಾರ ಮತ್ತು ನ್ಯಾಯಾಲಯ ತೋರಿಸಿದ್ದು ಹಸಿರು ಬಾವುಟವನ್ನು. ಇದೊಂದು ಅಕ್ಷಮ್ಯ ಅಪರಾಧ.

ತನ್ನ ಮನಬಂದಂತೆ ವರ್ತಿಸುತ್ತಿದ್ದ ಕಾಲೇಜು ಇತ್ತೀಚೆಗೆ ಖಾಲಿ ಜಮೀನಿನ ಮೇಲಿನ ತೆರಿಗೆಯನ್ನು ಪಾವತಿ ಮಾಡದೆ, ಅದನ್ನು ಬಹುಮಹಡಿ ವಸತಿ ನಿರ್ಮಿಸುವ ಖಾಸಗಿ ಕಂಪನಿಯೊಂದಕ್ಕೆ ವಿಪರೀತ ಬೆಲೆಗೆ ಮಾರಾಟ ಮಾಡಿದೆ. ಅದರಲ್ಲಿ ಒಂದು ಚಿಕ್ಕಾಸೂ ನಮ್ಮ ರೈತರಿಗೆ ದೊರೆಯುವುದಿಲ್ಲ. ಇದು ಕಾನೂನು ಬಾಹಿರ ವ್ಯವಹಾರ. ಅದು ಸರ್ಕಾರಕ್ಕೆ ತಿಳಿದಿದೆ. ಆದರೆ ತಿಮಿಂಗಿಲ ಸಖ್ಯವನ್ನು ಆಹ್ವಾನಿಸುವ ಸರ್ಕಾರ ಕಣ್ಣು ಮುಚ್ಚಿ ಕೂತಿದೆ, ಮಧ್ಯವರ್ತಿಗಳ ಕುತಂತ್ರದಿಂದ ಮಾರಾಟ ಮಾಡಲು ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ಇನ್ನಷ್ಟು ಖಾಲಿ ಪ್ರದೇಶದಲ್ಲಿ ವ್ಯಾಪಾರ ಸಂಕೀರ್ಣವೊಂದರ ರಚನೆಗೆ ಸೆಂಟ್ ಜಾನ್ಸ್ ಮುನ್ನುಗ್ಗಿದೆ. ಕಾಲೇಜು ಮತ್ತು ಆಸ್ಪತ್ರೆ ನಡೆಸುವುದಾಗಿ ಹೇಳಿ ಭೂಮಿಯನ್ನು ಹೆಚ್ಚುಕಡಿಮೆ ಬಿಟ್ಟಿಯಾಗಿ ಪಡೆದ ಸಂಸ್ಥೆ ನಡೆದುಕೊಂಡಿರುವ ರೀತಿ ಪೂರ್ತಿ ಅನೈತಿಕವಾದದ್ದು. ಇಡೀ ಸಂಸ್ಥೆಯನ್ನು ಸರ್ಕಾರ ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳಬೇಕಾದ ಸಂದರ್ಭ ಇದು. ಅದು ಸರ್ಕಾರಕ್ಕೂ ಬೇಕಿಲ್ಲ, ನ್ಯಾಯಾಲಯಕ್ಕೂ ಬೇಕಿಲ್ಲ. ಹೊಟ್ಟೆಯ ಮೇಲೆ ತಣ್ಣೀರು ಬಟ್ಟೆ ಹಾಕಿಕೊಂಡ ರೈತ ಇದನ್ನೆಲ್ಲಾ ನೋಡಿ ಎಷ್ಟು ಕ್ರುದ್ಧನಾಗಿರಬೇಕು, ಹತಾಶನಾಗಿರಬೇಕು !

ಈ ಹಿನ್ನೆಲೆಯಲ್ಲಿ ಸರ್ಕಾರದ ಈಗಿನ ಆಜ್ಞೆ ಸ್ವಾಗತಾರ್ಹವಾದ್ದು, ಸಮಯೋಚಿತವಾದ್ದು. ಎಲ್ಲರಿಗೂ ಒಂದು ಕಾನೂನು, ಸೆಂಟ್ ಜಾನ್ಸ್‌ಗೆ ಬೇರೆ ಕಾನೂನು ಎಂಬ ನಿಲುವು ಸರ್ವಥಾ ದುಷ್ಟವಾದ್ದು. ಹಿಟ್ಟಿಗೆ ಮಾಡಿದ ಗೊಜ್ಜು ಹುಗ್ಗಿಗೂ ಆಗಬೇಕಾದ್ದು ಸಹಜ. ಶಿಕ್ಷಣ ಸಂಸ್ಥೆಗಳಿಗೆ ಸಮಾನ ಸಂಹಿತೆ ಇರಬೇಕೆನ್ನುವುದು ನಮ್ಮ ಸಂವಿಧಾನದ ಇಂಗಿತ. ಅದು ನ್ಯಾಯಾಲಯಕ್ಕೂ ವೇದ್ಯವಾಗಬೇಕು. ಸರ್ಕಾರದ ಆಜ್ಞೆಯಂತೆ ಸಿ.ಇ.ಟಿ.ಯಲ್ಲಿ ಆಯ್ಕೆಯಾದ ೪೫ ವಿದ್ಯಾರ್ಥಿಗಳಿಗೆ ಪ್ರವೇಶ ನೀಡದಿದ್ದರೆ ಸೆಂಟ್ ಜಾನ್ಸ್‌ನ ಮಾನ್ಯತೆಯನ್ನು ರದ್ದುಮಾಡಿ ಸರ್ಕಾರವೇ ನೀಡಿದ್ದ 'ಉಂಬಳಿ'ಯನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳಬೇಕು ಮತ್ತು ಕಾಲೇಜನ್ನು ನಿಜವಾದ ಸಾರ್ವಜನಿಕ ಸಂಸ್ಥೆಯನ್ನಾಗಿ ಮುನ್ನಡೆಸಬೇಕು. ಈ ಪ್ರಕ್ರಿಯೆಗೆ ನ್ಯಾಯಾಲಯದಿಂದ ಯಾವ ತೊಡಕೂ ಬರಬೇಕಾಗಿಲ್ಲ; ಏಕೆಂದರೆ, ಅಂಗೀಕೃತ ನಿಯಮಗಳನ್ನು ಸೆಂಟ್ ಜಾನ್ಸ್ ಉಲ್ಲಂಘಿಸಿರುವುದು ಸೂರ್ಯಸ್ಪಷ್ಟ. ಆ ಕಾಲೇಜು ಅಲ್ಪಸಂಖ್ಯಾತ ಸಂಸ್ಥೆಯಲ್ಲ; ಹಾಗೆಂದು ಆರಂಭದಲ್ಲಿ ಕಾಲೇಜಿನ ಆಡಳಿತ ವರ್ಗ ಮುಚ್ಚಳಿಕೆ ಬರೆದುಕೊಟ್ಟಿದೆ.

## ಸೇತುರಾವ್ - ಭೀಷಮ್ ಸಾಹ್ನಿ

**'ಹೊಸತು'** ಸಮಾಲೋಚಕ ಮಂಡಲಿಯ ಸದಸ್ಯ ಪ್ರೊ॥ ಎಂ. ಎ. ಸೇತುರಾವ್ ಮತ್ತು ಪತ್ರಿಕೆಯ ಹಿರಿಯ ಮಿತ್ರರಾಗಿದ್ದ ಪ್ರೊ॥ ಭೀಷಮ್ ಸಾಹ್ನಿ ತೀರಿಕೊಂಡಿದ್ದಾರೆ. ಇಬ್ಬರೂ ತಮ್ಮ ಲೇಖನಗಳ ಮೂಲಕ ಓದುಗರಿಗೆ ಪರಿಚಿತರೇ. ಸೇತುರಾಯರು ರಸಾಯನಶಾಸ್ತ್ರ ಪ್ರಾಧ್ಯಾಪಕರಾದರೆ ಭೀಷಮ್ ಸಾಹ್ನಿ ಇಂಗ್ಲಿಷ್ ಪ್ರಾಧ್ಯಾಪಕರು. ಒಬ್ಬರು ಬೆಂಗಳೂರಿನವರು, ಇನ್ನೊಬ್ಬರು ದೆಹಲಿಯವರು. ವೈಜ್ಞಾನಿಕ ಮನೋಭಾವವನ್ನು ಎಲ್ಲರೂ ಮೈಗೂಡಿಸಿಕೊಳ್ಳಬೇಕೆಂಬ ಆಶಯದಿಂದ ಸೇತುರಾಯರು ಅವಿರತವಾಗಿ ದುಡಿದವರು, ಸ್ವಾತಂತ್ರ್ಯ ಹೋರಾಟಗಾರರಾಗಿ ಅಂದಿನ ಆಶಯಗಳನ್ನು ಮೂಲೆಗೊತ್ತದೆ ಮೌಲಿಕವಾಗಿ ಜೀವನ ನಡೆಸಿದವರು. ಮಾರ್ಕ್ಸ್‌ವಾದಿ ಸೈದ್ಧಾಂತಿಕ ವಿಷಯಗಳಲ್ಲಿ ನಿಷ್ಣಾತರಾಗಿದ್ದ ಶ್ರೀಯುತರು ತಮ್ಮೆಲ್ಲ ಕ್ಷೇತ್ರಗಳಲ್ಲೂ ಸುಸಂಗತವಾದ ವಿಶ್ಲೇಷಣಾ ವಿಧಾನವನ್ನು ರೂಢಿಸಿಕೊಂಡುದಲ್ಲದೆ ಅತ್ಯಂತ ಚುರುಕಿನ ಕ್ರಿಯಾಶೀಲರಾಗಿದ್ದರು. ಚಿಂತನೆ ಮತ್ತು ಕ್ರಿಯೆ ಇವರಲ್ಲಿ ಹಸನಾಗಿ ಬೆರೆತಿದ್ದುದು ಅವರ ವ್ಯಕ್ತಿತ್ವಕ್ಕೆ ವಿಶೇಷ ಮೆರುಗನ್ನು ನೀಡಿತ್ತು. ಆ ಕಾರಣದಿಂದಲೇ ಚಳುವಳಿಗಳಲ್ಲಿ ಅವರು ಮಾರ್ಗದರ್ಶಿಯಾಗಿದ್ದರು, ಮಾದರಿಯಾಗಿದ್ದರು. ಸಾಹಿತ್ಯ, ಸಂಗೀತ, ಚಿತ್ರಕಲೆ, ಹೀಗೆ ಎಲ್ಲದರಲ್ಲೂ ಅಪಾರ ಆಸಕ್ತಿಯನ್ನು ಬೆಳೆಸಿಕೊಂಡಿದ್ದ ಸೇತುರಾಯರು ವಿಶಾಲ ದೃಷ್ಟಿಯ ಹಾಗೂ ಆಳವಾದ ಪಾಂಡಿತ್ಯದ ಸಹೃದಯರಾಗಿದ್ದರು. ಅವರಿಗೆ 'ಹೊಸತು' ತನ್ನ ಗೌರವ ಸಮರ್ಪಿಸುತ್ತದೆ.

ಸೇತುರಾಯರಂತೆ ಭೀಷಮ್ ಸಾಹ್ನಿ ಸಹ ಸ್ವಾತಂತ್ರ್ಯ ಹೋರಾಟಗಾರರು. ಅವರು ಜನಿಸಿದ್ದು ಇಂದಿನ ಪಾಕಿಸ್ತಾನದ ರಾವಲ್ಪಿಂಡಿಯಲ್ಲಿ. ೧೯೪೭ರಲ್ಲಿ ಸ್ವಾತಂತ್ರ್ಯ ಬರಲು ಕೇವಲ ಮೂರು ದಿನಗಳು ಉಳಿದಿದ್ದಾಗ ಸಾಹ್ನಿ ಆ ಊರು ಬಿಟ್ಟು ದೆಹಲಿಯತ್ತ ಓಟ ಕಿತ್ತರು. ತಾಯಿ ಮತ್ತು ತಂಗಿ ಆಗಷ್ಟೇ ಶ್ರೀನಗರ ತಲುಪಿದ್ದರು. ಅಣ್ಣ ಬಲರಾಜ್ ಸಾಹ್ನಿ ಮುಂಬೈ ಸೇರಿದ್ದರು. ತಂದೆ ಮಾತ್ರ ರಾವಲ್ಪಿಂಡಿಯಲ್ಲೇ ಉಳಿದರು. ದೇಶದ ಇಬ್ಭಾಗವೆಂದರೆ ಜನರೆಲ್ಲಾ ಇತ್ತಣಿಂದತ್ತ ಅತ್ತಣಿಂದಿತ್ತ ವರ್ಗಾವಣೆ ಮಾಡಿಕೊಳ್ಳುವುದಲ್ಲವೆಂದು ಅವರ ದೃಢವಾದ ನಂಬಿಕೆ. ಆಮದು ವಹಿವಾಟಿನಲ್ಲಿದ್ದ ಅವರು ಕೊನೆಗೂ ರಾವಲ್ಪಿಂಡಿ ಬಿಡಬೇಕಾಯಿತು. ಟರ್ಕಿ ಟೋಪಿಯೊಂದನ್ನು ಧರಿಸಿ ಖಾಸಗಿ ವಾಹನವೊಂದರಲ್ಲಿ ಪಯಣಿಸಿದ ಅನುಭವ ಅವರೊಬ್ಬರದೇನೂ ಆಗಿರಲಿಲ್ಲ. ಭೀಷಮ್ ಸಾಹ್ನಿ ಕಾಲೇಜು ಅಧ್ಯಾಪಕರಾದರು, ಭಾಷಾಂತರಕಾರರಾದರು, ಉದ್ದಾಮ ಸಾಹಿತಿಗಳಾದರು, ಉತ್ತಮ ನಟರಾದರು, ನಿಷ್ಠಾವಂತ ಸಿದ್ಧಾಂತಿಯಾದರು, ಕೋಮುಸಾಮರಸ್ಯದ ನೇತಾರರಾದರು. ಮೊದಲಿಗೆ ತಂದೆಯ ಜೊತೆ ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿದ್ದ ಭೀಷಮ್ ಕ್ರಮೇಣ ಕಾಂಗ್ರೆಸ್ ಪಕ್ಷ ಸೇರಿದಾಗ ತಂದೆ ಹೇಳಿದ್ದು 'ನೀವು ಚರಖಾ ತಿರುಗಿಸುವುದರಿಂದ ಬ್ರಿಟಿಷರು ಓಡಿಹೋಗುವುದಿಲ್ಲ' ಎಂದು. ಹತ್ತು ವರ್ಷ ರಾವಲ್ಪಿಂಡಿ ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯಕರ್ತರಾಗಿದ್ದ ಭೀಷಮ್ ಕೇವಲ ಚರಖಾ ತಿರುಗಿಸುತ್ತಿರಲಿಲ್ಲ; ಜನರ ಮನಸ್ಸಿನ ಕತ್ತಲನ್ನು ನಿವಾರಿಸುವುದು ಅವರ ಗುರಿಯಾಗಿತ್ತು. ತಮ್ಮ ಇಡೀ ಜೀವನವನ್ನು ಇದಕ್ಕಾಗಿ ಮೀಸಲಿರಿಸಿ ದುಡಿದ ಭವ್ಯ ವ್ಯಕ್ತಿತ್ವ ಭೀಷಮ್ ಸಾಹ್ನಿಯವರದು. ನಮ್ಮ ಸದ್ಯದ ಪರಿಸ್ಥಿತಿಯಲ್ಲಿ ಕತ್ತಲು ಇನ್ನೂ ಗಾಢವಾಗುವ ಸೂಚನೆಗಳಿವೆ. ಸಾಹ್ನಿಯವರಿಗೆ ಗೌರವ ಸಲ್ಲಿಸುತ್ತಾ 'ಹೊಸತು' ಮತ್ತೆ ತಮಸ್ಸಿನಿಂದ ಜ್ಯೋತಿಯೆಡೆಗೆ ಕ್ರಮಿಸುವ ತನ್ನ ನಿಷ್ಠೆಯನ್ನು ಪುನರುಚ್ಚರಿಸುತ್ತದೆ.


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ







*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯ ☏ :೨೨೫೧೩೮೦೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☏ :೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☏ :೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☏ : ೪೨೪೩೦೨




ಪ್ರಗತಿಪರ ವಿಚಾರಧಾರೆ, ಹೊಸ ಹೊಸ ಚಿಂತನೆ ಹಾಗೂ ಮೆದುಳಿಗೆ ಮೇವು ಕೊಟ್ಟು ಮೆಲುಕು ಹಾಕಲು ಪತ್ರಿಕೆ ಸಹಕಾರಿಯಾಗುತ್ತಿದೆ. ಇನ್ನೂ ಹೆಚ್ಚಿನ ಹೊಸ ವಿಚಾರ, ಮೌಲಿಕ ಚಿಂತನೆಗಳೊಂದಿಗೆ ಪತ್ರಿಕೆ ಹೊರ ಬರಲೆಂದು ಹಾರೈಸುತ್ತೇನೆ.

*ಬೀದರ* **ಚಂದ್ರಪ್ಪ ಹೆಬ್ಬಾಳಕರ್**

ಶಶಿಕಲಾ ಬೆಳಗಲಿ ಅವರ 'ಗ್ರಾಮೀಣ ಮಹಿಳೆಯ ಕಣ್ಣೀರಿನ ಕಥೆ' ಕಣ್ತೆರೆಸುತ್ತದೆ. ಈ ದೇಶದಲ್ಲಿರುವ ಒಟ್ಟು ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರ ಸ್ಥಿತಿ ಏನಾಗಿದೆ ? ಸ್ವಾತಂತ್ರ್ಯ ಬಂದು ಐವತ್ತು ವರ್ಷ ಕಳೆದರೂ ಎರಡು ಹೊತ್ತಿನ ಕೂಳಿಗಾಗಿ ಮಹಿಳೆಯರು ತಮ್ಮ ಆತ್ಮ ಗೌರವವನ್ನೇ ಒತ್ತೆ ಇಡಬೇಕಾದಂತಹ ಪರಿಸ್ಥಿತಿ ಬಂದಿದೆ. ಈ ಬಗ್ಗೆ ನಮ್ಮ ಈಗಿನ ಸರ್ಕಾರಗಳು ಚಿಂತಿಸುತ್ತಿಲ್ಲ. ಇದೊಂದು ಪ್ರಜಾಪ್ರಭುತ್ವದ ವ್ಯಂಗ್ಯವೇ ಸರಿ !

ಕಾಪರಹಳ್ಳಿ **ಜಡೇಕುಂಟೆ ಮಂಜುನಾಥ**

ಸೀತೆ, ಅಹಲ್ಯೆ... ಡಾ॥ ಸಂಜೀವ ಕುಲಕರ್ಣಿಯವರ ಗಂಭೀರ ಲೇಖನದಲ್ಲಿರುವ ಕೊರತೆಯೆಂದರೆ ನಮ್ಮ ಶತಮಾನದ ಸಾಮಾಜಿಕ ಮೌಲ್ಯದ ದೃಷ್ಟಿಯಿಂದ ಐತಿಹಾಸಿಕ, ಪೌರಾಣಿಕ ಘಟನೆಗಳನ್ನು ತೂಗಿ ನೋಡುವುದು. ಸಾಮಾಜಿಕ ಮೌಲ್ಯಗಳು ಕಾಲಕಾಲಕ್ಕೆ ಬದಲಾಗುತ್ತವೆಂದು ಸ್ವತಃ ಲೇಖಕರೇ ಸೂಚಿಸಿದ್ದಾರೆ. ಕೆಲವು ಮಾತೃಪ್ರಧಾನ ಪಂಗಡಗಳಲ್ಲಿ ಹೆಣ್ಣಿನ ಶೀಲಕ್ಕೆ ಅಷ್ಟು ಮಹತ್ವ ನೀಡಿಲ್ಲದಿರಬಹುದು. ಅದು ಬಿಟ್ಟರೆ ಅದಕ್ಕೆ ಮಹತ್ವ ಎಲ್ಲ ಸಂಸ್ಕೃತಿಗಳಲ್ಲೂ ಇದೆ.

*ಡೊಂಬಿವಲಿ (ಪೂರ್ವ) ಮುಂಬೈ* ***ಹ. ಶ್ರೀ. ಆಡೂರ***

## ಮಾರ್ಕ್ಸ್‌ನ ಅಧ್ಯಯನ ಇಂದು ಅಗತ್ಯವೆ ?

ಮಾರ್ಕ್ಸ್‌ನ ಅಧ್ಯಯನ ಇಂದು ಖಂಡಿತ ಅಗತ್ಯವಿದೆ ಎಂಬುದರಲ್ಲಿ ಯಾವುದೇ ಅನುಮಾನ ಪಡಬೇಕಾಗಿಲ್ಲ. ಇಂದು ನಾವು ಮಾರ್ಕ್ಸ್‌ರವರ ಸಿದ್ಧಾಂತವನ್ನು ಎಲ್ಲೆಡೆ ಪ್ರಚಾರ ಮಾಡುವುದು ಅಗತ್ಯ. ವಿಚಾರಗಳು ಹರಡಿದಂತೆ ಮಾರ್ಕ್ಸ್‌ರ ಅಧ್ಯಯನದ ಮಹತ್ವ ಜನರಿಗೂ ಮನವರಿಕೆಯಾಗುತ್ತದೆ. ಈ ಲೇಖನವನ್ನು ಸಂಗ್ರಹಿಸಿ ಕನ್ನಡಕ್ಕೆ ಅನುವಾದಿಸಿ ತಿಳಿಸಿಕೊಟ್ಟ ಜಿ. ಆರ್. ಅವರಿಗೆ ಅಭಿನಂದನೆಗಳು.

ಹೊನ್ನಾಯ್ಕನಹಳ್ಳಿ ***ನೆಲ್ಲೂರ ಕೆ. ಹನುಮೇಗೌಡ***

ಶ್ರೀ ರಂಗರಾಜ ವನದುರ್ಗ ಅವರು ಬರೆದ 'ದಲಿತರ ಚರಿತ್ರೆಯ ಆಕರಗಳು' ಲೇಖನ ಬಹಳ ಮಾರ್ಮಿಕವಾಗಿ ಮೂಡಿಬಂದಿದೆ. ಆರಂಭದಿಂದಲೂ ಅಗ್ರಹಾರ ಸಂಸ್ಕೃತಿಯ ವಶದಲ್ಲಿರುವ ಆಕರಗಳು ಕೆಲ ಶೂದ್ರ ಸಮುದಾಯಗಳನ್ನು ಚರಿತ್ರೆಯಿಂದ ದೂರವೇ ದಬ್ಬಿದವು ಎನ್ನುವುದು ದಲಿತ ಪರ ಧೋರಣೆಯ ಅನುಕಂಪದ ನುಡಿ. ನಮ್ಮ ಪುರಾಣ ಗ್ರಂಥಗಳಲ್ಲಿ ಬೂದಿ ಮುಚ್ಚಿದ ಕೆಂಡದಂತೆ ಇಂತಹ ಸತ್ಯಗಳು ಮರೆಯಾಗಿರುವುದು ನಿಜಕ್ಕೂ ಐತಿಹಾಸಿಕ ವಿಪರ್ಯಾಸವೇ ಸರಿ.

ಶ್ರೀ ಜಿ. ರಾಮಕೃಷ್ಣರವರ ಸಂಪಾದಕೀಯ ಲೇಖನ ದೇಶದ ಹಾಗೂ ರಾಜ್ಯದ ಈಗಿನ ಪ್ರಚಲಿತ ಸಮಸ್ಯೆಗಳಿಗೆ ಹಿಡಿದ ಕನ್ನಡಿಯಾಗಿದೆ.

ಕೊಪ್ಪಳ **ಶಂಕರ ಕೆ. ಪತ್ತಾರ**

ಜುಲೈ ೦೩ – ಹೊಸತು ಸಂಚಿಕೆಯಲ್ಲಿ ಸ್ವಾ. ವೀ. ಸಾವರ್ಕರ್‌ರ ಕ್ಷಮಾ ಯಾಚನೆಯ ಕುರಿತು ನಡೆದ ಪತ್ರವ್ಯವಹಾರ ಉದ್ಧರಿಸಿರುವ ಉದ್ದೇಶ ಕಣ್ಣು ರಾಚುವಂತಿದೆ. ಸಾವರ್ಕರ್‌ರವರು ಮಾಡಿದ್ದ ಈ ಮನವಿಯ ಹಿನ್ನೆಲೆ-ಮುನ್ನೆಲೆಯ ಯೋಚನೆ ಮಾಡದೇ ಇದ್ದರೆ, ಅವರೊಬ್ಬ ಹೇಡಿಯಾಗಿದ್ದರು ಎಂಬ ನಿಷ್ಕರ್ಷೆಗೆ ಆಸ್ಪದವಾದೀತು. ಆದರೆ ಅವರ ಬದುಕಿನ ಸಮಗ್ರ ಅವಲೋಕನಗೈದಲ್ಲಿ ಕೇವಲ ಅಪರಿಹಾರ್ಯವಾಗಿ ಈ ತಂತ್ರವನ್ನು ಅವರು ಬಳಸಲೇಬೇಕಾಗಿತ್ತು ಎಂಬುದು ಸಾರಾಸಾರ ವಿಚಾರ ಮಾಡುವವರಿಗೆ ಅರಿವಾಗದಿರದು.

*ಬೆಳಗಾಂ* **ಅನಂತ ಕಲ್ಲೋಳ**




### ಪ್ಲೇವಿನ್ ಪ್ರಭಾವ

ಸಂಖ್ಯೆಗಳ ಜೊತೆಗೆ
ಅನುದಿನದ ಸರಸ
ಕೊನೆಗೊಮ್ಮೆ ತಂದಿತು
ಎಲ್ಲರೊಂದಿಗೆ ವಿರಸ
ನಾಶಪಡಿಸಿತು ಬದುಕಿನ
ಸಮರಸ

ಮಂಡ್ಯ **ಎನ್. ಶ್ರೀನಿವಾಸ್**



### ಸಾವರ್ಕರ್ ಪತ್ರಗಳು

ಮಾನ್ಯರೆ :

ಕೊಹಾಟ್‌ನಲ್ಲಿ ಜರುಗಿದ ದೊಂಬಿಯ ವಿಷಯವಾಗಿ 'ಮರಾಠಾ' ಪತ್ರಿಕೆಯಲ್ಲಿ ಬಂದ ಲೇಖನದ ಬಗ್ಗೆ ತಾವು ದಿನಾಂಕ ಮೇ ೬ ರಂದು ಬರೆದ ಪತ್ರ ನನಗೆ ತಲುಪಿತು. ಸರ್ಕಾರದ ಪ್ರಕೃತ ಧೋರಣೆಗಳ ಬಗ್ಗೆ – ಅರ್ಥಾತ್, ಆಂತರಿಕ ಅಥವಾ ಅಂತಾರಾಷ್ಟ್ರೀಯ ವಿಚಾರಗಳಿಗೆ ಸಂಬಂಧಿಸಿದಂತೆ ಸರ್ಕಾರದ ಯಾವುದೇ ಧೋರಣೆಯ ಬಗ್ಗೆ, ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಆಗಲಿ ನಾನು ಭಾಗವಹಿಸತಕ್ಕದ್ದಲ್ಲ ಎಂಬ ಷರತ್ತನ್ನು ನಾನು ಅರ್ಥಮಾಡಿಕೊಂಡಿದ್ದನ್ನು ಈಗ ಬದಲಾಯಿಸುವಂತೆ ಮಾಡಿದೆ. ನಾನು ತಿಳಿದುಕೊಂಡ ಅರ್ಥದ ಬೆಳಕಿನಲ್ಲಿ ನಾನು ನನ್ನ ಸಾರ್ವಜನಿಕ ಚಟುವಟಿಕೆಗಳ ಮಾರ್ಗದರ್ಶಿಯೆಂದು ಭಾವಿಸಿ ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದೇನೆ. ಆದರೆ ಈ ಆಜ್ಞೆಯು (ಸರ್ಕಾರ ವಿಧಿಸಿದ) ಷರತ್ತನ್ನು ಇನ್ನೂ ಸೀಮಿತ ಅರ್ಥದಲ್ಲಿ ತಿಳಿಯಬೇಕೆಂದು ನನ್ನನ್ನು ಒತ್ತಾಯಿಸುತ್ತದೆ.

ಈ ಹೊಸ ಆಜ್ಞೆಯ ದೃಷ್ಟಿಯಲ್ಲಿ ನನ್ನ ನಿಲುಮೆಯನ್ನು ಆ ಪರಿಮಿತಿಗೆ ಒಳಪಡಿಸಿಕೊಳ್ಳಲು ಪ್ರಯತ್ನಿಸುತ್ತೇನೆ. ಈ ಆಜ್ಞೆಯು ಮೇ ೮ನೇ ತಾರೀಖು ನನ್ನ ಕೈ ಸೇರಿತು. ಆ ದಿನಾಂಕಕ್ಕಿಂತ ಹಿಂದೆ ಬರೆದ ಲೇಖನಗಳನ್ನು, ಭಾಷಣಗಳನ್ನು ಈ ಆಜ್ಞೆಗೆ ಒಳಪಟ್ಟಿವೆ ಎಂದೇ ಬಗೆಯಬೇಕೆಂದು ನಾನು ಅತ್ಯಂತ ದೀನನಾಗಿ ಬೇಡಿಕೊಳ್ಳುತ್ತೇನೆ. ಯಾಕೆಂದರೆ ಅವು (ಲೇಖನ ಮತ್ತು ಭಾಷಣಗಳು) ನನ್ನ ಬಿಡುಗಡೆಯ ಷರತ್ತುಗಳನ್ನು ನಾನು ಮೊದಲು ನೇರವಾಗಿ ಮತ್ತು ಸಹಜವಾಗಿ ಹೇಗೆ ಅರ್ಥೈಸಿದ್ದೇನೆಯೋ, ಅದರ ಮಾರ್ಗಸೂಚಿಯಂತೆ ಮಾಡಲಾಗಿತ್ತು. ನಿಮ್ಮ ಪತ್ರ ತಲುಪಿದ ದಿನಾಂಕದ ತರುವಾಯ ನನ್ನ ಎಲ್ಲ ಚಟುವಟಿಕೆಗಳೂ ಈಗ ನೀವು ಮಾಡಿದ ಅರ್ಥಕ್ಕೆ ಒಳಪಟ್ಟೇ ಇರುತ್ತವೆ.

೧.೩.೧೯೨೫ ಸ್ವಾಮಿ, ನಿಮ್ಮ ಅತ್ಯಂತ ಆಜ್ಞಾಧಾರಕ ಸೇವಕನಾಗಿರುವ ಗೌರವ ನನ್ನದಾಗಿರುವ

– (ಸಹಿ) **ವಿ. ಡಿ. ಸಾವರಕರ**

ಆರ್ಥರ್ ರೋಡ್ ಕಾರಾಗೃಹ,
ಬೊಂಬಾಯಿ ದಿ : ೨೨-೨-೧೯೪೮

ಗೆ,
ಪೊಲೀಸ್ ಕಮಿಷನರ್, ಬೊಂಬಾಯಿ

ಮಾನ್ಯರೇ :

ನಿಮ್ಮ ನಂ ೧೨೦೨ - ೧೯೪೮ರ ನೋಟಿಸು ಮೊನ್ನೆ ತಲುಪಿತು

(೧)..........
(೨).........
(೩)ಕೊನೆಯದಾಗಿ, ನಾನೀಗ ೬೫ ವರ್ಷದಲ್ಲಿದ್ದೇನೆಂದು ತಿಳಿಸಲು ಭಿನ್ನೈಸುತ್ತೇನೆ. ಕಳೆದ ಮೂರು ವರ್ಷಗಳಿಂದ ಹೃದಯ ವೇದನೆ ಮತ್ತು ದೌರ್ಬಲ್ಯದಿಂದ ಆಗಾಗ ಹಾಸಿಗೆ ಹಿಡಿದಿದ್ದೇನೆ. ಆಗಸ್ಟ್ ೧೫ರಂದು ನಾನು ನಮ್ಮ ನೂತನ ರಾಷ್ಟ್ರಧ್ವಜವನ್ನು ಒಪ್ಪಿಕೊಂಡು ನಮ್ಮ ಮನೆಯ ಮಾಳಿಗೆಯ ಮೇಲೆ ಹಾರಿಸಿದೆ – ಅದರಿಂದ ನನ್ನ ಕೆಲವು ಜನ ಹಿಂಬಾಲಕರಿಗೆ ಮುಜುಗರ ಎನಿಸಿದರೂ ಕೂಡ.

ತತ್ಪರಿಣಾಮವಾಗಿ, ಎಲ್ಲ ಸಂಶಯ ನಿವಾರಣೆ ಮಾಡಲು ಮತ್ತು ಮೇಲೆ ಕಾಣಿಸಿದ ನನ್ನ ಮನವಿಯ ಸಮರ್ಥನೆಗಾಗಿ, ನನ್ನನ್ನು ಬಿಡುಗಡೆ ಮಾಡಿದ ಪಕ್ಷದಲ್ಲಿ, ಸರ್ಕಾರವು ಬಯಸಿದಷ್ಟು ಕಾಲಾವಧಿಯಲ್ಲಿ ನಾನು ಯಾವುದೇ ಬಗೆಯ ಮತೀಯ ಅಥವಾ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುವುದಿಲ್ಲ ಎಂದು ಸರ್ಕಾರಕ್ಕೆ ಮುಚ್ಚಳಿಕೆ ಬರೆದುಕೊಡಲು ಸಿದ್ಧನಿದ್ದೇನೆ.

– (ಸಹಿ) **ವಿ. ಡಿ. ಸಾವರಕರ**

# ಕಸದ ವಿಲೇವಾರಿ

ಇತ್ತೀಚಿನ ವರ್ಷಗಳಲ್ಲಿ ಎಲ್ಲ ಊರುಗಳಲ್ಲಿಯೂ, ಎಲ್ಲ ದೇಶಗಳಲ್ಲಿಯೂ ಸರಕಾರಗಳನ್ನು ಮತ್ತು ಜನರನ್ನು ಕಾಡುತ್ತಿರುವ ಸಾಮಾನ್ಯ ಸಮಸ್ಯೆ ಎಂದರೆ ಕಸದ ವಿಲೇವಾರಿ. ನಮ್ಮೂರ ಪಂಚಾಯತಿಯಿಂದ ಹಿಡಿದು ದೆಹಲಿಯ ಮಹಾನಗರಪಾಲಿಕೆಯವರೆಗೂ ಈ ಸಮಸ್ಯೆ ಇದೆ. ವಿದೇಶಗಳಲ್ಲಿಯೂ ಇದು ಕೆಲವರ್ಷಗಳಿಂದ ತೀವ್ರ ಸಮಸ್ಯೆಯನ್ನೊಡ್ಡುತ್ತಿದೆ. ನಮ್ಮ ಮನೆಗಳಲ್ಲಿ ಸಂಗ್ರಹವಾದ ಕಸವನ್ನು ಒಟ್ಟುಗೂಡಿಸಿ ಪುರಸಭೆಯವರು ರಸ್ತೆಯ ಮೂಲೆಯಲ್ಲಿಟ್ಟಿರುವ ತೊಟ್ಟಿಗೆ ಹಾಕಿ ಬಂದುಬಿಡುತ್ತೇವೆ. ಅಥವಾ ಹೆಚ್ಚಿನ ಸಂದರ್ಭಗಳಲ್ಲಿ ಮನೆಯ ಕಸವನ್ನು ರಸ್ತೆಗೋ, ಚರಂಡಿಗೋ ಚೆಲ್ಲುತ್ತೇವೆ. ಪುರಸಭೆಯವರು (ಯಾವುದೇ ಊರಾದರೂ ಅನುಕೂಲಕ್ಕಾಗಿ ಪುರಸಭೆ ಎನ್ನಲಾಗಿದೆ) ಇವನ್ನೆಲ್ಲ ವಾರಕ್ಕೊಮ್ಮೆಯೋ, ತಿಂಗಳಿಗೊಮ್ಮೆಯೋ ಕಸದ ಲಾರಿಗಳಲ್ಲಿ ತುಂಬಿಕೊಂಡು ಹೋಗುತ್ತಾರೆ. ನಮ್ಮ ಬೀದಿ, ಚರಂಡಿ ಸ್ವಚ್ಛವಾಯಿತು. ಮುಂದೆ ಈ ಕಸ ಏನಾಗುತ್ತದೆ ? ಹೇಗೆ ವಿಲೇವಾರಿಯಾಗುತ್ತದೆ ? ಇದನ್ನು ಜನಸಾಮಾನ್ಯರು ವಿಚಾರಿಸುವುದೇ ಇಲ್ಲ.

ಕಸಗಳಲ್ಲಿ ಎರಡು ವಿಧ. ಭೂಮಿಯಲ್ಲಿ ಕರಗಿ ಮಣ್ಣಾಗಿ ಹೋಗುವಂತಹವು ಒಂದು ತೆರನಾದರೆ, ಭೂಮಿಯಲ್ಲಿ ಕರಗದೆ ಇರುವುವು ಇನ್ನೊಂದು ತೆರನಾದುವು. ಜೈವಿಕ ಕಸಗಳ ಸಮಸ್ಯೆ ಬೇರೆಯ ರೀತಿಯವು. ಇವು ಕ್ರಮೇಣ ಭೂಮಿಯಲ್ಲಿ ಕರಗಿಹೋಗುತ್ತವೆಯಾದರೂ, ಕೊಳೆತು ದುರ್ನಾತ ಬೀರಬಲ್ಲವು, ರೋಗಗಳನ್ನು ಹರಡಬಲ್ಲವು. ಆಹಾರದ ಚೆಲ್ಲುಗಳು, ಮನುಷ್ಯ - ಪ್ರಾಣಿಗಳ ವಿಸರ್ಜನೆ, ಕೊಳೆತ ತರಕಾರಿ, ಸತ್ತ ಪ್ರಾಣಿ ಇವೆಲ್ಲ ಯಾವ ರೀತಿ ನಮ್ಮ ಮೇಲೆ ಪರಿಣಾಮ ಬೀರಬಲ್ಲವು ಎಂಬುದು ಎಲ್ಲರಿಗೂ ತಿಳಿದ ವಿಷಯ. ಕೊಳೆಯಲಾರದ ಕಸಗಳಲ್ಲಿ ಹೆಚ್ಚಿನಂಶವನ್ನು 'ಪ್ಲಾಸ್ಟಿಕ್' ಕಬಳಿಸುತ್ತದೆ. ಪ್ಲಾಸ್ಟಿಕ್ ಕವರುಗಳು ಜನಸಾಮಾನ್ಯರ ಕೈಗೆ ಎಷ್ಟು ಸುಲಭವಾಗಿ ದೊರಕುತ್ತವೆಯೋ ಅಷ್ಟೇ ಬೇಜವಾಬ್ದಾರಿಯಿಂದ, ನಿಷ್ಕಾಳಜಿಯಿಂದ ಬಳಕೆಯಾಗುತ್ತವೆ. ಇತ್ತೀಚೆಗೆ ಕೆಲವು ಊರುಗಳಲ್ಲಿ ಸ್ಥಳೀಯ ಆಡಳಿತಗಳು ಇವುಗಳ ವಿರುದ್ಧ ಕ್ರಮ ಕೈಗೊಳ್ಳತೊಡಗಿವೆ. ಇದು ಸಮಾಧಾನದ ಸಂಗತಿಯಾದರೂ ಇನ್ನೂ ಕಟ್ಟುನಿಟ್ಟಿನ ಅನುಷ್ಠಾನ ಅಗತ್ಯ.

ಪ್ಲಾಸ್ಟಿಕ್ ಕವರುಗಳಿಂದ ಸಮಸ್ಯೆಗಳು ಉಂಟಾಗುತ್ತವೆ : ಮೊದಲನೆಯದಾಗಿ, ಇತ್ತೀಚೆಗೆ ಒಂದು ಹಸು ಅಕಸ್ಮಾತ್ ಸತ್ತಾಗ, ಅದನ್ನು ಪರೀಕ್ಷೆ ಮಾಡಿದ ವೈದ್ಯರು ಅದರ ಹೊಟ್ಟೆಯಿಂದ ಸುಮಾರು ೪೦ ಕಿಲೋ ತೂಕದ ಪ್ಲಾಸ್ಟಿಕ್ ಕವರುಗಳನ್ನು ಹೊರತೆಗೆದರು ! ಇನ್ನೊಂದು ಉದಾಹರಣೆ ಯಾವುದೇ ಊರಿನಲ್ಲಿಯೂ ಕಾಣಸಿಗುವಂತಹುದು. ಟೆಲಿಫೋನ್ ಇಲಾಖೆಯವರು ಎಲ್ಲಕಡೆ ಆಪ್ಟಿಕಲ್ ಫೈಬರ್ ಕೇಬಲ್‌ಗಳನ್ನು ಹಾಕಲು ರಸ್ತೆಗಳ ಅಂಚಿನಲ್ಲಿ ಕಂದಕ ತೋಡುತ್ತಾರೆ. ಈ ಕಂದಕ ಸುಮಾರು ಒಂದು ಮೀಟರ್ ಆಳವಿರಬಹುದು. ಇಂತಹ ಕಂದಕವನ್ನು ಅಗೆದು ಹಾಕಿದ ಮಣ್ಣನ್ನು ಮತ್ತು ಕಂದಕದ ಒಳಗೆ ಗೋಡೆಯನ್ನು ಗಮನಿಸಿದರೆ ಸುಮಾರು ಮುಕ್ಕಾಲು ಮೀಟರು ಆಳದವರೆಗೂ ಮಣ್ಣಿನಲ್ಲಿ ದಟ್ಟವಾಗಿ ಬೆರೆತಿರುವ ಪ್ಲಾಸ್ಟಿಕ್‌ಗಳನ್ನು ಕಾಣಬಹುದು. ಅಲ್ಲಿಗೆ ನಮ್ಮ ಅರಾಜಕತೆ ಮತ್ತು ಬೇಜವಾಬ್ದಾರಿ ಎಂತಹ ದುರಂತದತ್ತ ಹೊರಟಿದೆ ಎಂದು ಸಾಬೀತಾಗುತ್ತದೆ.

ಹಾಗಾದರೆ ಇದಕ್ಕೆ ಪರಿಹಾರವಿಲ್ಲವೇ ? ಕಾಯಿದೆಯ ವಿಚಾರಕ್ಕೆ ಬರುವಾಗ ಜವಾಬ್ದಾರಿ ದ್ವಿಮುಖವಾಗುತ್ತದೆ. ಒಂದು ಆಡಳಿತ ಯಂತ್ರದತ್ತ ಕೈತೋರಿಸಿದರೆ, ಇನ್ನೊಂದು ಸಾರ್ವಜನಿಕರತ್ತ ಕೈತೋರುತ್ತದೆ. ನಮ್ಮ ಸಂವಿಧಾನದ ಪ್ರಕಾರ (ಕಲಮು ೨೪೩ ಡಬ್ಲ್ಯು) ಕಸದ ವಿಲೇವಾರಿಯು ಪುರಸಭೆಯ ಅಥವಾ ಸ್ಥಾನಿಕ ಆಡಳಿತದ ಹೊಣೆ. ಇದಲ್ಲದೆ, ಈ ವಿಧಿಯ ಕಟ್ಟುನಿಟ್ಟಿನ ಅನುಷ್ಠಾನವನ್ನು ಭಾರತದ ಸರ್ವೋಚ್ಚ ನ್ಯಾಯಾಲಯವು ೧೯೯೮ರಲ್ಲಿ ವಿಚಾರಣೆಗೆ ಬಂದ ಒಂದು ಸಾರ್ವಜನಿಕ ಹಿತಾಸಕ್ತಿಯ ಮೊಕದ್ದಮೆಯಲ್ಲಿ ಎತ್ತಿಹಿಡಿದಿದೆ. ಪುರಸಭೆಯ ಜವಾಬ್ದಾರಿಯು ಕಸದ ಸಂಗ್ರಹಣೆ, ವರ್ಗೀಕರಣ ಮತ್ತು ವಿಲೇವಾರಿಯ ಎಲ್ಲ ಅಂಶಗಳನ್ನು ಒಳಗೊಳ್ಳುತ್ತದೆ. ಸಾರ್ವಜನಿಕ ಆರೋಗ್ಯ ರಕ್ಷಣೆ ಪುರಸಭೆಗಳ ಕರ್ತವ್ಯ. ಇದಕ್ಕೆ ಸಂಬಂಧಿಸಿದಂತೆ ಎಲ್ಲ ವಿಧಿಗಳೂ ೨೦೦೦ನೇ ವರ್ಷದಲ್ಲಿ ಜಾರಿಗೆ ಬಂದ ಕಸದ ವಿಲೇವಾರಿ ಕಾನೂನಿನಲ್ಲಿಯೂ, ೧೯೮೬ರ ಪರಿಸರ ರಕ್ಷಣಾ ಕಾಯಿದೆಯಲ್ಲಿಯೂ ವಿವರವಾಗಿ ಹೇಳಲ್ಪಟ್ಟಿವೆ.

ಕಾಯಿದೆ ಕೇವಲ ಪುರಸಭೆಗಳಿಗೆ ಮಾತ್ರ ಪಾಠ ಹೇಳಿಲ್ಲ. ಜನಸಾಮಾನ್ಯರಿಗೂ, ನಾಗರಿಕರಿಗೂ ಕೆಲವು ಜವಾಬ್ದಾರಿಗಳನ್ನು ರೂಪಿಸಿದೆ. ಕಸವನ್ನು ರಸ್ತೆಯ ಮೇಲೆ ಚೆಲ್ಲಾಡುವುದು ಅಪರಾಧ. ನಿರ್ಧಾರಿತ ರೀತಿಯಲ್ಲಿ ಕಸವನ್ನು ವಿಂಗಡಿಸಿ ಆಯಾ ಕಸದ ತೊಟ್ಟಿಗಳಲ್ಲಿ ಹಾಕಬೇಕು. ಸಾಧ್ಯವಿದ್ದೆಡೆ ಜೈವಿಕ ಕಸದಿಂದ ಗೊಬ್ಬರ ಮಾಡುವ (ಗಿಡಗಳಿಗೆ ಹಾಕುವ ಮೂಲಕ) ಮರುಬಳಕೆಗೆ ಪ್ರಯತ್ನಿಸಬೇಕು. ಸಾರ್ವಜನಿಕ ಸ್ಥಳಗಳಲ್ಲಿ, ರಸ್ತೆಗಳ ಮೇಲೆ ವಿಸರ್ಜನೆಯನ್ನು ಮಾಡಬಾರದು. ಹೀಗೆ ಪ್ರತಿಯೊಂದು ಅಂಗಗಳಲ್ಲಿಯೂ ಆಡಳಿತದಷ್ಟೇ ಜನರಿಗೂ ನಿಬಂಧನೆಗಳು, ಜವಾಬ್ದಾರಿಗಳು ವಿಧಿಸಲ್ಪಟ್ಟಿವೆ. ಆದರೆ ಹೆಚ್ಚಿನ ಹೊರೆ ಆಡಳಿತ ಯಂತ್ರದತ್ತ ತಿರುಗಿದೆ. ಈ ಸೇವೆಗಳಲ್ಲಿ ಕುಂದುಕೊರತೆಗಳಾದರೆ ನಾಗರಿಕರಿಗೆ ಪರಿಸರ ರಕ್ಷಣಾ ಕಾನೂನಿನ ಪ್ರಕಾರ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿ ಸರಕಾರಕ್ಕೆ, ಪುರಸಭೆಗೆ ಈ ದಿಶೆಯಲ್ಲಿ ನಿರ್ದೇಶನ ನೀಡುವಂತೆ ಪ್ರಾರ್ಥಿಸಬಹುದು.

ಸಾಗರ

*ಗಣೇಶ ಭಟ್ಟ*

---




**ಪ**ಕ್ಕದ ಆಂಧ್ರದಲ್ಲಿ ಈ ಬಾರಿ ೧೨೦೦ಕ್ಕೂ ಹೆಚ್ಚು ಜನ ಬಿಸಿಲಿನ ತಾಪಕ್ಕೆ ಬಲಿಯಾದರು. ಮೇವು ನೀರುಗಳಿಲ್ಲದೆ ದನಕರುಗಳು, ಕಾಡು ಪ್ರಾಣಿಗಳು ಸತ್ತ ಸಂಖ್ಯೆ ಲೆಕ್ಕ ಇಟ್ಟವರ್‍ಯಾರು ? ತುಂಗಭದ್ರೆಯಂತಹ ನದಿಯೇ ಬತ್ತಿ ಬರಿದಾಗಿ ಲಕ್ಷಾಂತರ ಜೀವರಾಶಿಗಳಿಗೆ, ದುಡಿವ ಕೈಗಳಿಗೆ ತತ್ವಾರ ಬಂದಿದೆ.

ಬರಗಾಲದ ಭೀಕರತೆಯನ್ನು ಹರಪನಹಳ್ಳಿ ತಾಲೂಕು ಮೂಡಲಗೇರಿಯ ಹುಚ್ಚಿಂಗವ್ವನ ಮಾತಿನಲ್ಲೇ ಹೇಳುವುದಾದರೆ ''ಮೇಸ್ಟ್ರೆ, ಮಕ್ಕಳ್ನ ಸಾಲಿಗೆ ಕಳಿಸ್ರಿ ಅಂತ ಹೇಳಬ್ಯಾಡ್ರಿ, ದುಡಿದೇನು ಅಂದ್ರೆ ಕೆಲಸ ಇಲ್ಲ, ದನಕರುಗಳಿಗೆ ಹಾಕಾಕ ಮೇವಿಲ್ಲ, ನೀರು ಕುಡಿಸಿ ಗೂಡ್ಯಾಗ ಕಟ್ಟಿ ಅವು ಒದ್ರೊದ್ ಕೇಳಲಾರದೆ, ದೂರ ಗುಡ್ಯಾಗ ಹೋಗಿ ಕುಂದರ್ತೀವಿ. ಇದು ದೇವರ ಮಾಡಿದ್ದು, ಯಾರ ಇದಿರಿಗೆ ಹೇಳಬೇಕು ನಮ್ಮ ಬಡವರ ಗೋಳ.''

ಇದು ಇವಳೊಬ್ಬಳ ಮಾತಲ್ಲ, ಬಹುತೇಕ ಬಯಲು ಸೀಮೆಯ ಜನರೆಲ್ಲರ ಗೋಳು. ಆದ್ರೇನು ಮಾಡೋದು ನಮ್ಮ ರಾಜಕೀಯ ವ್ಯಕ್ತಿಗಳು ಬರ ಬಿದ್ದಾಗ ಬಳಕೋಬೇಕು ಅಂತ, ಜನ ಕೂಲಿಗಾಗಿ ಪರಿತಪಿಸುತ್ತಿರುವಾಗ, ಬುಲ್ಡೋಜರ್‌ಗಳಿಂದ ತಗ್ಗನ್ನ ದಿಬ್ಬ ಮಾಡಿ, ದಿಬ್ಬವನ್ನ ತಗ್ಗು ಮಾಡಿ, ಮುಂದಿನ ವರ್ಷಕ್ಕೆ ರಿಪೇರಿಗೆ ಬರೋವಂಗ, ಕಾಳ ನುಂಗಿ ನೀರ ಕುಡಿತಾರ. ಯಾಕಂದ್ರ ಇದು ಪ್ರಜಾಪ್ರಭುತ್ವ, ಊರಿಗೊಬ್ಬಾವ ಬಾಯಿಬಡಕ ಇದ್ದಾಂವನ್ನ ಬಜ್ಜ ಬೆಳೆಸಿ, ಬ್ರಿಟಿಷ ಪಾಲಿಸಿ ಬಿತ್ತಾಕತ್ತ್ಯಾರ. ತುಂಡು ಬ್ರೆಡ್ಡಿಗಾಗಿ ಅಭಿಯಂತರ ಕೈ ಸನ್ನೆಗೆ ಓಕೆ ಅಂತ ಸಯಿನ್ ಹಾಕ್ತಾನ. ಎಲ್ರೂ ಹಿಂಗ ಅದಾರಂತಲ್ಲ, ಇಲ್ದವ್ರಿಗೆ ಇದರ ಗೊಡವಿ ಯಾಕಂತಿನಿ.

ಸರ್ಕಾರ ಒಂದು ಕಡೆ ಕಾಡನ್ನು ನಾಶಮಾಡ್ತಾ ಇನ್ನೊಂದೆಡೆ ''ದೇವರ ಅವಕೃಪೆಯಾಗಿದೆ, ದೇವರಿಗೆ ಮೊರೆ ಹೋಗದೆ ಅನ್ಯಮಾರ್ಗವಿಲ್ಲ'' ಎಂದು ಮಂದಿರ-ಮಸೀದಿಗಳಿಗೆ ತೆರಳಿ ಪ್ರಾರ್ಥನೆ ಮಾಡಲು ಉಪದೇಶ ಮಾಡುತ್ತೆ.

''ನಾವು ಪೂಜೆ ಮಾಡುತ್ತಿರುವುದು ನಮ್ಮ ಸ್ವಾರ್ಥಕ್ಕಾಗಿ ಅಲ್ಲ, ಸರ್ವರ ಸಂಕಷ್ಟಗಳ ನಿವಾರಣೆಗಾಗಿ ಸರ್ವಧರ್ಮ ಪ್ರಾರ್ಥನೆ ಮಾಡುತ್ತಿದ್ದೇವೆ'' ಎನ್ನುವ ಮಂತ್ರಿಗಳಿಗೆ ''ಮಂತ್ರದಿಂದ ಮಾವಿನಕಾಯಿ ಉದುರೋದಿಲ್ಲ'' ಅನ್ನೋದನ್ನ ಹೇಳೋದು ಹ್ಯಾಂಗ ?

ಈ ನಾಡಿನ ಬುದ್ಧಿಜೀವಿಗಳು, ಪ್ರತಿ ಗ್ರಾಮದಲ್ಲಿನ ಯುವಕ-ಯುವತಿ ಸಂಘಗಳು ಸಮರೋಪಾದಿಯಲ್ಲಿ ಮಳೆ ನೀರಿನ ಸಂಗ್ರಹಣೆಗಾಗಿ ಜನಜಾಗೃತಿ ಮೂಡಿಸಬೇಕು. ಬೀಳುವ ಅಲ್ಪ ಮಳೆಯ ನೀರನ್ನೆ ಅಮೃತದಂತೆ ಅಂತರಾಳದಲ್ಲಿ ಶೇಖರಿಸಿದರೆ ಬೇಕಾದಾಗ ಬಳಸಿಕೊಳ್ಳಬಹುದು.

ಕೆಲಸ ಅವಶ್ಯ ಆಗಬೇಕು. ಕಟ್ಟೆ ಪುರಾಣ ಕೈಬಿಟ್ಟು, ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಿಸುವುದು, ಬೆಟ್ಟ ಅಡವಿಗಳಲ್ಲಿ ನಾಲ್ಕಾರು ಅಡಿ ಆಳದ ಟ್ರೆಂಚ್‌ಗಳನ್ನ ಕಡಿದು ನೀರು ವ್ಯರ್ಥವಾಗಿ ಹಳ್ಳ-ಹೊಳೆಗಳಿಗೆ ಹರಿದು ಹೋಗದಂತೆ ನೋಡಿಕೊಳ್ಳುವ ಕೆಲಸ ಸಾರ್ವಜನಿಕರೆಲ್ಲ ಸೇರಿ ಸಾಮೂಹಿಕವಾಗಿ ಮಾಡಿದಾಗ ಮುಂಬರುವ ದಿನಗಳಲ್ಲಿನ ಬರದ ಬೇಗೆಯಿಂದ ಪಾರಾಗಬಹುದು.

*ಹೊನ್ನಹಮ್ಮಿಗಿ, ಗದಗ*

ರವಿ ಸೋ. ದೇವರೆಡ್ಡಿ

# ಪ್ರೀತಿ ಮತ್ತು ಕ್ರೌರ್ಯ

ಅರವಿಂದ ಚೊಕ್ಕಾಡಿ



"ದೇವರೇ ನಾವೇನು ಮಾಡಿಬಿಟ್ಟೆವು !"

೧೯೪೫ ಆಗಸ್ಟ್ ೬ರ ಬೆಳಗ್ಗಿನ ಅನಾಹುತವನ್ನು ಇಣುಕಿ ನೋಡಿದ ಬಿ-೨೯ ಎನೋಲಾ ಗೇ ಯುದ್ಧ ವಿಮಾನದ ಸಹಚಾಲಕ ರಾಬರ್ಟ್ ಎ ಲೂಯಿಸ್ ತೆಗೆದ ಉದ್ಗಾರವಿದು.

ಆಗಸ್ಟ್ ೬ರ ರಾತ್ರಿ ಎರಡು ಗಂಟೆ ನಲವತ್ತೈದು ನಿಮಿಷಕ್ಕೆ ನಾಲ್ಕೂವರೆ ಟನ್ ಭಾರದ ಅಣುಬಾಂಬ್‌ಅನ್ನು ಹೊತ್ತ ಕರ್ನಲ್ ಟಿಬೆಟ್ಸ್‌ನ ಯುದ್ಧ ವಿಮಾನ 'ಎನೋಲಾ ಗೇ' ಟಿನಿಯನ್ ರನ್‌ವೇಯಿಂದ ಹಾರಿತು, ಜಪಾನ್ ಕಡೆಗೆ. ಅದು ಹಾರಿದ ಎರಡು ನಿಮಿಷಗಳ ನಂತರ ಇನ್ನೆರಡು ಬಿ-೨೯ ವಿಮಾನಗಳು ಆಕಾಶಕ್ಕೇರಿದವು. ಒಂದು, ಅಣುಬಾಂಬ್‌ನ ಕಂಪನ-ಶಾಖ ಇತ್ಯಾದಿಗಳನ್ನು ಅಳೆಯಲು. ಇನ್ನೊಂದು, ಆಸ್ಫೋಟನೆಯ ಪರಿಣಾಮಗಳ ಛಾಯಾಚಿತ್ರ ತೆಗೆಯಲು. ಜಪಾನ್ ಹತ್ತಿರವಾಗುತ್ತಿದ್ದಂತೆ ಕರ್ನಲ್ ಟಿಬೆಟ್ಸ್ ಎಲ್ಲ ವಿಮಾನಗಳ ಸಿಬ್ಬಂದಿಗಳನ್ನು ಇಂಟರ್‌ಕಾಮ್‌ನಲ್ಲಿ ಸಂಪರ್ಕಿಸಿ, "ನಾವು ಅಣುಬಾಂಬ್ ಆಸ್ಫೋಟನೆಗಾಗಿ ಹೊರಟಿದ್ದೇವೆ", ಎಂದು ಸಂದೇಶ ಕೊಟ್ಟ. ಈ ತನಕ ತಮ್ಮ ಹಾರಾಟದ ಉದ್ದೇಶವೇನೆಂಬುದು ಇತರ ಯಾರಿಗೂ ತಿಳಿದಿರಲಿಲ್ಲ !

ಬೆಳಗ್ಗೆ ೭ ಗಂಟೆ ೯ ನಿಮಿಷಕ್ಕೆ ಎನೋಲಾ ಗೇಯನ್ನು ಹಿಂದಿಕ್ಕಿ ಹವಾಮಾನ ವೀಕ್ಷಣಾ ವಿಮಾನ ಮುಂದೆ ಹೋಯಿತು. ೭.೩೦ಕ್ಕೆ ಎನೋಲಾ ಗೇ ಷಿಕೋಕೂ ದ್ವೀಪವನ್ನು ದಾಟಿತು. ೮ ಗಂಟೆ ೧೫ ನಿಮಿಷಕ್ಕೆ ಎನೋಲಾ ಗೇಯ ಬಾಂಬ್ ಉದುರಿಸುವ ಬಾಗಿಲು ತೆರೆದುಕೊಂಡಿತು. ಮುಂದಿನ ಹದಿನೇಳು ಸೆಕೆಂಡುಗಳಲ್ಲಿ ವಿಶ್ವದ ಪ್ರಪ್ರಥಮ ಅಣುಬಾಂಬ್ ಬಿದ್ದೇಬಿಟ್ಟಿತು, ಹಿರೋಷಿಮಾ ನಗರದ ಮೇಲೆ.

ಬಾಂಬ್ ಉದುರಿದ ತಕ್ಷಣ ಬಿಡುಗಡೆಯಾದ ಅಗಾಧ ಶಾಖದ ಪ್ರಮಾಣ ನೂರು ಮಿಲಿಯನ್ ಡಿಗ್ರಿ ಇತ್ತು. ಉರುಳಿದ ಮನೆಗಳ ಕಾಂಕ್ರೀಟ್ ಮತ್ತು ಕಲ್ಲುಗಳು ಕರಗಿ ಒಂದಕ್ಕೊಂದು ಅಂಟಿಕೊಂಡುಬಿಟ್ಟವು. ವಿದ್ಯುತ್ ಕಂಬಗಳು ಕರಗಿ ಆವಿಯಾದವು. ಹಿರೋಷಿಮಾ ಒಂದು ಚಿತೆಯಾಗಿ ಪರಿವರ್ತನೆ ಹೊಂದಿತು. ಬೆಂಕಿ ಎಲ್ಲ ಕಡೆಗೂ ಧಗಧಗನೆ ಹಬ್ಬತೊಡಗಿತು. ಕರಿಯ ನೀರಿನ ಮಳೆ ಹಿರೋಷಿಮಾದ ಮೇಲೆ ಸುರಿಯತೊಡಗಿತು. ಸುಮಾರು ೭೮,೦೦೦ ಮಂದಿ ಏಕಕಾಲಕ್ಕೆ ಮೃತಪಟ್ಟರು. ಅದಕ್ಕೂ ಹೆಚ್ಚು ಮಂದಿ ಗಾಯಾಳುಗಳಾದರು. ಇದರೆಡೆಯಲ್ಲಿ ಜಜ್ಜಿ ಹೋದ ಜೀವಸಂಕುಲಗಳೆಷ್ಟೋ ? ನಿಸರ್ಗಕ್ಕಾದ ಅಪಚಾರವೆಷ್ಟೋ ?

ಅಣ್ವಸ್ತ್ರದ ಆಕ್ರಮಣ ಅಲ್ಲಿಗೇ ನಿಲ್ಲಲಿಲ್ಲ. ೯ ಆಗಸ್ಟ್ ೧೯೪೫ ಬೆಳಗ್ಗೆ ೧೧ ಗಂಟೆ ೨ ನಿಮಿಷಕ್ಕೆ ಇದೇ ಆಕ್ರಮಣ ನಾಗಸಾಕಿಯ ಮೇಲೂ ನಡೆಯಿತು. ಅಪಾರ ಸಾವು ನೋವುಗಳುಂಟಾದವು. ಅದರ ಪರಿಣಾಮ, ಅರ್ಧ ಶತಮಾನವನ್ನು ದಾಟಿ ಈವತ್ತಿಗೂ ಜಪಾನ್‌ಅನ್ನು ಕಾಡುತ್ತಿದೆ.

ಇಂತಹ ಒಂದು ಅನಾಹುತಕ್ಕೆ ಯುಎಸ್‌ಎ ಹೇಗೆ ಕಾರಣವೋ ಜಪಾನ್ ಕೂಡ ಕಾರಣವೇ. ಆದರೆ ಯಾರು ? ಸಮಸ್ತ ಯುಎಸ್‌ಎ ನಾಗರಿಕರಲ್ಲ, ಸಮಸ್ತ ಜಪಾನೀ ನಾಗರಿಕರೂ ಅಲ್ಲ. ಯುಎಸ್‌ಎ ಆಡಳಿತಕ್ಕೆ ನಿಜವಾಗಿಯಾದರೂ ದ್ವೇಷವಿರಬೇಕಾದ್ದು ಪರ್ಲ್ ಹಾರ್ಬರ್ ಯೋಜನೆಯನ್ನು ರೂಪಿಸಿದ ಇಸುರೊಕೊ ಯಮಮೊಟೋ, ಜಪಾನಿನ ಪ್ರಧಾನಿ ಸುಜುಕಿ, ಚಕ್ರವರ್ತಿ ಹಿರೋಹಿಟೋ ಮುಂತಾದ ಆಡಳಿತ ಸೂತ್ರವನ್ನು ಹಿಡಿದವರ ಮೇಲೆ. ಹೆಚ್ಚೆಂದರೆ ಜಪಾನಿನ ಕ್ಯಾಬಿನೆಟ್ ಮತ್ತು ಸೇನಾಧಿಕಾರಿಗಳ ಮೇಲೆ. ಆದರೆ ಅಣ್ವಸ್ತ್ರ ಸ್ಫೋಟನೆಯಿಂದ ಪ್ರಾಣ ಕಳೆದುಕೊಂಡವರು ಮುಗ್ಧ ನಾಗರಿಕರು. ಅಣುಬಾಂಬ್ ಆಸ್ಫೋಟನೆ ಅತ್ಯಂತ ಗುಪ್ತವಾಗಿ ನಡೆಯಿತೆಂಬುದೇನೋ ನಿಜವೇ. ಆದರೆ ಅದಕ್ಕೆ ಆಜ್ಞೆಯಿತ್ತ ಒಂದೇ ಒಂದು ಮನಸ್ಸಿಗಾದರೂ ಆಸ್ಫೋಟನೆಯ ಭೀಕರತೆ ತಿಳಿದಿದ್ದಿರಬಹುದಲ್ಲ! ಆ ಮನಸ್ಸಿನಲ್ಲಿ ಇದ್ದಿರಬಹುದಾದ ಕ್ರೌರ್ಯದ ಮೊತ್ತ ಅದೆಷ್ಟು ಅಗಾಧವಾಗಿದ್ದಿರಬಹುದು ?

ಈ ರೀತಿಯ ಕ್ರೌರ್ಯ ಪ್ರದರ್ಶನ ೧೯೪೫ಕ್ಕೆ ಸೀಮಿತವಾದದ್ದೇನೂ ಅಲ್ಲ. ಯುಎಸ್‌ಎ - ಜಪಾನ್‌ಗಳಿಗೆ ಮಾತ್ರ ಸಂಬಂಧಪಟ್ಟದ್ದೂ ಅಲ್ಲ. ಅದು ದೇಶಗಳ, ಕಾಲಗಳ ವ್ಯಾಪ್ತಿಯನ್ನು ಮೀರಿ ೧೯೪೫ರ ಹಿಂದೆಯೂ ಪ್ರದರ್ಶನಗೊಂಡಿದೆ. ನಂತರವೂ ಪ್ರದರ್ಶಿತವಾಗಿದೆ, ಸಮಕಾಲೀನ ಬದುಕನ್ನೂ ಕಾಡುತ್ತಲೇ ಇದೆ.

ಮನುಷ್ಯನು ಅಣುಶಕ್ತಿಯನ್ನು ಕಂಡುಹಿಡಿದುದರ ಹಿಂದೆ ಅಪಾರವಾದ ಬೌದ್ಧಿಕ ಪರಿಶ್ರಮವಿದೆ. ಹಾಗೆಯೇ ಇತರ ಸಾಧನೆಗಳ ಹಿಂದೆಯೂ ದೊಡ್ಡ ಪ್ರಮಾಣದ ಶ್ರಮವಿದೆ. ಆದರೂ ಏಕೆ ಕ್ರೌರ್ಯ ತಾಂಡವವಾಡುತ್ತಿದೆಯೆಂದರೆ ಕ್ರೌರ್ಯ ಮತ್ತು ಪ್ರೀತಿಗಳು ಸೃಷ್ಟಿಯ ಸಹಜ ನಿಯಮವೆನ್ನುವುದನ್ನು ಗಮನಿಸಬೇಕು. ಅದು ಸ್ಪಷ್ಟವಾಗಬೇಕಾದರೆ ನಿಸರ್ಗದ ಸಹಜ ನಿಯಮಗಳಿಗೆ ಈಗಲೂ ಬದ್ಧವಾಗಿರುವ ಪ್ರಾಣಿ ಜಗತ್ತಿನ ನಡವಳಿಕೆಯನ್ನು ನೋಡಬೇಕು. ಕೆಲವು ಪ್ರಾಣಿಗಳು ಮರಿ ಹಾಕಿದೊಡನೆ ತಮ್ಮ ಯಾವುದಾದರೊಂದು ಮರಿಯನ್ನು ತಿನ್ನುತ್ತವೆಯಂತೆ. ಅದು ಎಷ್ಟರಮಟ್ಟಿಗೆ ಸತ್ಯ ಎಂಬುದು ಇಲ್ಲಿ ಮುಖ್ಯ ವಿಷಯವಲ್ಲ. ಆದರೆ ಅಂಥ ಕಲ್ಪನೆ ಸೂಚ್ಯವಾಗಿ ಹೇಳುವ ಕ್ರೌರ್ಯ ಮತ್ತು ಪ್ರೀತಿಯ ವಸ್ತು ಮುಖ್ಯವಾಗುತ್ತದೆ. ಯಾವ ಪ್ರಾಣಿ ತನ್ನ ಮರಿಯನ್ನು ತಿನ್ನುತ್ತದೋ ಅದೇ ಪ್ರಾಣಿ ಇತರ ಮರಿಗಳನ್ನು ಆಟವಾಡಿಸಲೂ ಬಲ್ಲುದು ಎನ್ನುವಲ್ಲಿ ಕ್ರೌರ್ಯ ಮತ್ತು ಪ್ರೀತಿ ಜೊತೆಜೊತೆಯಾಗಿ ಸಾಗುವ ಪರಿಕಲ್ಪನೆ ಇದೆ. ಇಂಥ ಪರಿಕಲ್ಪನೆಯಿಂದ ಮೂಡಿಬಂದ, ಪಂಡಿತ ರಾಹುಲ ಸಾಂಕೃತ್ಯಾಯನ ಅವರ 'ಓಲ್ಗಾ - ಗಂಗಾ' ಕಥಾ ಸಂಕಲನದಲ್ಲಿನ 'ನಿಶಾ' ಎಂಬ ಕಥೆಯ ವಸ್ತು ಹೀಗಿದೆ: ಕುಟುಂಬದ ನಾಯಕಿಯಾದ ನಿಶಾ ಕಥೆಯ ನಾಯಕಿ. ಆಕೆ ಕುಟುಂಬದ ಅಧಿಕಾರಿಣಿ. ಅವಳ ಮಗಳು ಲೇಖಿ, ಆಕೆಗಿಂತ ಬಲಿಷ್ಠಳು. ಅವಳು ತನಗಿಂತ ಬಲಿಷ್ಠಳು ಎಂಬುದನ್ನು ನಿಶಾ ಅರ್ಥಮಾಡಿ

ಕೊಂಡಂದಿನಿಂದ ಒಂದು ರೀತಿಯ ಭಯ ಅವಳನ್ನು ಆವರಿಸಿಬಿಡುತ್ತದೆ. ತನ್ನ ಅಧಿಕಾರವನ್ನು ಉಳಿಸಿಕೊಳ್ಳುವುದಕ್ಕೋಸ್ಕರ ನಿಶಾ, ಲೇಖೆಯನ್ನು ಓಲ್ಗಾ ನದಿಯಲ್ಲಿ ಮುಳುಗಿಸಿಬಿಡುತ್ತಾಳೆ. ಆದರೆ ಬಲಿಷ್ಠಳಾದ ಲೇಖೆ, ನಿಶಾಳ ಕೊರಳನ್ನು ಅಪ್ಪಿ ಹಿಡಿಯುತ್ತಾಳೆ. ಹೀಗಾಗಿ ತಾಯಿ ಮಗಳಿಬ್ಬರೂ ಕೊಚ್ಚಿಹೋಗುತ್ತಾರೆ.

ಇದು ಒಂದು ಕಥೆ ಎಂದ ಮಾತ್ರಕ್ಕೆ ತಳ್ಳಿ ಹಾಕುವಂಥದೇನಲ್ಲ. ನಾಗರಿಕತೆಯ ಶೈಶವಾವಸ್ಥೆಯ ಕಾಲದಲ್ಲಿ ಮನುಷ್ಯ ಇತರ ಪ್ರಾಣಿಗಳಿಗಿಂತ ಹೆಚ್ಚೇನೂ ಭಿನ್ನವಾಗಿರದಿದ್ದಾಗ ಇಂಥದ್ದು ನಡೆದಿದ್ದರೆ ಆಶ್ಚರ್ಯವಿಲ್ಲ. ಪ್ರಾಣಿಗಳು ಸ್ವಂತ ಮರಿಗಳನ್ನು ತಿನ್ನುವ, ತಾಯಿ ತನ್ನ ಮಗಳನ್ನು ಕೊಲ್ಲುವ ವಿಚಾರಗಳು ಹೇಗೆಯೇ ಇರಲಿ, ಆದರೆ ಒಂದು ಪ್ರಾಣಿ ಇನ್ನೊಂದು ಪ್ರಾಣಿಯೊಡನೆ ಕ್ರೌರ್ಯ - ಪ್ರೀತಿಯ ನಡವಳಿಕೆಯನ್ನು ಪ್ರದರ್ಶಿಸುವುದಂತೂ ಖಂಡಿತ. ಒಂದು ಪ್ರಾಣಿ ಇನ್ನೊಂದು ಪ್ರಾಣಿಯೊಡನೆ ಆಟವಾಡುತ್ತದೆ. ಹಾಗೆಯೇ ಆಕ್ರಮಣವನ್ನೂ ಮಾಡುತ್ತದೆ. ಈ ರೀತಿಯ ಆಕ್ರಮಣ ನಡೆಯುವುದು ಒಂದೋ ಆಹಾರಕ್ಕಾಗಿ, ಇಲ್ಲ ಅಧಿಕಾರಕ್ಕಾಗಿ ಆಗಿರುತ್ತದೆ. ಆಹಾರಕ್ಕಾಗಿ ಬೇಟೆಯಾಡಿದ ಪ್ರಾಣಿ ಆಹಾರ ದೊರೆತ ನಂತರ ತೃಪ್ತವಾಗುತ್ತದೆ. ಆದರೆ ಅಧಿಕಾರಕ್ಕಾಗಿ ಆಕ್ರಮಣವೆಸಗುವ ನಾಯಿಯಂಥ ಪ್ರಾಣಿಗಳು ತಮ್ಮ ವ್ಯಾಪ್ತಿಯೊಳಗೆ ತಮ್ಮದೇ ಜಾತಿಯ ಪ್ರಾಣಿಗಳು ಬರುವುದನ್ನು ಸಹಿಸಲಾರವು. ಅಂದರೆ ಈ ಅಸಹನೆ ನಿರಂತರವೆಂದೇನೂ ಅಲ್ಲ. ಅವಕ್ಕೆ ಆಟ ಆಡುವ ಮನಸ್ಸಾದಾಗ ತಾವಾಗಿಯೇ ಇತರ ಪ್ರಾಣಿಗಳನ್ನು ತಮ್ಮ ವ್ಯಾಪ್ತಿಯೊಳಗೆ ಬಿಟ್ಟುಕೊಳ್ಳುತ್ತವೆ. ಇದರಿಂದ, ಪ್ರಾಣಿಗಳು ಅಧಿಕಾರಕ್ಕಾಗಿ ಆಕ್ರಮಣ ನಡೆಸುತ್ತವೆಯಾದರೂ ಒಟ್ಟು ನಡೆಯುವ ಆಕ್ರಮಣಗಳಲ್ಲಿ ಅಧಿಕಾರ ಸ್ಥಾಪನೆಗಾಗಿ ನಡೆಯುವ ಆಕ್ರಮಣಗಳ ಪ್ರಮಾಣ ಕಡಿಮೆ. ಆಹಾರಕ್ಕಾಗಿ ನಡೆಯುವ ಆಕ್ರಮಣದ ಪ್ರಮಾಣ ಹೆಚ್ಚು. ಏಕೆಂದರೆ ಅದು ಜೀವಿಗಳ ಮೂಲಭೂತ ಅವಶ್ಯಕತೆಯಾಗಿದೆ. ಆಕ್ರಮಣದ ಇನ್ನಿತರ ಮೂಲಗಳು ಪ್ರಾಣಿ ಜಗತ್ತಿನಲ್ಲಿ ಕಡಿಮೆಯೇಕೆಂದರೆ ಅವುಗಳ ಆಸೆಗಳು ಕಡಿಮೆ ಇರುತ್ತವೆ. ಇಲ್ಲಿ ನಾವು ತಿಳಿದುಕೊಳ್ಳಬಹುದಾದ ವಿಷಯವೆಂದರೆ ಆಸೆಗಳ ಪ್ರಮಾಣ ಹೆಚ್ಚಿದಷ್ಟೂ ಆಕ್ರಮಣದ ಪ್ರಮಾಣವೂ ಹೆಚ್ಚುತ್ತದೆ ಎನ್ನುವುದು. 'ನಿಶಾ'ಳ ಕಥೆಯಲ್ಲಿ ವ್ಯಕ್ತವಾಗಿರುವುದು ಇದೇ ಅಂಶ. ಅಲ್ಲಿ ಆಹಾರದ ಕಾರಣ ಮುಖ್ಯವಾಗಲಿಲ್ಲ. ಬದಲು ಅಧಿಕಾರ ಮುಖ್ಯವಾಯಿತು. (ನಾಗರಿಕತೆಯ ಶೈಶವಾವಸ್ಥೆಯಲ್ಲಿ ಇನ್ನೂ ಹಿಂದಕ್ಕೆ ಹೋದರೆ ಮನುಷ್ಯನಿಗೂ ಆಕ್ರಮಣದ ಮೊದಲ ಉದ್ದೇಶ ಆಹಾರ ಸಂಗ್ರಹಣೆಯಾಗಿದ್ದಿರಬೇಕು).

ಅಧಿಕಾರ ಸ್ಥಾಪನೆಯೊಂದಿಗೆ ಬೆಳೆದಿರುವಂಥದು ನಾಗರಿಕತೆ. ಅಂಥಲ್ಲಿ ಹಲವು ಸಾಮ್ರಾಜ್ಯಗಳು ಕಟ್ಟಲ್ಪಟ್ಟವು ಮತ್ತು ಉರುಳಿಯೂ ಹೋದವು. ಈ ಕಟ್ಟುವ ಮತ್ತು ಉರುಳುವ ಕ್ರಿಯೆಯೊಡನೆ ಮನುಷ್ಯನ ಬಯಕೆಗಳ ಪ್ರಮಾಣವೂ ಹೆಚ್ಚುತ್ತಾ ಹೋದವು. ಬಯಕೆಗಳು ಹೆಚ್ಚಿದಂತೆ ಕಟ್ಟುವ ಮತ್ತು ಉರುಳುವ ಕ್ರಿಯೆಗಳೂ ಹೆಚ್ಚು ಹೆಚ್ಚು ವೇಗವನ್ನು ಪಡೆದುಕೊಳ್ಳುತ್ತವೆ. ಈ ಕ್ರಿಯೆಯಲ್ಲಿ ಗುರುತಿಸಬೇಕಾಗಿರುವುದು ನಿಸರ್ಗದ ಎರಡು ಮುಖಗಳನ್ನು. ಎಲ್ಲೆಲ್ಲಿ ಕಟ್ಟುವ ಕೆಲಸಗಳು ನಡೆಯುತ್ತವೆಯೋ ಅಲ್ಲೆಲ್ಲ ಪ್ರೀತಿ, ಕೆಲಸ ಮಾಡುತ್ತದೆ. ಉರುಳುವ ಕ್ರಿಯೆಯಲ್ಲಿ ಕ್ರೌರ್ಯ ಕೆಲಸ ಮಾಡುತ್ತದೆ.

ಆದರೆ ಈ ಎರಡು ಕ್ರಿಯೆಗಳ ಜೊತೆಗೆ ಮನುಷ್ಯನ ಬೌದ್ಧಿಕ ಮತ್ತು ಭಾವನಾತ್ಮಕ ಸಾಮರ್ಥ್ಯಗಳೂ ಅಭಿವೃದ್ಧಿ ಹೊಂದಿರುವುದನ್ನು ಗಮನಿಸಬೇಕು. ಬೌದ್ಧಿಕ ಪ್ರಗತಿ, ಸಾಧನಶೀಲ ಮನೋಭಾವವನ್ನು ಮೂಡಿಸುತ್ತದೆ. ಅಂಥ ಸಾಧನೆಗಳ ಅಭಿವೃದ್ಧಿಯಾದಂತೆಲ್ಲ ಕಟ್ಟುವ ಮತ್ತು ಉರುಳುವ ಕ್ರಿಯೆಗಳು ಕ್ಷಿಪ್ರಗತಿಯಲ್ಲಿ ಸಾಗತೊಡಗುತ್ತವೆ. ಆದರೆ ಭಾವನೆಗಳ ಅಭಿವೃದ್ಧಿ ಮಾನವ ಸಂವೇದನೆಗಳನ್ನು ಹೆಚ್ಚಿಸುತ್ತವೆ. ಅವು ಉರುಳುವ ಕ್ರಿಯೆಗೆ ತಡೆ ಒಡ್ಡುತ್ತವೆ. ಇನ್ನಷ್ಟು ಸಂವೇದನೆಗಳನ್ನು ಹೆಚ್ಚಿಸುವ ಮೂಲಕ ಕ್ರೌರ್ಯದ ಜಾಗಕ್ಕೆ ಪ್ರೀತಿಯನ್ನು ತುಂಬುವ ಕೆಲಸ ಮಾಡುತ್ತವೆ. ಅದಕ್ಕೆ ಅತ್ಯುತ್ತಮ ನಿದರ್ಶನವೆಂದರೆ ಅಹಿಂಸೆಯ ಕುರಿತ ಕಲ್ಪನೆ ಮತ್ತು ಅನುಸರಣೆ.

ಅಹಿಂಸೆ ಎನ್ನುವುದು ಸಂಪೂರ್ಣ ಹಿಂಸೆಯ ನಿಷೇಧವಲ್ಲ ಎನ್ನುವುದನ್ನು ಅರಿತುಕೊಳ್ಳಬೇಕು. ಬದಲು ಹಿಂಸೆಯನ್ನು ಕನಿಷ್ಠ ಹಂತಕ್ಕೆ ತಲುಪಿಸುವ ತತ್ವವಷ್ಟೇ. 'ಸಸ್ಯಾಹಾರ'ದ ಅನುಸರಣೆಯ ಉದಾಹರಣೆಯ ಮೂಲಕ ಅದನ್ನು ಸ್ಪಷ್ಟಪಡಿಸ

## ಭಾವ ಭಾಷೆಯಾಗುವ ಕ್ಷಣ



ನನ್ನದೇ ಮಗು ಗೆಜ್ಜೆ ಕಟ್ಟಿ ಕುಣಿದು
ರಂಗದ ತುಂಬ ಪ್ರತಿಬಿಂಬವಾದ ಹಾಗೆ
ಬಿತ್ತ ಬೀಜಗಳೆಲ್ಲ ತಟ್ಟನೆ ಹಸಿರು ಸಾಲಾಗಿ
ಜೀವ ಕಳೆ ಕಂಗೊಳಿಸಿದ ಹಾಗೆ
ಭಾವ ಭಾಷೆಯಾಗುವ ಕ್ಷಣ.

ನಿರ್ಗುಣ ನೀರವ ಮೆಲ್ಲಗೆ ಅಲುಗಿ
ನಿರ್ದಿಷ್ಟ ನಿನಾದವಾಗಿಬಿಟ್ಟಂತೆ

ಅಮೂರ್ತ ಕಠಿಣಶಿಲೆ ಯಾವುದೋ ಮಾಯಕದಲ್ಲಿ
ಮುದ್ದು ಮೂರ್ತಿಯಾಗಿ ಮೈವೆತ್ತಂತೆ
ಅಸ್ಪಷ್ಟ ಪುಟ್ಟ ಚುಕ್ಕಿ ಚೆಲು ಚಿತ್ತಾರವಾಗಿ
ಕಣ್ತುಂಬಿದಂತೆ

ಮಧುರ ಮನಸ್ಸಿಗೆ ಕಾವ್ಯಾರ್ಥ ತಂಪೆರೆದಂತೆ
ಆಂತರ್ಯ ಅಕ್ಷರವಾಗುವ ಸಮಯ

ಭಾವ ಪ್ರಸವ ಹಗುರಾಗಿ
ಮಾತು ಹೂವು ಅರಳಿ
ಎಷ್ಟು ನಿರಾಳ
ಅರ್ಥಗರ್ಭಿತ ಅಂತರಾಳ

ಭಾರತಿ ಕಾಸರಗೋಡು
೮೩, ೨ನೇ ಮಹಡಿ, ೫ನೇ 'ಬಿ' ಮುಖ್ಯರಸ್ತೆ
ಆರ್. ಪಿ. ಸಿ. ಲೇ ಔಟ್, ವಿಜಯನಗರ, ಬೆಂಗಳೂರು-೫೬೦ ೦೪೦

ಬಹುದು. ಪ್ರಾಣಿಗಳ ಮೇಲಿನ ಪ್ರೀತಿ ಈ ತತ್ವದ ಉಗಮಕ್ಕೆ ಕಾರಣವಾಯಿತೆಂದರೆ ತಪ್ಪಾಗಲಾರದು. ಆದರಿಂದ ಪ್ರಾಣಿಗಳ ಹಿಂಸೆ ಅಷ್ಟು ಪ್ರಮಾಣದಲ್ಲಿ ಕಡಿಮೆಯಾಯಿತು. ಆದರೆ ಅಷ್ಟೇ ಪ್ರಮಾಣದಲ್ಲಿ ಸಸ್ಯಗಳನ್ನು ಹಿಂಸಿಸಲಾಗುತ್ತದೆ. ಇಲ್ಲಿ ನಡೆದಿರುವುದು ಒಂದರ ಹಿಂಸೆಯನ್ನು ತ್ಯಜಿಸಿ ಇನ್ನೊಂದರ ಹಿಂಸೆಯನ್ನು ಹೆಚ್ಚಿಸುವ ಕ್ರಿಯೆಯ ಪಟ್ಟಿ. ಆದರೆ ಅದು, ಮನುಷ್ಯ ಪ್ರೀತಿಯ ಇನ್ನೊಂದು ಮಜಲನ್ನು ತಲುಪಿರುವುದಕ್ಕೆ ಕೂಡ ಸಾಕ್ಷಿಯಾಗುತ್ತದೆ. ಏಕೆಂದರೆ ಸಸ್ಯಗಳ ಶೋಷಣೆ ನಡೆದರೆ ಅವು ಮತ್ತೆ ಚಿಗುರುತ್ತವೆ. ಆದರೆ ಪ್ರಾಣಿ ಹಿಂಸೆಯಿಂದ ಆಹಾರ ಪಡೆದಾಗ ಅದೇ ಪ್ರಾಣಿ ಮತ್ತೆ ಮರಳಲಾರದು. ಹಾಗಿದ್ದರೆ ಸಸ್ಯಗಳನ್ನು ಆಹಾರಕ್ಕಾಗಿ ಬಳಸುವುದರಿಂದ ಅದೇ ಭಾಗ ಮತ್ತೆ ಸಿಗುತ್ತದೆಯೇ ಎಂದರೆ ಇಲ್ಲವೆಂದೇ ಹೇಳಬೇಕಾಗುತ್ತದೆ. ಹಾಗಾಗಿಯೇ ಹಿಂಸೆ ಅನಿವಾರ್ಯವೆನ್ನುವುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಅದು ಪರಿಪೂರ್ಣವಾಗಿ ಇಲ್ಲವಾದಾಗ ಜಗತ್ತಿನಲ್ಲಿ ಜೀವರಾಶಿಗಳೂ ಉಳಿಯಲಾರವು. ಆದ್ದರಿಂದ ಅನಗತ್ಯ ಹಿಂಸೆಯನ್ನು ತ್ಯಜಿಸುವ ಪ್ರಯತ್ನ ಮಾಡಬೇಕೆನ್ನುವುದನ್ನು ಮಾನವ ಸಂವೇದನೆಗಳು ತಿಳಿಸಿಕೊಡುತ್ತವೆ. ಈ ಅಗತ್ಯ ಅನಗತ್ಯ ಎನ್ನುವ ವಿಚಾರವನ್ನೂ ರೂಪಿಸಿರುವುದು ಮಾನವ ಸಂವೇದನೆಗಳೇ.

ಇಂಥಲ್ಲಿ ಎಷ್ಟರಮಟ್ಟಿಗೆ ನಾವು ಸಂವೇದನಾ ಶೀಲತೆಯನ್ನು ಹೆಚ್ಚಿಸಿ ಕೊಳ್ಳುತ್ತೇವೆಯೋ ಅಷ್ಟರಮಟ್ಟಿಗೆ ನಾವು ಕಟ್ಟಿರುವ ನಾಗರಿಕತೆ ದೀರ್ಘಕಾಲ ಉಳಿಯುತ್ತದೆ. ಆದಕ್ಕಾಗಿ ನಿಸರ್ಗ ಸಹಜವಾದ ಕ್ರೌರ್ಯದ ಮುಖವನ್ನು ಹೆಚ್ಚಿನ ಮಟ್ಟಿಗೆ ದೂರವಿರಿಸಿ ಪ್ರೀತಿಯ ಮುಖಕ್ಕೆ ಹೆಚ್ಚು ಹತ್ತಿರವಾಗಬೇಕಾಗುತ್ತದೆ.

ಆದರೆ ಅಣ್ವಸ್ತ್ರ ಸ್ಫೋಟನೆ, ಯುದ್ಧೋನ್ಮಾದ ಮತ್ತು ಇದೇ ಧಾಟಿಯ ಇನ್ನಿತರ ಚಟುವಟಿಕೆಗಳು ಏನನ್ನು ಹೇಳುತ್ತವೆ ? ನಿಸರ್ಗಸಹಜವಾಗಿ ನಡೆಯುವ ಪ್ರೀತಿ ಮತ್ತು ಕ್ರೌರ್ಯಗಳ ನಡುವಿನ ನಿರಂತರ ಸಂಘರ್ಷದಲ್ಲಿ ಕ್ರೌರ್ಯ ಹೆಚ್ಚು ಜಯಶೀಲ ವಾಗುತ್ತಿದೆ ಎಂಬುದನ್ನು ತಿಳಿಸುತ್ತದೆ. ಹೀಗೆ, ಕ್ರೌರ್ಯ ವಿಜಯ ಪತಾಕೆಯನ್ನು ಹಾರಿಸುವುದಕ್ಕೆ ಕಾರಣವಾಗುವ ಅಂಶಗಳು ಹೀಗಿವೆ.

ಆರ್ಥಿಕ ವ್ಯಾಪ್ತಿಯನ್ನು ಹಿಗ್ಗಿಸುವ ಮನೋಭಾವನೆ ಇನ್ನೊಂದು ದೇಶಕ್ಕೂ, ಇನ್ನೊಬ್ಬ ವ್ಯಕ್ತಿಗೂ ಇರುವಂಥ ಅಂಥದೇ ಮನೋಭಾವನೆಯನ್ನು ಗೌಣವಾಗಿ ಪರಿಗಣಿಸುವಂತೆ ಮಾಡುತ್ತದೆ. ಮತ್ತೊಂದು ಶಕ್ತಿಯ ಹಿತಾಸಕ್ತಿಯನ್ನು ಕ್ಷುಲ್ಲಕವಾಗಿ ಕಾಣುವ ಮನಸ್ಥಿತಿ ರೂಪು ತಳೆಯುವುದು ಶಕ್ತಿ ಸಂಚಯನದ ಆಧಿಕ್ಯದಿಂದ (ನೈತಿಕ ಸಂಸ್ಕಾರದ ಶಕ್ತಿಯನ್ನು ಹೊರತುಪಡಿಸಿ). ಆರ್ಥಿಕ ಶಕ್ತಿ ಇರಬಹುದು, ರಾಜತಾಂತ್ರಿಕ ಶಕ್ತಿ ಇರಬಹುದು, ಇವೆಲ್ಲದರ ಮೂಲ ಒಂದೇ. ಅದು ಬೌದ್ಧಿಕ ಶಕ್ತಿ, ಹಾಗೂ ಅದರಿಂದ ಜನ್ಯವಾದ ವೈಜ್ಞಾನಿಕ - ತಾಂತ್ರಿಕ ಶಕ್ತಿ. ಇಲ್ಲಿ ವಿಜ್ಞಾನದ ಬಗ್ಗೆಯಾಗಲಿ, ತಂತ್ರಜ್ಞಾನದ ಬಗ್ಗೆಯಾಗಲಿ, ಮನುಷ್ಯನ ಬುದ್ಧಿ ವಿಕಾಸದ ಬಗ್ಗೆಯಾಗಲಿ ಯಾವ ಆರೋಪವೂ ಇಲ್ಲ. ಇವೆಲ್ಲವೂ ತಮ್ಮ ಮೂಲ ಉದ್ದೇಶದಲ್ಲಿ ಜಗತ್ತಿನ ಕಲ್ಯಾಣವನ್ನೇ ಗುರಿಯಾಗಿ ಇರಿಸಿಕೊಂಡಿರುತ್ತವೆ. ಆದರೆ ಬುದ್ಧಿ ಜನ್ಯವಾದ ಈ ಸಾಧನಗಳು ತಪ್ಪು ಕೈಗಳಿಗೆ ಸಿಕ್ಕಾಗ ಕ್ರೌರ್ಯ ತಾಂಡವವಾಡಿ ಬಿಡುತ್ತದೆ. ಈ ತಪ್ಪು ಕೈಗಳೆಂದರೆ ಮಾನವ ಸಂವೇದನೆಗಳನ್ನು ಅರ್ಥ ಮಾಡಿಕೊಳ್ಳ ಲಾಗದ ಕೈಗಳೇ ಆಗಿವೆ. ಅಂಥಲ್ಲಿ ಸಂವೇದನೆಗಳಿರುವ ಒಬ್ಬ ವ್ಯಕ್ತಿ ಹೇಗೆ ಪ್ರತಿಕ್ರಿಯಿಸುತ್ತಾನೆ ಎಂಬುದಕ್ಕೆ ಅಣುಶಕ್ತಿಯನ್ನು ಕಂಡುಹಿಡಿಯುವಲ್ಲಿ ಪ್ರಮುಖ ಪಾತ್ರ ವಹಿಸಿದ ಆಲ್ಬರ್ಟ್ ಐನ್‌ಸ್ಟೈನ್ ಅವರು, ಜಪಾನ್‌ನ ಮೇಲೆ ಅಣ್ವಸ್ತ್ರವನ್ನು ಆಸ್ಫೋಟಿಸಿದಾಗ ನೀಡಿದ ಪ್ರತಿಕ್ರಿಯೆಯಲ್ಲಿ ತಿಳಿಯಬಹುದು. ಅವರು, ''ನಾನು ವಿಜ್ಞಾನಿಯಾಗುವುದರ ಬದಲು ನನ್ನ ತಂದೆಯಂತೆ ಗಡಿಯಾರ ರಿಪೇರಿಯವನಾಗಿದ್ದರೆ ಚೆನ್ನಾಗಿತ್ತು'' ಎಂದು ಕನಲಿದ್ದರು. ಆ ಕನಲಿಕೆ 'ಪ್ರೀತಿ' ಎಂಬ ಮೌಲ್ಯಕ್ಕೆ ಹಿಡಿದ ಕೈಗನ್ನಡಿಯಾಗಿ ಕಾಣಿಸುತ್ತದೆ. ಆದರೇನು ? ವಿಜ್ಞಾನಿ ಆವಿಷ್ಕರಿಸಿದ ಸ್ವತ್ತು ಪ್ರಭುತ್ವದ ಕೈಸೇರಿದಾಗ, ಆ ಪ್ರಭುತ್ವಕ್ಕೆ ಮಾನವ ಸಂವೇದನೆಗಳನ್ನು ಗ್ರಹಿಸುವ ಶಕ್ತಿ ಇಲ್ಲದೆ ಹೋದಾಗ ಅನಾಹುತ ನಡೆದೇ ನಡೆಯುತ್ತದೆ.

ಜಗತ್ತನ್ನು ನಾಶಪಡಿಸುವಂಥ ಅಣ್ವಸ್ತ್ರಗಳ ವಿಷಯ ದಲ್ಲಿ ಶಕ್ತಿ ಸಮತೋಲನದಿಂದ ಅನಾಹುತವನ್ನು ತಡೆಯ ಬಹುದು ಎನ್ನಲಾಗದು. ಹಿಂದೆ ಜಪಾನ್‌ನ ಮೇಲೆ ಅಣ್ವಸ್ತ್ರ ಆಸ್ಫೋಟನೆ ನಡೆದಾಗ ಶಕ್ತಿ ಸಮತೋಲನ ವಿದ್ದಂತಹ ಒಂದು ಸ್ಥಿತಿ ಇತ್ತು. ಏಕೆಂದರೆ ಜಪಾನ್ ಕೂಡ ಏಷ್ಯಾದ ಅತಿ ಪ್ರಬಲವಾದ ಶಕ್ತಿಯಾಗಿತ್ತು. ಆದರೆ ಆ ರಾಷ್ಟ್ರಕ್ಕೆ ಅಣ್ವಸ್ತ್ರ ಆಸ್ಫೋಟನೆಯ ಪರಿಣಾಮದ ಬಗ್ಗೆ ವ್ಯಾಪಕ ತಿಳಿವಳಿಕೆ ಇರಲಿಲ್ಲ. ಅಮೆರಿಕಾಕ್ಕೂ ಸಹ ಅತ್ಯಂತ ನಿಖರವಾದ ಜ್ಞಾನ ಇತ್ತು ಎಂದು ಭಾವಿಸಲು ಸಾಧ್ಯವಿಲ್ಲ. ಯಾವ ವಸ್ತುವೇ ಆದರೂ ಪ್ರಾಯೋಗಿಕವಾಗಿ ಜಾರಿಕೊಳ್ಳುವ ಮೊದಲು ಅದರ ಬಗ್ಗೆ ಒಂದು ಗ್ರಹಿಕೆ ಇರಬಹುದೇ ಹೊರತು ಖಚಿತತೆ ಇರಲು ಸಾಧ್ಯವಾಗದು. ಅಂಥಲ್ಲಿ ಪರೀಕ್ಷಾರ್ಥವಾಗಿ ನಡೆದ ಪ್ರಯೋಗ ಅದರ ಬಗ್ಗೆ ಸ್ಪಷ್ಟ ತಿಳಿವಳಿಕೆ ಕೊಟ್ಟೀತು ಎನ್ನಲು ಕಷ್ಟವಾಗುತ್ತದೆ. ಆದರೆ ಒಂದು ಬಾರಿ ಆ ತಿಳಿವಳಿಕೆಯನ್ನು ಸಂಪಾದಿಸಿದ ಮೇಲೆಯೂ ನಡೆಯುತ್ತಿರುವ ಅಣ್ವಸ್ತ್ರ ಪೈಪೋಟಿ ಇದೆಯಲ್ಲ, ಅದು ಜೀವ ಜಗತ್ತಿನ ದಾರುಣವಾದ ಸ್ಥಿತಿಯಲ್ಲದೆ ಬೇರೇನಲ್ಲ. ಇಂಥಲ್ಲಿ ಅಣುಶಕ್ತಿ ಸಮತೋಲನವೆನ್ನುವುದು ಸ್ವ ಪ್ರತಿಷ್ಠೆಯ ಮೇಲಾಟಕ್ಕೂ ಕಾರಣವಾಗಬಹುದು ಎಂಬ ಸತ್ಯವನ್ನು ನೆನಪಿಡಬೇಕು. ಆದಕಾರಣ ಅಣ್ವಸ್ತ್ರ ನಿಶ್ಶಸ್ತ್ರೀಕರಣಕ್ಕೆ ವಿಶ್ವದ ರಾಷ್ಟ್ರಗಳು ಒಡಂಬಡುವುದು ಔಚಿತ್ಯಪೂರ್ಣ ವಾಗುತ್ತದೆ. ಹೀಗಾದಲ್ಲಿ ಮನುಷ್ಯ ತನ್ನ ಬೌದ್ಧಿಕ ಸಾಧನೆಯಿಂದ ಒಂದು ಹೆಜ್ಜೆ ಹಿಂದಕ್ಕಿಡಬೇಕಾಗುತ್ತದೆ ಎಂಬುದು ನಿಜವೇ. ಆದರೆ ಹಾಗೆ ಹಿಂದಕ್ಕಿಡುವ ಒಂದು ಹೆಜ್ಜೆ ಇಡೀ ಪೃಥ್ವಿಯನ್ನು ಉಳಿಸಬಲ್ಲುದು ಎನ್ನುವಾಗ ಒಂದು ಹೆಜ್ಜೆ ಹಿಂದಕ್ಕಿಡುವುದರಿಂದ ನಾವು ಕಳೆದುಕೊಳ್ಳುವುದಕ್ಕಿಂತ ಉಳಿಸಿ ಕೊಳ್ಳುವುದೇ ಹೆಚ್ಚಿನದ್ದಾಗಿರುತ್ತದೆ. ಆದ್ದರಿಂದ ಅಂಥ ಹೆಜ್ಜೆ ಅಪೇಕ್ಷಣೀಯ. ಅಣ್ವಸ್ತ್ರ ನಿಶ್ಶಸ್ತ್ರೀಕರಣದ ಕುರಿತು ಸಾಕಷ್ಟು ಚರ್ಚೆಗಳು, ಪ್ರಯತ್ನಗಳು ನಡೆದಿರುವುದಾದರೂ ಅದು ಸಾಧ್ಯವಾಗದೆ ಇರುವುದು ವಿಷಾದನೀಯ.

ಇಂಥಲ್ಲಿ ವಿಶ್ವದ ರಾಷ್ಟ್ರಗಳು ಇಂಥ ಒಂದು ನಿರ್ಧಾರಕ್ಕೆ ಸಿದ್ಧವಾದಾವೇ ಎಂಬುದು ಗಂಭೀರ ಪ್ರಶ್ನೆ. (ಇದರಿಂದ ವಿಶೇಷ ಉಪಯೋಗವಾಗಲಾರದು ಎಂದು ತಿಳಿದಿದ್ದರೂ ಹೇಳಲೇಬೇಕಾಗುತ್ತದೆ). ಪ್ರತಿಯೊಂದು ರಾಷ್ಟ್ರ, ಪ್ರತಿಯೊಂದು ವ್ಯವಸ್ಥೆ ಏನೇನೋ ಕಾರಣಗಳನ್ನು ಹುಡುಕಿಕೊಂಡು ಕ್ರೌರ್ಯದ ವಿಜಯ ಪತಾಕೆ ಹಾರಿಸಲು ನಾ ಮುಂದು, ತಾ ಮುಂದು ಎಂದು ಪೈಪೋಟಿ ನಡೆಸುತ್ತಿರುವಾಗ ಈ ಪ್ರಶ್ನೆ ಅರ್ಥಹೀನವೆನಿಸಬಹುದು. ಆದರೆ ಪ್ರಯತ್ನ ಮಾಡಬಾರದೆಂದೇನೂ ಇಲ್ಲ. ಈ ಪ್ರಶ್ನೆಗೆ ಖಂಡಿತವಾಗಿಯೂ ಉತ್ತರ ಸಿಗುತ್ತದೆ – ಪೃಥ್ವಿಯನ್ನು ನಾಶ ಪಡಿಸುವಂಥ ಬೌದ್ಧಿಕ ಶಕ್ತಿ ಹೊಂದಿರುವುದಕ್ಕಿಂತ ಬುದ್ಧಿ ಶೂನ್ಯರಾಗಿ ಬದುಕುವುದು ಎಷ್ಟೋ ಮೇಲು ಎಂಬ ಭಾವನೆ ವಿಶ್ವದ ಜನ ಸಮುದಾಯವನ್ನು ಕಾಡಿದಾಗ, ಜಗತ್ತಿನ ಜನತೆಯ ಬೌದ್ಧಿಕ ಸಾಮರ್ಥ್ಯಕ್ಕೆ ಮಾನವ ಸಂವೇದನೆಗಳು ಮೆರುಗು ಕೊಟ್ಟಾಗ, ಮನುಷ್ಯ ಸಮೂಹದ ಬಯಕೆಗಳಿಗೆ ಸಂಸ್ಕಾರದ ಹೊಳಪು ಸಿಕ್ಕಾಗ (ಆ ಸಂಸ್ಕಾರವೇ ಇಲ್ಲಿಯ ತನಕ ಪೃಥ್ವಿ ನಾಶವಾಗದಂತೆ ತಡೆದಿದೆ. ಅದು ಇಲ್ಲವಾಗುವ ಮೊದಲು ಅಣ್ವಸ್ತ್ರ ನಿಶ್ಶಸ್ತ್ರೀಕರಣ ನಡೆಯಬೇಕಾಗುವುದು ಅಗತ್ಯ), ಆಯಾ ದೇಶಗಳ ಜನತೆ ಪ್ರಭುತ್ವದ ಮೇಲೆ ತರುವ ಒತ್ತಡದಿಂದ ಈ ಕಾರ್ಯ ಸಾಧ್ಯವಾದೀತು.

ಅರವಿಂದ ಚೊಕ್ಕಾಡಿ
'ಕಮಲದೀಪ', ತೆಳ್ಳಾರು ಕ್ರಾಸ್ ರಸ್ತೆ, ಕಾರ್ಕಳ - ೫೭೪ ೧೦೪

ಬೆವಸಾಯವ ಮಾಡಿ ಮನೆಯ ಬೀಯಕ್ಕೆ ಬತ್ತವಿಲ್ಲದಿದ್ದರೆ,
ಆ ಬೆವಸಾಯದ ಘೋರವೇತಕಯ್ಯ ?
ಕ್ರಯ ವಿಕ್ರಯವ ಮಾಡಿ ಮನೆಯ ಸಂಚು ನಡೆಯದನ್ನಕ್ಕ,
ಆ ಕ್ರಯ ವಿಕ್ರಯದ ಘೋರವೇತಕಯ್ಯ ?
ಒಡೆಯನನೋಲೈಸಿ ತನುವಿಂಗೆ ಅಷ್ಟಭೋಗವ ಪಡೆಯದಿದ್ದರೆ,
ಆ ಓಲಗದ ಘೋರವೇತಕಯ್ಯ ?
ಭಕ್ತನಾಗಿ ಭವಂ ನಾಸ್ತಿಯಾಗದಿದ್ದರೆ,
ಆ ಉಪದೇಶವ ಕೊಟ್ಟ ಗುರು, ಕೊಂಡ ಶಿಷ್ಯ, ಇವರಿಬ್ಬರ ಮನೆಯಲ್ಲಿ
ಮಾರಿ ಹೊಗಲಿ, ಗುಹೇಶ್ವರ ಲಿಂಗವತ್ತಲೇ ಹೋಗಲಿ.

ಉಪಜೀವನಕ್ಕಾಗಿ ಆಶ್ರಯಿಸಿದ ಉದ್ಯೋಗವೊಂದು ನಿರೀಕ್ಷಿತ ಫಲ ನೀಡದಿದ್ದರೆ ಅದನ್ನು ಅವಲಂಬಿಸಿ ಫಲವಿಲ್ಲ ಎನ್ನುವುದು ಅಲ್ಲಮಪ್ರಭುವಿನ ಈ ವಚನದಲ್ಲಿ ಸ್ಪಷ್ಟವಾಗಿದೆ. ವ್ಯವಸಾಯ ಮಾಡಿಯೂ ಮನೆಯ ಬಳಕೆಗೆ ಭತ್ತವಿಲ್ಲದಿದ್ದರೆ, ವ್ಯವಹಾರ ಮಾಡಿಯೂ ಮನೆಯ ನಿರ್ವಹಣೆ ನಡೆಯದಿದ್ದರೆ, ಓಲಗದಲ್ಲಿ ಒಡೆಯನನ್ನು ಓಲೈಸಿಯೂ ಹೊಟ್ಟೆಗೆ ಏನೂ ಇಲ್ಲವಾಗುವುದಾದರೆ

# ಜಾಗತೀಕರಣದ ಕರಿ ನೆರಳಲ್ಲಿ ಉದ್ಯೋಗ ವ್ಯವಸ್ಥೆ

**ಉದ್ಯೋಗ ವ್ಯವಸ್ಥೆ ಬದುಕಿನ ಮೂಲ ಬುನಾದಿ. ಇದರ ಸಡಿಲಿಕೆ ಇಡೀ ಸಾಮಾಜಿಕ ವ್ಯವಸ್ಥೆಯಲ್ಲಿ ಬಿರುಕುಗಳನ್ನೆಬ್ಬಿಸುತ್ತದೆ. ಇಂಥ ಪ್ರಮುಖ ವ್ಯವಸ್ಥೆಯನ್ನು ಗಟ್ಟಿಗೊಳಿಸುವಲ್ಲಿ ಜಾಗತೀಕರಣ ಪ್ರಕ್ರಿಯೆ ಭಾರತದಲ್ಲಿ ಎಷ್ಟರ ಮಟ್ಟಿಗೆ ಸಫಲವಾಗಿದೆ ಎನ್ನುವುದನ್ನು ತಿಳಿಯುವ ಒಂದು ಪ್ರಯತ್ನವೇ ಈ ಲೇಖನದ ಉದ್ದೇಶ.**

**ಜಿ. ಎನ್. ಮಲ್ಲಿಕಾರ್ಜುನಪ್ಪ**

ಅಂಥ ಉದ್ಯೋಗವನ್ನು ಆಶ್ರಯಿಸುವುದು ನಿಷ್ಪ್ರಯೋಜಕ. ಹಾಗೆಯೇ ಬದುಕಿನ ಅಗತ್ಯಗಳನ್ನು ಪೂರೈಸಲಾಗದ ಜ್ಞಾನ ಮತ್ತು ತರಬೇತಿಗಳೂ ಸಹ. ಆಧ್ಯಾತ್ಮದ ತುತ್ತ ತುದಿಯಲ್ಲಿ ನಿಂತ ಅಲ್ಲಮಪ್ರಭುವಿನಂತಹ ವಿರಕ್ತ ವಿರಾಗಿ ಕೂಡ ಲೌಕಿಕ ಬದುಕಿಗಾಗಿ ಉಪಯುಕ್ತ ಉದ್ಯೋಗ ಬೇಕೆಂಬುದನ್ನು ಒತ್ತಿ ಹೇಳುತ್ತಾನೆ.

ಯಾವುದೇ ಸಮಾಜದ ಅಥವಾ ದೇಶದ ನೆಮ್ಮದಿ ಆ ಸಮಾಜದ ಅಥವಾ ದೇಶದ ಅರ್ಥವ್ಯವಸ್ಥೆ ಮತ್ತು ಅಲ್ಲಿಯ ಜನರ ಉದ್ಯೋಗ ಪರಿಸ್ಥಿತಿಯನ್ನ ವಲಂಬಿಸಿರುತ್ತದೆ. ಅನುಭೋಗಕ್ಕಾಗಿ ಉತ್ಪಾದನೆ, ಉತ್ಪಾದನೆಗಾಗಿ ಉದ್ಯೋಗ ಪರಸ್ಪರ ಮೇಳೈಸದಿದ್ದರೆ ಜನ ಬದುಕುಳಿಯುವುದು ಸಾಧ್ಯವಿಲ್ಲ. ಒಂದು ಸಂಸ್ಕೃತಿಯ ಅಸ್ತಿತ್ವಕ್ಕೆ ಅಲ್ಲಿನ ಉತ್ಪಾದನಾ ವ್ಯವಸ್ಥೆಯೇ ಮೂಲ ಬೇರು. ಇಲ್ಲಿ ಆಗುವ ಬದಲಾವಣೆಗಳು, ಉದ್ಭವಿಸುವ ಬೆಳವಣಿಗೆಗಳು ಬದುಕಿನ ಪ್ರತಿಯೊಂದು ಮಗ್ಗುಲನ್ನೂ ಪ್ರಭಾವಿಸುತ್ತವೆ. ಇದರಿಂದಾಗಿಯೇ ಆರ್ಥಿಕ ವಲಯ ಅಷ್ಟೊಂದು ಪ್ರಮುಖ ಕ್ಷೇತ್ರವಾಗಿದೆ. ಇವತ್ತಿನ ಜಾಗತೀಕರಣ ಕೂಡ ಅಂಥ ಬದಲಾವಣೆಯ ಒಂದಂಶ. ಇಡೀ ಭೂಗೋಳವನ್ನು ಜಾಗತಿಕ ಗ್ರಾಮವನ್ನಾಗಿಸುವ ಪ್ರಯತ್ನಗಳು ನಿಜಕ್ಕೂ ಸ್ವಾಗತಾರ್ಹ. ಈ ಪ್ರಯತ್ನಗಳು ಜನರ ಮಧ್ಯೆ ದೇಶ ದೇಶಗಳ ಮಧ್ಯೆ ಸಾಮರಸ್ಯದ ಸಂಬಂಧಗಳನ್ನು ಬೆಸೆಯುವುದಾಗಿದ್ದಿದ್ದರೆ ಅವುಗಳನ್ನು ವಿರೋಧಿಸುವುದು ಮೂರ್ಖತನವಾಗುತ್ತಿತ್ತು. ಯಾವುದೇ ಹೊಸ ಬದಲಾವಣೆಯಿಂದ ಸದ್ಯದ ಬದುಕು ಉನ್ನತಮಟ್ಟಕ್ಕೇರಬೇಕೆಂಬುದು ಪ್ರತಿಯೊಬ್ಬ ಜನಸಾಮಾನ್ಯನ ಆಶಯ. ಹಾಗಾಗದಿದ್ದರೆ ಅವನು ಅದನ್ನು ಸಹಜವಾಗಿಯೇ ವಿರೋಧಿಸುತ್ತಾನೆ. ಇವತ್ತಿನ ಜಾಗತೀಕರಣ ಪ್ರಕ್ರಿಯೆ ಸದ್ಯದ ಬದುಕನ್ನು ಎತ್ತರಕ್ಕೇರಿಸುವುದಿರಲಿ, ಜನತೆಯ ಬಹುಭಾಗದ ಬದುಕಿನ ಮಟ್ಟವನ್ನು ಕೆಳಗಿಳಿಸುವತ್ತ ಮುಂದುವರಿಯುತ್ತಿರುವಂತೆ ಕಂಡುಬರುತ್ತಿದೆ. ಇದರಿಂದಾಗಿಯೇ ಜಗತ್ತಿನ ಮೂಲೆ ಮೂಲೆಗಳಲ್ಲಿನ ಜನರು ಈ ಹೊಸ ಗಾಳಿಯ ವಿರುದ್ಧ ಬಂಡೇಳುತ್ತಿದ್ದಾರೆ. ವಸಾಹತುಶಾಹಿ ಮೂಲದ ಈ ಪ್ರಕ್ರಿಯೆ ಒಂದು ಅಲ್ಪಸಂಖ್ಯೆಯ ವರ್ಗಕ್ಕೆ ಮಾತ್ರ ಐಶಾರಾಮದ ಬದುಕನ್ನು ನೀಡುವತ್ತ ಸಾಗುತ್ತಿದೆ. ಪರಿಸ್ಥಿತಿಯ ದುರ್ಲಾಭ ಪಡೆಯುವ ಅವರು ಮಾತ್ರ ಇದನ್ನು ಸಮರ್ಥಿಸುತ್ತಾರೆ. ಯಾವುದೇ ಸಂದರ್ಭದಲ್ಲಿ ವ್ಯಕ್ತಿಯೊಬ್ಬ ಪ್ರಸ್ತುತ ಉದ್ಯೋಗ ಅಥವಾ ಕಸುಬು ಕಳೆದುಕೊಂಡರೆ ಅದರ ಸ್ಥಾನದಲ್ಲಿ ಮೊದಲಿಗಿಂತಲೂ ಉತ್ತಮವಾದ ಮತ್ತೊಂದು ಉದ್ಯೋಗ ಅಥವಾ ಕಸುಬು ಅವನಿಗೆ ದೊರೆಯಬೇಕು. ಆವಾಗಲೇ ಅವನ ಬದುಕಿನ ಸ್ವಾಸ್ಥ್ಯ ಮತ್ತು ಅವನಿರುವ ಸಮಾಜದ ಆರೋಗ್ಯ ಸರಿ ಇರುತ್ತದೆ. ಇವತ್ತಿನ ಜಾಗತೀಕರಣದ ಹೆಸರಿನ ವಿದ್ಯಮಾನಗಳು ಇದನ್ನು ಸಾಧ್ಯವಾಗಿಸುವುದಿಲ್ಲ.

ಕಳೆದ ಹನ್ನೆರಡು ವರ್ಷಗಳಲ್ಲಿ, ಒಟ್ಟಾರೆಯಾಗಿ, ಈ ದೇಶದಲ್ಲಿ ಉದ್ಯೋಗಾವಕಾಶಗಳ ಬೆಳವಣಿಗೆಯ ದರ ಅಂದರೆ ಒಟ್ಟು ಉದ್ಯೋಗಗಳು ಹೆಚ್ಚಾಗಿವೆ ಎಂದು ಆತ್ಮವಿಶ್ವಾಸದಿಂದ ಸ್ಪಷ್ಟವಾಗಿ ಯಾವ ತಜ್ಞರೂ ಹೇಳುವ ಸ್ಥಿತಿಯಲ್ಲಿ ಇಲ್ಲ ಎನ್ನುವುದು ಮಾಹಿತಿ ತಂತ್ರಜ್ಞಾನದ ಇವತ್ತಿನ ಉತ್ತುಂಗ ಸ್ಥಿತಿಯ ಸಂದರ್ಭದಲ್ಲಿ ಆಶ್ಚರ್ಯಕರ. ಈ ನಿಟ್ಟಿನಲ್ಲಿ ಹೇಳಿಕೊಳ್ಳಬಹುದಾದಂತಹ ಸಮಗ್ರ ಅಧ್ಯಯನ ಕೂಡ ನಡೆದಿಲ್ಲ ಎಂದರೆ ತಪ್ಪಾಗಲಾರದು. ಯೋಜನಾ ಆಯೋಗ, ರಾಷ್ಟ್ರೀಯ ಮಾದರಿ ಸಮೀಕ್ಷೆ ಕೇಂದ್ರ, ಅಂಕಿ-ಸಂಖ್ಯಾ ಸಂಸ್ಥೆ ಮತ್ತು ಸರ್ಕಾರೇತರ ತಜ್ಞರುಗಳ ಅಧ್ಯಯನಗಳ ಮಧ್ಯೆ ಕೂಡ ಸ್ಪಷ್ಟ ಸಾಮ್ಯತೆ ಇಲ್ಲ. ಹೀಗಿರುವಾಗ ಇನ್ನು ಜನಸಾಮಾನ್ಯನಿಗೆ ಈ ಮಾಹಿತಿ ಸ್ಪಷ್ಟವಾಗುವುದಾದರೂ ಹೇಗೆ ? ಆದಾಗ್ಯೂ ವಿವಿಧ ಮೂಲಗಳಿಂದ ಕೂಡಿಹಾಕಿದ ಕೆಲವು ಅಂಕಿ-ಸಂಖ್ಯೆಗಳನ್ನು ಈ ಉದ್ದೇಶದಿಂದ ವಿಶ್ಲೇಷಿಸಿದರೆ ಅಮೆರಿಕಾ ಮೂಲದ ಹೊಸ ಆರ್ಥಿಕ ನೀತಿಯಿಂದಾಗಿ ಉದ್ಯೋಗ ವ್ಯವಸ್ಥೆ ಗಟ್ಟಿಗೊಳ್ಳುವುದಿರಲಿ ಅದು ಕುಸಿಯುತ್ತಿರುವ ಭಾವನೆಯನ್ನು ಹುಟ್ಟಿಸುತ್ತಿದೆ. ಖಾಸಗೀ ವಲಯದಲ್ಲಿ ಮತ್ತು ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಸೃಷ್ಟಿಯಾಗುತ್ತಿರುವ ಕೆಲವೇ ಉದ್ಯೋಗಗಳನ್ನು ವೈಭವೀಕರಿಸಿ ಇವುಗಳೇ ಅಭಿವೃದ್ಧಿಯ ಅವಕಾಶಗಳು ಎಂದು ಬಿಂಬಿಸಲಾಗುತ್ತಿದೆಯೇ ಹೊರತು ಕೃಷಿ ಕ್ಷೇತ್ರದಲ್ಲಿ, ಸರ್ಕಾರಿ ವಲಯದಲ್ಲಿ ಸಾರ್ವಜನಿಕ ಉದ್ಯಮಗಳಲ್ಲಿ ಕುಸಿಯುತ್ತಿರುವ ಉದ್ಯೋಗಾವಕಾಶಗಳ ಸಂಖ್ಯೆಯನ್ನು ಅಷ್ಟಾಗಿ ಗಣನೆಗೆ ತೆಗೆದುಕೊಳ್ಳುತ್ತಿಲ್ಲ. ಯಾವುದೇ ಹೊಸ ಬದಲಾವಣೆಯ ನೀತಿ ಸೂತ್ರಗಳನ್ನು ಜಾರಿಗೊಳಿಸುವ ಮೊದಲು ತಜ್ಞರ ವಲಯದಲ್ಲಿ ಅವುಗಳನ್ನು ತೀವ್ರ ಚರ್ಚೆಗೊಳಪಡಿಸಿ, ನೀತಿ ಸೂತ್ರಗಳನ್ನು ರೂಪಿಸಿ, ಅನುಷ್ಠಾನದ ಮಾದರಿ ಪ್ರಯೋಗಗಳನ್ನು ಮಾಡಿ, ಆ ಅನುಭವದ ಹಿನ್ನೆಲೆಯಲ್ಲಿ ಸಾಮೂಹಿಕ ಅನುಷ್ಠಾನಕ್ಕೆ ತರುವುದು ಸರ್ವ ಸಮ್ಮತವಾದ ಕ್ರಮ. ಉದಾರೀಕರಣ ಮತ್ತು ಖಾಸಗೀಕರಣಕ್ಕೆ ಸಂಬಂಧಿಸಿದಂತೆ ಇಂಥ ಚಿಂತನ ಮಂಥನಗಳಾಗಲಿ ಮಾದರಿ ಪ್ರಯೋಗಗಳಾಗಲಿ ನಡೆಯದೆ ಕೇವಲ ಜಾಗತಿಕ ವ್ಯಾಪಾರ ಸಂಸ್ಥೆಯೊಡನೆ ಒಪ್ಪಂದದ ಕಾರಣದಿಂದಾಗಿ ಜಾರಿಗೊಂಡದ್ದರಿಂದ ಮತ್ತು ಜಾರಿಗೊಳ್ಳುತ್ತಿರುವುದರಿಂದ ಇವತ್ತಿನ ಅನಾಹುತಗಳು ಸೃಷ್ಟಿಯಾಗುತ್ತಿವೆ. ಇದರಿಂದಾಗಿ ಒಂದು ಕಸುಬನ್ನು ನಿರ್ವಹಿಸುತ್ತಿದ್ದ ವ್ಯಕ್ತಿ ಮತ್ತೊಂದು ಕಸುಬನ್ನು ಅನುಸರಿಸುವ ಜ್ಞಾನವಿಲ್ಲದೆ, 'ಇರುವ ಕಸುಬನ್ನು ಕಳೆದುಕೊಂಡು' ಕೆಳದರ್ಜೆಯ ಕೌಶಲ್ಯದ ಕಸುಬುಗಳಿಗೆ ಪಲ್ಲಟವಾಗುತ್ತಿರುವುದು ಕಂಡುಬರುತ್ತಿದೆ. ಜಾಗತಿಕ ಮಾರುಕಟ್ಟೆಯ ಪೈಪೋಟಿಯನ್ನು ಎದುರಿಸುವ ಸಬಲೀಕರಣವನ್ನು ಆಂತರಿಕ ಉದ್ಯಮಗಳಿಗೆ, ಕೃಷಿಕರಿಗೆ, ಕಾರ್ಮಿಕರಿಗೆ ಕಲ್ಪಿಸುವ ಮೂಲ ಸೌಲಭ್ಯ ವ್ಯವಸ್ಥೆ ಇಲ್ಲದೆ ಅವರಿಗೆ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧಿಸುವ ಬೋಧನೆ ನೀಡಲಾಯಿತು. ಈಗಾಗಲೇ ಇಂಥ ಸಬಲೀಕರಣವನ್ನು ಹೊಂದಿದ್ದ ವಿದೇಶಿ

ಸಂಸ್ಥೆಗಳಿಗೆ ಆಂತರಿಕ ಮಾರುಕಟ್ಟೆಯನ್ನು ತೆರೆಯಲಾಯಿತು; ಆಯಾತ - ನಿರ್ಯಾತ ನಿರ್ಬಂಧಗಳನ್ನು ಸಡಿಲಿಸಲಾಯಿತು. ಇದರ ಫಲವಾಗಿ ಇತ್ತ ಈ ದೇಶದೊಳಗಿನ ಕೃಷಿಕರಿಗೆ ಮತ್ತು ಉದ್ಯಮಿಗಳಿಗೆ ಆಂತರಿಕ ಮಾರುಕಟ್ಟೆಯೂ ಇಲ್ಲವಾಗಿ, ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧಿಸುವ ಶಕ್ತಿಯೂ ಇಲ್ಲವಾಗಿ, ಸರ್ಕಾರದ ನೆರವೂ ತಪ್ಪಿ, ರೆಕ್ಕೆ ಮುರಿದ ಹಕ್ಕಿಗಳಂತೆ ಉತ್ಪಾದನಾ ಘಟಕಗಳು ಒಂದೊಂದೇ ಮುಚ್ಚತೊಡಗಿದವು. ಅಲ್ಲಿಂದ ಹೊರದೂಡಲ್ಪಟ್ಟ ನಿರುದ್ಯೋಗಿ ಕಾರ್ಮಿಕ ಸೈನ್ಯ ಕೈಗಾರಿಕೆಯಿಂದ ಕೃಷಿಗೆ, ಕೃಷಿಯಿಂದ ಸಣ್ಣ ಪುಟ್ಟ ಕಸುಬುಗಳಿಗೆ ಹಂಚಿ ಹೋಯಿತು. ಜೊತೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಹ ತಮ್ಮ ಇಲಾಖೆಗಳಲ್ಲಿನ ಲಕ್ಷಾಂತರ ಉದ್ಯೋಗಗಳನ್ನು ರದ್ದುಪಡಿಸಿದವು. ಇದು ಜಾಗತೀಕರಣ, ಉದಾರೀಕರಣ ನೀತಿಯು ಸೃಷ್ಟಿಸುತ್ತಿರುವ ಅವಾಂತರ, ಸಾಮಾಜಿಕ ಅನ್ಯಾಯ.

೨೦೦೨-೦೩ರ ಆರ್ಥಿಕ ಸಮೀಕ್ಷೆಯ ಪ್ರಕಾರ ೧೯೮೩-೯೪ರ ಅವಧಿಯಲ್ಲಿ ಉದ್ಯೋಗ ಬೆಳವಣಿಗೆಯ ವಾರ್ಷಿಕ ದರ ೨.೭% ಇತ್ತು. ೧೯೯೪-೨೦೦೦ರ ಅವಧಿಯಲ್ಲಿ ಈ ದರ ೧.೦೭%ಕ್ಕೆ ಇಳಿಯಿತು.

೧೯೯೩-೯೪ರಲ್ಲಿ ಒಟ್ಟು ಉದ್ಯೋಗಾವಕಾಶಗಳಲ್ಲಿ ಕೃಷಿ ಕ್ಷೇತ್ರದ ಪಾಲು ಶೇ. ೬೦ರಷ್ಟಿತ್ತು. ೧೯೯೯-೨೦೦೦ನೇ ಸಾಲಿನ ಹೊತ್ತಿಗೆ ಅದು ಶೇ. ೫೭ಕ್ಕೆ ಇಳಿಯಿತು. ಇದೇ ವರ್ಷಾಂತ್ಯದಲ್ಲಿ ಸಂಘಟಿತ ವಲಯದ ಉದ್ಯೋಗ ಸೃಷ್ಟಿಯ ಪಾಲು ಶೇ ೮.೩೪ರಷ್ಟಿತ್ತು. ಇದರಲ್ಲಿ ಸಾರ್ವಜನಿಕ ವಲಯದ ಪಾಲು ಶೇ. ೫.೭ ಮತ್ತು ಖಾಸಗಿ ವಲಯದ ಪಾಲು ಶೇ. ೨.೮ರಷ್ಟು. ೨೦೦೦ನೇ ಸಾಲಿಗೆ ಹೋಲಿಸಿದರೆ ೨೦೦೧ನೇ ಸಾಲಿನಲ್ಲಿ ಸಾರ್ವಜನಿಕ ವಲಯದಲ್ಲಿ ಈ ದರ ಶೇ. ೦.೧ರಷ್ಟು ಹೆಚ್ಚಾಗಿದೆ. ಈ ಶೇ. ೦.೧ರಷ್ಟರ ಏರಿಕೆಯನ್ನೇ ಖಾಸಗೀ ಕರಣದಿಂದಾಗಿ ಉದ್ಯೋಗಾವಕಾಶಗಳು ಹೆಚ್ಚಾಗಿವೆ ಎಂದು ಬಿಂಬಿಸುವುದು ಎಷ್ಟರಮಟ್ಟಿಗೆ ಸರಿ? ಏಕೆಂದರೆ ಇಡೀ ಉದ್ಯೋಗ ವ್ಯವಸ್ಥೆಯಲ್ಲಿ ಸಂಘಟಿತ ವಲಯದಲ್ಲಿನ ಖಾಸಗಿ ವಲಯದ ಪ್ರಮಾಣ ತೀರಾ ಕಡಿಮೆ. ರಚನಾತ್ಮಕ ಬದಲಾವಣೆಗಳು ಸಕ್ರಿಯವಾಗಿ ಜಾರಿಗೊಂಡ ಅವಧಿಯಲ್ಲಿ ಉದ್ಯೋಗಾವಕಾಶಗಳ ಬೆಳವಣಿಗೆ ದರ ಶೇ. ೧ರಷ್ಟು ಕಡಿಮೆಯಾಗಲು ಏನು ಕಾರಣ? ಇದೇ ಆರ್ಥಿಕ ಸಮೀಕ್ಷೆಯ ಪ್ರಕಾರ ಶ್ರಮ ಆಧಾರಿತ ಕೈಗಾರಿಕೆಗಳಲ್ಲಿನ ಉತ್ಪಾದನೆಯ ಕಡಿತ, ಕೃಷಿಯಲ್ಲಿನ ಉದ್ಯೋಗಾವಕಾಶಗಳ ಕಡಿತ ಮತ್ತು ಈ ದರವನ್ನು ಲೆಕ್ಕಾಚಾರ ಹಾಕುವಾಗ ಆಧರಿಸಬೇಕಾದ ಒಟ್ಟು ರಾಷ್ಟ್ರೀಯ ಆದಾಯದ ಹೆಚ್ಚಳ ಮಾಪನದಲ್ಲಿ ಅನ್ವಯಿಸಿಕೊಂಡ ತಾಂತ್ರಿಕ ಅಂಶಗಳಲ್ಲಿನ ನ್ಯೂನತೆಗಳೇ ಉದ್ಯೋಗ ಬೆಳವಣಿಗೆಯ ದರ ಕಡಿಮೆಯಾಗಲು ಕಾರಣ. ಶ್ರಮ ಆಧಾರಿತ ಕೃಷಿ ಮತ್ತು ಕೈಗಾರಿಕೆಗಳಲ್ಲಿನ ಉತ್ಪಾದನೆಯ ಕುಸಿತಕ್ಕೆ ಕಾರಣಗಳನ್ನು ಹುಡುಕಿಕೊಂಡು ಹೊರಟರೆ ಅಂತಿಮವಾಗಿ ನಾವು ತಲುಪುವುದು ನಮ್ಮ ಆರ್ಥಿಕ ನೀತಿಯತ್ತಲೇ.

ಯೋಜನಾ ಆಯೋಗವು ಖ್ಯಾತ ತಜ್ಞ ಎಂ. ಎಸ್. ಆಹ್ಲುವಾಲಿಯಾ ಅವರ ಅಧ್ಯಕ್ಷತೆಯಲ್ಲಿ ನೇಮಿಸಿದ್ದ ಉದ್ಯೋಗಾವಕಾಶಗಳ ಕಾರ್ಯಪಡೆ ೨೦೦೧ನೇ ಸಾಲಿನಲ್ಲಿ ಸಲ್ಲಿಸಿದ್ದ ವರದಿಯ ಅಂಕಿ - ಅಂಶಗಳತ್ತ ನೋಡೋಣ. ರಾಷ್ಟ್ರೀಯ ಮಾದರಿ - ಸಮೀಕ್ಷೆ ಅಂದಾಜಿಸಿದ ಅಂಕಿ - ಅಂಶಗಳನ್ನೇ ಆಧರಿಸಿ ಈ ವರದಿ, ೧೯೮೩-೯೪ರ ಅವಧಿಯಲ್ಲಿ ಉದ್ಯೋಗಾವಕಾಶಗಳ ಬೆಳವಣಿಗೆಯ ದರ ಶೇ. ೧ ಕ್ಕಿಂತಲೂ ಕಡಿಮೆ ಎಂದು ಅಭಿಪ್ರಾಯಪಟ್ಟಿದೆ. ಇದೇ ಅಂದಾಜಿನ ಪ್ರಕಾರ ೧೯೮೩-೯೪ರ ಅವಧಿಯಲ್ಲಿ ಶ್ರಮಶಕ್ತಿಯನ್ನು ಬಳಸುವ ಬೆಳವಣಿಗೆಯ ದರ ವಾರ್ಷಿಕ ಶೇ. ೨.೩ರಷ್ಟು ಕಡಿಮೆಯಾಗಿದ್ದು ೧೯೯೪-೨೦೦೦ ವರ್ಷಗಳ ಅವಧಿಯಲ್ಲಿ ಇದು ಶೇ. ೧ ರಷ್ಟು ಕಡಿಮೆಯಾಗಿದೆ. ರಾಷ್ಟ್ರೀಯ ಆರ್ಥಿಕ ಸಮೀಕ್ಷೆ ಮತ್ತು ರಾಷ್ಟ್ರೀಯ ಮಾದರಿ ಸಮೀಕ್ಷೆಗಳ ಅಂದಾಜಿನ ನಡುವೆ ವ್ಯತ್ಯಾಸವಿರುವುದನ್ನು ಇಲ್ಲಿ ಕಾಣಬಹುದು. ಇದು ಅಂಥ ಗಮನಾರ್ಹವಾದ ಅಂಶವಲ್ಲ ಎಂದೇ ಭಾವಿಸೋಣ. ಉದ್ಯೋಗ-ನಿರುದ್ಯೋಗಗಳನ್ನು ಅಂದಾಜಿಸುವ ಸಂಸ್ಥೆಗಳು ನಿರುದ್ಯೋಗವನ್ನು ವ್ಯಾಖ್ಯಾನಿಸುವ ವಿಧಾನದಲ್ಲಿಯೇ ಕೊರತೆ ಎದ್ದು ಕಾಣುತ್ತದೆ. ಇವುಗಳ ಪ್ರಕಾರ ನಿರುದ್ಯೋಗ ಎಂದರೆ ಲಭ್ಯ ಶ್ರಮ ಸಂಪನ್ಮೂಲದ ಬಳಕೆಯಾಗದ ಪ್ರಮಾಣ. ಹಾಗಾದರೆ ಸಂಪನ್ಮೂಲವಾಗಿ ಪರಿವರ್ತನೆಯಾಗದ ಜನಸಂಖ್ಯೆಯ ಪ್ರಮಾಣವನ್ನು ಏನೆಂದು ಕರೆಯಬೇಕು? ಅದಕ್ಕೆ ಆ ಜನರೇ ಹೊಣೆಗಾರರೇ? ಆದರೆ ಯೋಚಿಸಬೇಕಾದ ಅಂಶವೇನೆಂದರೆ, ನಮ್ಮ ದೇಶದ ಜನಸಂಖ್ಯೆ ವಾರ್ಷಿಕ ದರ ಶೇ. ೨ರಷ್ಟು ಏರುತ್ತಿರುವಾಗ ಲಭ್ಯ ಶ್ರಮಶಕ್ತಿಯ ಏರಿಕೆಯ ದರ ಕಡಿಮೆಯಾಗುವುದಾದರೂ ಹೇಗೆ? ಜನಸಂಖ್ಯೆ ಹೆಚ್ಚಾದರೂ ಉತ್ಪಾದನೋಪಯೋಗಿ ಮಾನವ ಸಂಪನ್ಮೂಲ ವೃದ್ಧಿಯಾಗಲಿಲ್ಲ ಎನ್ನುವ ಈ ಅಸಂಗತಕ್ಕೆ ಏನು ಹೇಳುವುದು? ಹೌದು ಎಂದು ಒಪ್ಪಿಕೊಂಡರೆ, ನಮ್ಮ ಜನಸಂಖ್ಯೆಯನ್ನು ಮಾನವ ಸಂಪನ್ಮೂಲವಾಗಿ ಪರಿವರ್ತಿಸುವ ನಮ್ಮ ಪ್ರಯತ್ನಗಳಲ್ಲಿಯೇ ಕೊರತೆ ಇದೆ ಎಂದಾಯಿತಲ್ಲವೆ? ಈ ಕೊರತೆಯನ್ನು ನಿವಾರಿಸಲು, ಉದ್ಯೋಗ ನಿರ್ವಹಣಾ ಕೌಶಲ್ಯ ಅಭಿವೃದ್ಧಿಗಾಗಿ, ಜಾಗತೀಕರಣದ ಈ ಸಂದರ್ಭದಲ್ಲಿ ಕೈಗೊಂಡ ಕ್ರಮವೇನು? ಇದು ಯಾರ ಹೊಣೆಗಾರಿಕೆ? ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿನ ಪ್ರಭುಗಳು ಈ ನಿಟ್ಟಿನಲ್ಲಿ ಆಲೋಚಿಸುವುದು ಅವರ ಹೊಣೆಗಾರಿಕೆಯಲ್ಲವೆ? ಸಾಮಾಜಿಕ ನ್ಯಾಯದ ಕಾಳಜಿಯಲ್ಲವೇ? ಈ ಹೊಣೆಗಾರಿಕೆಯನ್ನು ಮುಕ್ತ ಮಾರುಕಟ್ಟೆಯ ಪ್ರವೃತ್ತಿಗಳು ಅದು ಹೇಗೋ ನಿಭಾಯಿಸುತ್ತವೆ ಎನ್ನುವುದು ಹಾರಿಕೆಯ, ಬೇಜವಾಬ್ದಾರಿ ಮಾತಲ್ಲವೇ?

ಒಂದು ಕಡೆ ಜನಸಂಖ್ಯೆ ಹೆಚ್ಚುತ್ತಿದೆ, ಸಾಕ್ಷರತೆಯ ಪ್ರಮಾಣ ಹೆಚ್ಚುತ್ತಿದೆ, ಶಾಲಾ - ಕಾಲೇಜು - ವಿಶ್ವವಿದ್ಯಾನಿಲಯಗಳಲ್ಲಿ ವಿದ್ಯಾರ್ಥಿಗಳ ನೋಂದಣಿ ಹೆಚ್ಚುತ್ತಿದೆ, ಉದ್ಯೋಗಕ್ಕಾಗಿ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಹೆಸರನ್ನು ನೋಂದಾಯಿಸಿ ಕೊಳ್ಳುವವರ ಸಂಖ್ಯೆ ಬೆಳೆಯುತ್ತಿದೆ. ಮತ್ತೊಂದು ಕಡೆ ಶ್ರಮಶಕ್ತಿಯ ಉಪಯೋಗದ ಬೆಳವಣಿಗೆ ದರ ಕಡಿಮೆಯಾಗುತ್ತಿರುವ ಅಂಕಿ - ಅಂಶಗಳು ಪ್ರಕಟವಾಗುತ್ತಿವೆ. ಕೆಲವು ಕೈಗಾರಿಕೆಗಳು ಮುಚ್ಚುತ್ತಿರುವುದನ್ನು ನೋಡುತ್ತಿದ್ದೇವೆ. ಮತ್ತೆ ಕೆಲವು ಕೈಗಾರಿಕೆಗಳು ವಿಲನೀಕರಣದಂತಹ ಪುನರ್‌ಸಂಘಟನೆಗಳ ಮೂಲಕ ಇರುವ ಹುದ್ದೆಗಳನ್ನು ರದ್ದು ಮಾಡುತ್ತಿವೆ. ರಾಷ್ಟ್ರಾದಾಯ ಹೆಚ್ಚುತ್ತಿರುವುದು ಕಂಡು ಬರುತ್ತಿದೆ. ರಾಷ್ಟ್ರೀಯ ವರಮಾನ ಹೆಚ್ಚುವುದು ಮತ್ತು ಉದ್ಯೋಗಾವಕಾಶಗಳ ಸಂಖ್ಯೆ ಕಡಿಮೆಯಾಗುವುದು ಏಕಕಾಲಕ್ಕೆ ನಡೆಯುವ ಘಟನೆಗಳು ಯಾವ ತರಹದ ಅಭಿವೃದ್ಧಿಯ ಸಂಕೇತ? ಎಂಥ ವಿಪರ್ಯಾಸ?

ಆದರೆ ಒಂದು ಮಾತ್ರ ನಿಜ; ಸ್ವಲ್ಪ ಸೂಕ್ಷ್ಮವಾಗಿ ಗಮನಿಸಿದರೆ ಸಾಕು, ಬಹುಸಂಖ್ಯಾತ ಜನರ ಜೀವನಮಟ್ಟ ಕುಸಿಯುತ್ತಿರುವುದು, ಮಧ್ಯಮ ವರ್ಗದ ಗಾತ್ರ ಕುಗ್ಗುತ್ತಿರುವುದು ಎದ್ದು ಕಾಣುತ್ತದೆ. ಉದ್ಯೋಗಾವಕಾಶಗಳನ್ನು ಕುಗ್ಗಿಸುವ ಈ ಸಂರಚನಾತ್ಮಕ ಬದಲಾವಣೆಗಳನ್ನು, ಅಭಿವೃದ್ಧಿಯ ಇಂಥ ವ್ಯಾಖ್ಯಾನವನ್ನು, ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಬದುಕುತ್ತಿರುವ ನಾವು ಸಹಿಸಿಕೊಳ್ಳಬೇಕೆ?

ಕೈಗಾರಿಕೆಯೊಂದು ಏಕಾಏಕಿ ಮುಚ್ಚಿದ ನಂತರ ಅಲ್ಲಿನ ಕಾರ್ಮಿಕರು ಯಾವ ಯಾವ ವಲಯಗಳಿಗೆ ವಲಸೆ ಹೋದರು ಎಂಬುದರ ಬಗ್ಗೆ ತಿಳಿಯುವ ಪ್ರಾಮಾಣಿಕ ಪ್ರಯತ್ನಗಳೂ ಆಗಲಿಲ್ಲ. ಚಿಕ್ಕ ಉದಾಹರಣೆಯೊಂದನ್ನು ನೋಡೋಣ. ದಾವಣಗೆರೆ ಕರ್ನಾಟಕದ ಮ್ಯಾಂಚೆಸ್ಟರ್ ಎಂದು ಹೆಸರಾದ ನಗರ. ಇದರ ಪಕ್ಕದ ಹರಿಹರ ಪಟ್ಟಣ ಕೂಡ ಕೈಗಾರಿಕೆಗಳಿಗೆ ಹೆಸರಾದ ನಗರ. ಮುಕ್ತ ಮಾರುಕಟ್ಟೆ ಮೂಲದ ಮನಸ್ಸುಗಳ ಕಾರ್ಯಾಚರಣೆಯಿಂದಾಗಿ ಇಲ್ಲಿನ ಪ್ರಮುಖ

**ಅಮರ ಯೋಧ**

ಗಡಿಗಳ  
ಮೇಲೆ  
ಸಮರ  
ಸನ್ನದ್ಧ  
ಯೋಧ.

ಆಳುವವರ  
ಯುದ್ಧಕೋರ  
ಕುತಂತ್ರ  
ಅರಿಯದೇ  
ಸತ್ತೇ ಹೋದ !!

ಎಸ್. ಶಶಿಕಾಂತ ಯಡಹಳ್ಳಿ  
ಬೆಂಗಳೂರು - ೫೬೦ ೦೭೧



ಕೈಗಾರಿಕಾ ಘಟಕಗಳು ಮುಚ್ಚಿಹೋಗಿವೆ. ದಾವಣಗೆರೆ ಕಾಟನ್ ಮಿಲ್ಸ್ ಮತ್ತು ಹರಿಹರ ಕಿರ್ಲೋಸ್ಕರ್ ಕಂಪನಿಗಳೆರಡರಲ್ಲಿಯೇ ಸುಮಾರು ಆರು ಸಾವಿರ ಕಾರ್ಮಿಕರು ದುಡಿಯುತ್ತಿದ್ದು ಅವರುಗಳ ಬದುಕು ಬೀದಿಪಾಲಾಗಿದೆ. ಈ ಕಂಪನಿಗಳು ಮುಚ್ಚುವ ಸಾಧ್ಯತೆಯ ನಿರೀಕ್ಷೆಯಲ್ಲಿರದ ಕಾರ್ಮಿಕರಿಗೆ ಪರ್ಯಾಯ ಉದ್ಯೋಗದ ಸಿದ್ಧತೆಯಿರಲಿಲ್ಲ (ಆದರೆ ಮಾಲೀಕರಿಗೂ ಇರಲಿಲ್ಲ ಎಂದು ಹೇಳಲಾಗದು). ಬದುಕಿನ ಬೆನ್ನೆಲುಬಾದ ಉದ್ಯೋಗವನ್ನು ಅನಿರೀಕ್ಷಿತವಾಗಿ ಕಳೆದುಕೊಂಡ ಕಾರ್ಮಿಕರ, ನೌಕರರ ಕುಟುಂಬಗಳು ಆಘಾತಕ್ಕೊಳಗಾಗಿದೆ. ಅವರ ಪುನರ್ವಸತಿ ಯಾರ ಜವಾಬ್ದಾರಿಯೂ ಆಗಲಿಲ್ಲ. ಇಪ್ಪತ್ತು - ಮೂವತ್ತು ವರ್ಷಗಳ ಕಾಲ ದುಡಿದವರಿಗೆ ಪರ್ಯಾಯ ಉದ್ಯೋಗವಾಗಲೀ ಹೊಸ ಕಸುಬೊಂದನ್ನು ಕಲಿಯುವ ಮನಃಸ್ಥಿತಿಯಾಗಲೀ ಇರಲಿಲ್ಲ. ಅವರವರ ಸ್ಥಿತಿಗತಿಗನುಗುಣವಾಗಿ ನಗರದ ಒಳಗೆ ಮತ್ತು ಹೊರವಲಯಗಳಲ್ಲಿ ಮನೆಗಳನ್ನು ಕಟ್ಟಿಕೊಂಡೋ, ಬಾಡಿಗೆ ಮನೆಯಲ್ಲೋ ಹೆಚ್ಚು ಕಡಿಮೆ ಆ ನಗರಗಳ ಶಾಶ್ವತ ನಿವಾಸಿಗಳಾಗಿದ್ದರು. ಮಕ್ಕಳ ವಿದ್ಯಾಭ್ಯಾಸ, ವಿವಾಹ ಎನ್ನುವ ಹೊತ್ತಿಗೆ ನಂಬಿದ್ದ ನೌಕರಿ, ಅವಲಂಬಿಸಿದ್ದ ಉದ್ಯೋಗ ಇಲ್ಲವಾಯಿತು. ಅಷ್ಟೋ ಇಷ್ಟೋ ಬುದ್ಧಿ ಇದ್ದವರು, ಮೈಯಲ್ಲಿ ಕಸುವಿದ್ದವರು ಅಲ್ಲಿಯ ಸಣ್ಣಪುಟ್ಟ ವ್ಯಾಪಾರೀ ಸಂಸ್ಥೆಗಳಲ್ಲಿ, ಹೋಟೆಲುಗಳಲ್ಲಿ, ಲಾಡ್ಜ್‌ಗಳಲ್ಲಿ ಕೆಲಸಗಾರರಾಗಿಯೋ, ಗುಮಾಸ್ತರಾಗಿಯೋ, ಮಾರುಕಟ್ಟೆಯಲ್ಲಿ ಹಮಾಲರಾಗಿಯೋ, ಸ್ವಂತ ಅಥವಾ ಬಾಡಿಗೆ ಆಟೋ ಓಡಿಸುವ ಚಾಲಕರಾಗಿಯೋ, ರಸ್ತೆ ಬದಿಯಲ್ಲಿ ಗೂಡಂಗಡಿ ಇಟ್ಟುಕೊಂಡೋ, ರಾತ್ರಿವೇಳೆಯ ಚಾದಂಗಡಿಗಳನ್ನು ಇಟ್ಟುಕೊಂಡೋ, ಹಸು - ಎಮ್ಮೆ ಸಾಕುವ ಕೆಲಸದಲ್ಲೋ ತಮ್ಮನ್ನು ತೊಡಗಿಸಿಕೊಂಡರು. ಒಂದು ಸಣ್ಣ ಸಮೀಕ್ಷೆಯ ಪ್ರಕಾರ, ಅವರಾರಿಗೂ ಮೊದಲಿಗಿಂತ ಉತ್ತಮ ಜೀವನ ನಡೆಸಲಾಗಲಿಲ್ಲ, ಸೇವಾ ಭದ್ರತೆಯ ನೆಮ್ಮದಿಯ ಬದುಕು ದೊರೆಯಲಿಲ್ಲ. ಇನ್ನು ಕೆಲವರು ತಮ್ಮ ಹಳೆಯ ಸಂಬಂಧಗಳನ್ನು ಆಶ್ರಯಿಸಿ ತಮ್ಮ ಸ್ವಂತ ಊರುಗಳಿಗೆ ವಾಪಾಸಾದರು. ಅಲ್ಲಿ ಅಷ್ಟೋ ಇಷ್ಟೋ ಜಮೀನು ಹೊಂದಿರುವವರು ಕೃಷಿಯಲ್ಲಿ ತೊಡಗಿದರು. ಇನ್ನುಳಿದವರು ಕೊಳೆಗೇರಿಯತ್ತ ಮುಖ ಮಾಡಿದರು. ಇಂಥ ಕುಟುಂಬದ ಹೆಣ್ಣು ಮಕ್ಕಳನ್ನು ಮಾತನಾಡಿಸಿದಾಗ ಅವರ ಕಣ್ಣಲ್ಲಿ ನೀರು, ಹೃದಯದಲ್ಲಿ ನಿಟ್ಟುಸಿರನ್ನು ಬಿಟ್ಟರೆ ಇನ್ನೇನನ್ನೂ ಕಾಣಲಿಲ್ಲ. ಉದ್ಯೋಗ ಕಳೆದುಕೊಂಡು ಮಾನಸಿಕ ಸಮತೋಲನ ತಪ್ಪಿದ ಇನ್ನು ಕೆಲವರು ಪರಿಹಾರವಾಗಿ ಬಂದ ಅಲ್ಪಸ್ವಲ್ಪ ಹಣವನ್ನು ಹಗಲಿರುಳೂ ಕುಡಿಯುವುದಕ್ಕಾಗಿ ಖರ್ಚು ಮಾಡಿ ಕೊಂಡರು. ಇದೇ ನಗರದ ಸುತ್ತಮುತ್ತಲಿನ ಡಿಸ್ಟಿಲರಿಗಳಿಗೆ, ಹೆಂಡದಂಗಡಿಗಳಿಗೆ ಒಳ್ಳೆಯ ವ್ಯಾಪಾರವಾಯಿತಷ್ಟೆ. ಇದರ ಪರಿಣಾಮವಾಗಿ ಬೆಳೆದ ಮಕ್ಕಳು ಶಾಲಾ ಕಾಲೇಜು ಬಿಟ್ಟು ಸಣ್ಣ ಪುಟ್ಟ ಅರೆಗೂಲಿಯ ಕೆಲಸ ಅರಸಿ ಹೊರಟರು. ಮನೆಯಲ್ಲಿನ ಹೆಣ್ಣು ಮಕ್ಕಳ ಸ್ಥಿತಿಯೂ ಇದೇ ಆಯಿತು. ಕಾರ್ಖಾನೆಗಳು ಮುಚ್ಚಿದ ನಂತರದಲ್ಲಿ ಕಳ್ಳತನಗಳ, ದರೋಡೆಯ, ಹಿಂಸಾಚಾರದ ಪ್ರಕರಣಗಳೂ ಹೆಚ್ಚಾದವು. ಸುರಕ್ಷಿತ ಮಾರುಕಟ್ಟೆಯೇ ಇಲ್ಲದ ಪರಿಣಾಮದ ನಿರುದ್ಯೋಗ, ಸ್ವಯಂ ಅಥವಾ ಹೊಸ ಉದ್ಯೋಗಗಳಲ್ಲಿ ತೊಡಗಲು ಬೇಕಾದ ಸೂಕ್ತ ತರಬೇತಿ, ಹಣಕಾಸಿನ ನೆರವು, ಕೊಳ್ಳುವ ಚೈತನ್ಯಗಳು ಇಲ್ಲವಾಗಿ ತಮ್ಮ ಅದೃಷ್ಟವನ್ನು ಶಪಿಸುತ್ತಾ ದಿನ ತಳ್ಳುವ ಕೆಲಸ ಅವರದಾಯಿತು.

ಇಂಥ ಉದಾಹರಣೆ ಕೇವಲ ದಾವಣಗೆರೆ-ಹರಿಹರ ನಗರಗಳಿಗಷ್ಟೇ ಸೀಮಿತವಾಗಿರದೆ ದೇಶದುದ್ದಕ್ಕೂ ಕಾಣಬಹುದು. ಕೈಗಾರಿಕೆಗಳಿಗೆ ಹೆಸರಾದ ಪ್ರತಿಯೊಂದು ನಗರದಲ್ಲಿ ಇದಕ್ಕಿಂತಲೂ ದುಃಸ್ಥಿತಿಯ ಉದಾಹರಣೆಗಳು ಸಿಗುತ್ತವೆ. ಕಂಪನಿ ವಲಯದ ಕೈಗಾರಿಕೆಗಳು ಯಾಂತ್ರೀಕರಣ ಮತ್ತು ಕಂಪ್ಯೂಟರೀಕರಣಗಳನ್ನು ತಮ್ಮ ಸಂರಚನಾತ್ಮಕ ಬದಲಾವಣೆಯ ಪ್ರಮುಖ ಅಂಶಗಳಾಗಿ ಸ್ವೀಕರಿಸಿರುವುದರಿಂದ ಶ್ರಮ ಆಧಾರಿತ ಹುದ್ದೆಗಳನ್ನು ಕಡಿತಗೊಳಿಸುತ್ತಿವೆ. ಹೀಗೆ ಕಡಿತಗೊಳಿಸುವುದರಿಂದಲೇ ಪೈಪೋಟಿ ಎದುರಿಸುವ ದಕ್ಷತೆ ಬರುತ್ತದೆ ಎನ್ನುವ ನಂಬಿಕೆಯನ್ನು ಜಾಗತಿಕ ವ್ಯಾಪಾರ ಸಂಸ್ಥೆ ಮೂಲದ ಜಾಗತೀಕರಣ ಪ್ರಕ್ರಿಯೆ ಉಂಟುಮಾಡುತ್ತಿದೆ. ಸರ್ಕಾರಗಳೂ ಸಹ ಇಂಥ ನೀತಿಗೆ ಪುರಸ್ಕಾರ ನೀಡಿ ಕಾರ್ಪೊರೇಟ್ ವಲಯಕ್ಕೆ, ಬಹುರಾಷ್ಟ್ರೀಯ ಕಂಪನಿಗಳಿಗೆ, ಖಾಸಗೀ ಬಂಡವಾಳದಾರರುಗಳಿಗೆ ಅನುಕೂಲವಾಗುವಂತೆ ಕಾರ್ಮಿಕ ಕಲ್ಯಾಣ ಕಾಯಿದೆಗಳನ್ನು ಸಡಿಲಗೊಳಿಸುತ್ತಿವೆ. ''ಬೇಕೆಂದಾಗ ನೇಮಕಾತಿ, ಬೇಡವೆಂದಾಗ ವಜಾ'' ಎಂಬ ನೀತಿಯನ್ನು ಬಹು ವೇಗವಾಗಿ ಜಾರಿಗೊಳಿಸುತ್ತಿವೆ. ಭಾರತ ಸರ್ಕಾರದಿಂದ ನೇಮಕವಾದ ಸರ್ಕಾರೀ ವೆಚ್ಚ ಸುಧಾರಣಾ ಆಯೋಗ ಕೂಡ ಎಲ್ಲ ಇಲಾಖೆಗಳಲ್ಲೂ ಹುದ್ದೆಗಳನ್ನು ಕಡಿತಗೊಳಿಸಲು ಶಿಫಾರಸ್ಸು ಮಾಡಿದೆ. ಅಷ್ಟೇ ಅಲ್ಲ, ಅದು ಶೀಘ್ರವಾಗಿ ಕಾಲಮಿತಿಯಲ್ಲಿ ಜಾರಿಗೊಳ್ಳುತ್ತಿದೆ. ದಕ್ಷತೆಯನ್ನು ಹೆಚ್ಚಿಸುವ ಮತ್ತು ಅಭಿವೃದ್ಧಿಯನ್ನು ತೀವ್ರಗೊಳಿಸುವ ದೃಷ್ಟಿಯಿಂದ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಶಿಫಾರಸ್ಸು ಮಾಡಲು ನೇಮಿಸಿದ ಬಹುತೇಕ ಸಮಿತಿಗಳು ಉದ್ಯೋಗಗಳ ಕಡಿತವನ್ನು, ಉದಾರೀಕರಣ ಮತ್ತು ಖಾಸಗೀಕರಣಗಳ ಜಾರಿಯನ್ನು ಒಕ್ಕೊರಲಿನಿಂದ ಶಿಫಾರಸ್ಸು ಮಾಡಿವೆ. ಯೋಜನಾ ಆಯೋಗ ನೇಮಿಸಿದ ಉದ್ಯೋಗಾವಕಾಶಗಳ ಕಾರ್ಯಪಡೆ ಕೂಡ ತನ್ನ ವರದಿಯಲ್ಲಿ ''ಉದ್ಯೋಗ ಕಲ್ಪಿಸುವ ನೀತಿಯನ್ನು, ಇನ್ನುಮುಂದೆ ಆರ್ಥಿಕ ಬೆಳವಣಿಗೆಯ ವರ್ಧನೆಯ ದರದ ಪ್ರಕ್ರಿಯೆ ಹಾಗೂ ಅರ್ಥವ್ಯವಸ್ಥೆಯಲ್ಲಿ ಸಂರಚನಾತ್ಮಕ ಬದಲಾವಣೆಗಳನ್ನು ತರುವ ನೀತಿಗಳಿಂದ ಪ್ರತ್ಯೇಕವೆಂದು ಪರಿಗಣಿಸಲಾಗುವುದಿಲ್ಲ'' ಎನ್ನುತ್ತದೆ. ಅಂದರೆ ಇದುವರೆವಿಗಿನ ಉದ್ಯೋಗ ನೀತಿ ಆರ್ಥಿಕ ಬೆಳವಣಿಗೆಯ ವೇಗವನ್ನು ಹೆಚ್ಚಿಸುವುದರಿಂದ ದೂರ ಸರಿದಿತ್ತು ಎನ್ನುವುದು ಈ ಸಮಿತಿಯ ಅಭಿಪ್ರಾಯವೇ ? ಇದೇ ಯೋಜನಾ ಆಯೋಗ ೧೦ನೇ ಪಂಚವಾರ್ಷಿಕ ಯೋಜನೆಗೆ ಶೇ. ೮ ಅಭಿವೃದ್ಧಿ ದರವನ್ನು ನಿಗದಿಪಡಿಸಿದೆ. ಹೂಡಿಕೆಗೆ ಹೆಚ್ಚಿನ ಒತ್ತು ನೀಡದೆ ಈ ಬೆಳವಣಿಗೆ ದರವನ್ನು ವಾಸ್ತವಗೊಳಿಸುವುದು ಎಷ್ಟರಮಟ್ಟಿಗೆ ಸಾಧ್ಯ ಎನ್ನುವುದನ್ನು

## ಖಾಸಗಿಯ ಸಾರ್ವಜನಿಕ ಹೂರಣ

*ಮೂವತ್ತು ವರ್ಷದ ಕಾರ್ಖಾನೆಯೊಂದು ಏಕಾಏಕಿ ಮುಚ್ಚಿಹೋದಂತೆ ಕಂಡರೂ ಮಾಲಿಕ ಬರಲಿರುವ ಆ ದಿನವನ್ನು ಮುಂಚಿತವಾಗಿಯೇ ಗುರ್ತಿಸಿ ತನ್ನ ವೈಯಕ್ತಿಕ ಹಿತಾಸಕ್ತಿಯನ್ನು ರಕ್ಷಿಸಿಕೊಳ್ಳುವಂತೆ ಸನ್ನದ್ಧನಾಗಿರುತ್ತಾನೆ. ತಾಂತ್ರಿಕವಾಗಿ ಹಿಂದೆ ಬಿದ್ದು, ಮಾರುಕಟ್ಟೆಯ ಪೈಪೋಟಿಯಲ್ಲಿ ಹಿಂದೆ ಬಿದ್ದು, ತಾಂತ್ರಿಕತೆಯನ್ನು ಆಧುನೀಕರಣಗೊಳಿಸದೆ – ಹೀಗೆ ಮಾಲೀಕನ ಅಥವಾ ನಿರ್ವಾಹಕನ ಪರಿಧಿಯಲ್ಲಿರುವ ಜವಾಬ್ದಾರಿಯನ್ನು ಅವಿವೇಕದಿಂದ, ಅಲಕ್ಷ್ಯದಿಂದ, ಅಥವಾ ಸ್ಪಷ್ಟವಾದ ದುರುದ್ದೇಶದಿಂದ ಬೇಕೆಂತಲೇ ನಿರ್ವಹಿಸದೆ ಉದ್ದಿಮೆಯನ್ನು ಮುಚ್ಚುತ್ತಾನೆ. ತಕ್ಷಣಕ್ಕೆ ನಷ್ಟವಾಗುತ್ತಿರುವುದನ್ನು ಕಾರಣವೆಂದು ಬೊಟ್ಟುಮಾಡಿ ತೋರಿಸುತ್ತಾನೆ. ವಾಸ್ತವದಲ್ಲಿ ಹತ್ತಾರು ವರ್ಷ ತನ್ನ ಮೂಲಬಂಡವಾಳದ ಹತ್ತಾರುಪಟ್ಟು ಲಾಭ ಹೀರಿ, ಉದ್ಯಮವನ್ನು ಸಿಪ್ಪೆಯಾಗಿಸುವ ಈ ಧೀರ, ಕಾರ್ಮಿಕರಿಗೆ ಕೊನೆಗಾಲದಲ್ಲಿ ಮೂರು ತಿಂಗಳ ಸಂಬಳ ನೀಡಿ ಕದ ಮುಚ್ಚುತ್ತಾನೆ. ತನ್ನಲ್ಲಿ ಶೇಖರವಾದ, ಕಾರ್ಮಿಕರನ್ನು ವಂಚಿಸಿ ಪಡೆದ ಭಾರಿ ಮೊತ್ತದ ಪತ್ತದ ಮಿಗುತಾಯ ಬಂಡವಾಳ ಉಪಯೋಗಿಸಿ ಹೊಸ ಉದ್ಯಮ ಸ್ಥಾಪಿಸಿಕೊಳ್ಳುತ್ತಾನೆ. ಹೊಸ ಕಾರ್ಮಿಕರನ್ನು ನಿಯಮಿಸಿಕೊಂಡು ಹೊಸ ಶೋಷಣೆಯನ್ನು ಪ್ರಾರಂಭಿಸುತ್ತಾನೆ. ಇದು ಉದ್ಯಮ ನಡೆಸುವ ಸ್ವಾತಂತ್ರ್ಯ, ಉದಾರೀಕರಣದ ವೈಖರಿ ! ಇವನ ಖಾಸಗೀತನಕ್ಕೆ ಇರುವ ಒಂದೇ ಹಕ್ಕೆಂದರೆ ಅನೇಕ ವೇಳೆ ತನ್ನದೇ ಎನ್ನುವ ಶೇ. ೧೦ ಬಂಡವಾಳ. ಶೇ. ೯೦ ಬಂಡವಾಳ ಒದಗಿಸುವ ಬ್ಯಾಂಕಿನ ಠೇವಣಿದಾರರೂ, ಕಾನೂನು ವ್ಯವಸ್ಥೆಯೂ, ಕುಶಲಕರ್ಮಿಗಳನ್ನು ಸರಬರಾಜು ಮಾಡುವ ಶಿಕ್ಷಣ ವ್ಯವಸ್ಥೆಯೂ, ಮಾರುಕಟ್ಟೆಯೂ, ಮಿಕ್ಕೆಲ್ಲವೂ ಸಾರ್ವಜನಿಕ. ಅವಾವುದಕ್ಕೂ ಪುಡಿಗಾಸಿನ ಬೆಲೆ ಇಲ್ಲ ! ಅವನ ಶೇ. ೧೦ ಬಂಡವಾಳವೂ ಅವನ ಹಿಂದಿನ ಶೋಷಣೆಯಿಂದ ಸಂಗ್ರಹಿಸಿದ್ದೆಂದು ಗಮನಿಸಿದರೆ ಚಿತ್ರ ಸಂಪೂರ್ಣ !*

– ಕೆ. ಎಸ್. ಪಾರ್ಥಸಾರಥಿ

ಕಾದು ನೋಡಬೇಕಾಗಿದೆ. ಅದೇ ರೀತಿ ೧೦ ಮಿಲಿಯನ್ ಅಂದರೆ ಒಂದು ಕೋಟಿ ಉದ್ಯೋಗಗಳನ್ನು ಸೃಷ್ಟಿಸುವ ಗುರಿ ಹಾಕಿಕೊಳ್ಳಲಾಗಿದೆ. ಆದರೆ ಈಗಾಗಲೇ ಅಂದರೆ ೨೦೦೨ರ ಸೆಪ್ಟೆಂಬರ್ ಹೊತ್ತಿಗೆ ದೇಶದ ೯೩೮ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಉದ್ಯೋಗ ಬಯಸಿ ನೋಂದಾಯಿಸಿಕೊಂಡವರ ಸಂಖ್ಯೆಯೇ ೪.೧೬ ಕೋಟಿ ಇದೆ. ಮುಂದಿನ ನಾಲ್ಕು ವರ್ಷಗಳಲ್ಲಿ ಅಂದರೆ ೧೦ನೇ ಪಂಚವಾರ್ಷಿಕ ಯೋಜನೆಯ ಅವಧಿ ಮುಗಿಯುವ ವೇಳೆಗೆ ಇನ್ನೆಷ್ಟು ಜನ ಉದ್ಯೋಗಾಕಾಂಕ್ಷಿಗಳು ನೋಂದಾಯಿಸಿಕೊಳ್ಳಬಹುದು? ಇತ್ತ ದಿಟ್ಟ ಕಾರ್ಯಾಚರಣೆ ಮೂಲಕ ಜನಸಂಖ್ಯೆಯನ್ನೂ ನಿಯಂತ್ರಿಸದೆ, ಅತ್ತ ಉದ್ಯೋಗಾವಕಾಶಗಳನ್ನು ದ್ವಿಗುಣಗೊಳಿಸುವ ಕ್ರಮಗಳನ್ನೂ ಜರುಗಿಸದೆ, ರಾಜ್ಯಶಕ್ತಿಯು ಮುಕ್ತ ಮಾರುಕಟ್ಟೆ ನೀತಿಗೆ ಯಾರದೋ ಒತ್ತಡ ಎನ್ನುವಂತೆ, ಅನಿವಾರ್ಯವೋ ಎಂಬಂತೆ ಶರಣಾಗಿ ಸರ್ಕಾರ ಆರ್ಥಿಕ ವಲಯದಿಂದ ದೂರ ಸರಿಯುವುದು ಪ್ರಜಾಪ್ರಭುತ್ವದ ಮೌಲ್ಯಗಳಿಗೆ ಬದ್ಧವಾದ ಕ್ರಮವೇ? ೨೦೦೨-೨೦೦೩ನೇ ಸಾಲಿನ ಆರ್ಥಿಕ ಸಮೀಕ್ಷೆಯು ಸದರಿ ಅವಧಿಯಲ್ಲಿ, ಅದರ ಹಿಂದಿನ ವರ್ಷಕ್ಕಿಂತ, ಮುಷ್ಕರ - ಬೀಗಮುದ್ರೆಗಳು ಶೇ. ೫೦ರಷ್ಟು ಕಡಿಮೆ ಯಾಗಿರುವುದನ್ನು ದಾಖಲಿಸುತ್ತದೆ. ಕೈಗಾರಿಕೆ ಮತ್ತು ಕಾರ್ಮಿಕ ಸಂಘಟನೆಗಳೇ ಕಡಿಮೆಯಾಗುತ್ತಿರುವಾಗ ಇನ್ನು ಮುಷ್ಕರದ ಪ್ರಶ್ನೆ ಎಲ್ಲಿ? ಇದನ್ನು ಸಂರಚನಾತ್ಮಕ ಬದಲಾವಣೆಯ ಧನಾತ್ಮಕ ಅಂಶ ಎಂದು ಪರಿಗಣಿಸಬಹುದೆ?

ಜಾಗತೀಕರಣ ಮೂಲದ ಸಂರಚನಾತ್ಮಕ ಬದಲಾವಣೆಯ ಕ್ರಮಗಳು ತೀವ್ರಗೊಂಡಂತೆ ಕೃಷಿ ಮತ್ತು ಸಾರ್ವಜನಿಕ ವಲಯದಲ್ಲಿ ಗಣನಾತ್ಮಕವಾಗಿ ಉದ್ಯೋಗಾವಕಾಶಗಳು ಕಡಿಮೆಯಾಗುತ್ತಿರುವುದನ್ನು, ಸಂಘಟನಾತ್ಮಕ ವಲಯದಲ್ಲಿನ ಖಾಸಗೀ ಕ್ಷೇತ್ರದಲ್ಲಿ ತೀರಾ ಕಡಿಮೆ ದರದಲ್ಲಿ ಉದ್ಯೋಗಾವಕಾಶಗಳು ಸೃಷ್ಟಿಯಾಗಿರುವುದನ್ನು ಅಧ್ಯಯನಗಳ ವರದಿಗಳು ದಾಖಲಿಸಿವೆ. ಆದರೂ ಜಾಗತೀಕರಣ ಪ್ರಕ್ರಿಯೆಯಿಂದ ಖಾಸಗೀ ಸಂಘಟಿತ ವಲಯದಲ್ಲಿ ಉದ್ಯೋಗಾವಕಾಶಗಳು ಹೆಚ್ಚುತ್ತಿವೆ ಎನ್ನುವ ಅಭಿಪ್ರಾಯ ಹುಟ್ಟಿಸುವ ಪ್ರಯತ್ನಗಳು ನಡೆದಿವೆ. ಆದ ಕಾರಣ, ಈ ಖಾಸಗಿ ಸಂಘಟನಾತ್ಮಕ ವಲಯದಲ್ಲಿ ಸೃಷ್ಟಿಯಾಗುತ್ತಿರುವ ಉದ್ಯೋಗಗಳ ಸ್ವರೂಪವನ್ನಷ್ಟು ವಿಶ್ಲೇಷಿಸಲೇಬೇಕು. ಇವು ಅತಿ ಹೆಚ್ಚು ವೇತನವಿರುವ ಕಡಿಮೆ ಉದ್ಯೋಗಗಳು ಮತ್ತು ಅತಿ ಕಡಿಮೆ ವೇತವನಿರುವ ಹೆಚ್ಚು ಉದ್ಯೋಗಗಳಾಗಿವೆ. ಅಂದರೆ ಅತಿ ಹೆಚ್ಚಿನ ಅಸಮಾನತೆ ಈ ಉದ್ಯೋಗಗಳ ನಡುವೆ ಇದೆ. ಇದು ಅಪೇಕ್ಷಿತ ಬೆಳವಣಿಗೆಯೆ? ಜೊತೆಗೆ ಯಾವೊಂದು ಉದ್ಯೋಗ ಕ್ಷೇತ್ರದಲ್ಲೂ ಸೇವಾ ಭದ್ರತೆಗೆ ಸ್ಥಾನವೇ ಇಲ್ಲವಾಗುತ್ತಿದೆ. ಸೇವಾಭದ್ರತೆ ಕಡಿಮೆಯಾದಷ್ಟೂ ಯಾವುದೇ ಕಾರ್ಮಿಕ ಅಥವಾ ನೌಕರ ಹೆಚ್ಚು ದರಿದ್ರನಾಗುತ್ತಾನೆ, ಭ್ರಷ್ಟಾಚಾರಿಯಾಗುತ್ತಾನೆ, ಅವಕಾಶವಾದಿಯಾಗುತ್ತಾನೆ, ಸದಾ ಅಸಹನೆಯ ಗೂಡಾಗುತ್ತಾನೆ ಎನ್ನುವುದು ಸತ್ಯ. ಕೆಲಸದ ಒತ್ತಡ ಹೆಚ್ಚಾದಂತೆ, ಪಡೆಯುವ ವೇತನ ಕಡಿಮೆಯಾದಂತೆ, ಇರುವ ಭದ್ರತೆ ಇಲ್ಲವಾದಂತೆ ಆ ನೌಕರನ, ಕಾರ್ಮಿಕನ ಮನಸ್ಸು ಕುದಿಯುವ ಕುಲುಮೆಯಾಗುತ್ತದೆ. ಅಂಥವನು ನಿರ್ವಹಿಸುವ ಕೆಲಸದ ವೈಖರಿಯನ್ನು ದಕ್ಷತೆಯೆನ್ನಬಹುದೆ? ಅನಿವಾರ್ಯವಾಗಿ ಅವನ ಉತ್ಪಾದಕತೆಯ ಗುಣಮಟ್ಟ ಮತ್ತು ಪರಿಮಾಣ ಎರಡೂ ಕುಂಟುತ್ತವೆ.

ಇತ್ತೀಚಿನ ವರ್ಷಗಳಲ್ಲಿ 'ಮಾನಸಿಕ ಒತ್ತಡ ನಿರ್ವಹಣೆ' ಎನ್ನುವ ವಿಷಯ ಉದ್ಯಮ ನಿರ್ವಹಣೆ ವಿಷಯಗಳಲ್ಲಿ ಒಂದು ಹೊಸ ಅಧ್ಯಯನ ಶಿಸ್ತಾಗಿ ಜನಪ್ರಿಯವಾಗುತ್ತಿದೆ. ಇದು ಎಷ್ಟು ಜನಪ್ರಿಯ ಅಧ್ಯಯನ ಮತ್ತು ತರಬೇತಿ ವಿಷಯವಾಗಿದೆ ಎಂದರೆ ಆಧ್ಯಾತ್ಮಿಕ ಮತ್ತು ಧಾರ್ಮಿಕ ಹಿನ್ನೆಲೆಯ ಸಂಸ್ಥೆಗಳೂ ಸಹ ಈ ವಿಷಯದ ಬಗ್ಗೆ ಹೊಸ ಕೋರ್ಸುಗಳನ್ನು, ತರಬೇತಿ ಶಿಬಿರಗಳನ್ನು ನಡೆಸಿ ಲಾಭ ಮಾಡಿಕೊಳ್ಳುತ್ತಿವೆ! ಕೆಲವು ದಿನಗಳ ಹಿಂದೆ ಪ್ರಮುಖ ವಾರಪತ್ರಿಕೆಯೊಂದರಲ್ಲಿ ಮಾನಸಿಕ ರೋಗಗಳ ತಜ್ಞರೊಬ್ಬರ ಲೇಖನವೊಂದು ಪ್ರಕಟವಾಗಿತ್ತು. ಯಾವ ಮುನ್ಸೂಚನೆಯೂ ಇಲ್ಲದೆ ನೌಕರನೊಬ್ಬ ಕೆಲಸ ಕಳೆದುಕೊಂಡಾಗ ಅವನಲ್ಲಿ ಉಂಟಾಗುವ ಮಾನಸಿಕ ಒತ್ತಡ, ದುಗುಡ, ಅಸಹಾಯಕತೆ, ಆತ್ಮಹತ್ಯೆ ಮಾಡಿಕೊಳ್ಳುವ ಭಾವನೆ, ವ್ಯವಸ್ಥೆಯ ಬಗೆಗಿನ ತಿರಸ್ಕಾರ, ದ್ವೇಷ, ಹಿಂಸೆ ಮೊದಲಾದ ಭಾವನೆಗಳ ಬಗ್ಗೆ ಆ ಲೇಖನದಲ್ಲಿ ವಿಶ್ಲೇಷಿಸಲಾಗಿತ್ತು. ಆ ತಜ್ಞರ ಪ್ರಕಾರ "ಉದ್ಯೋಗ ಕಳೆದುಕೊಂಡ ನೌಕರನೊಬ್ಬ ಮತ್ತೊಂದು ಉದ್ಯೋಗವನ್ನೋ ಅಥವಾ ಕಸುಬನ್ನೋ ಹೊಂದಿ ತನ್ನ ಮುಂದಿನ ಬದುಕನ್ನು ಕಟ್ಟಿಕೊಳ್ಳುವ ಆತ್ಮವಿಶ್ವಾಸ ಹೊಂದದಿದ್ದರೆ ಅವನ ಮನಸ್ಸು ಮದ್ಯವ್ಯಸನದತ್ತ ಹರಿಯಬಹುದು, ಹಿಂಸಾ ಪ್ರವೃತ್ತಿಯನ್ನು ಪ್ರಚೋದಿಸಬಹುದು, ಕಳ್ಳತನಕ್ಕೆ ಕೈಹಾಕುವಂತೆ ಮಾಡಬಹುದು ಅಥವಾ ಆತ್ಮಹತ್ಯೆಯತ್ತಲಾದರೂ ಕೊಂಡೊಯ್ಯಬಹುದು. ಇದಾವುದಾಗದಿದ್ದರೂ ವ್ಯಕ್ತಿ ಕೊನೆಗೆ ಇದ್ದೂ ಸತ್ತಂತಾಗುವುದಂತೂ ಖಚಿತ." ಇಂಥ ಸ್ಥಿತಿಯನ್ನು ನಿರ್ವಹಿಸುವ ಬಗೆ ಎಂತು? ಅದೇ ತಜ್ಞರು ಹೇಳುತ್ತಾರೆ, "ಇಂಥ ವ್ಯಕ್ತಿಗಳು ಸಾಧ್ಯವಾದಲ್ಲಿ ತಮ್ಮ ಕೌಟುಂಬಿಕ ಆಶ್ರಯದಲ್ಲೇ ಸಾಂತ್ವನ ಪಡೆಯಬೇಕು, ಯಾವತ್ತೂ ನಂಬಿಕೆ ಕಳೆದುಕೊಳ್ಳಬಾರದು, ಮಾದಕವಸ್ತುಗಳಿಂದ ದೂರವಿರಬೇಕು, ತನಗಿಂತ ಉತ್ತಮ ಸ್ಥಿತಿಯಲ್ಲಿರುವವರೊಂದಿಗೆ ಹೋಲಿಸಿಕೊಳ್ಳಬಾರದು, ಆಹಾರ ಕ್ರಮವನ್ನು ಎಂದಿನಂತೆಯೇ ಇಟ್ಟುಕೊಳ್ಳಬೇಕು, ಪರಿಣಿತರ ಸಲಹೆಗಳನ್ನು ಪಡೆಯಬೇಕು, ನಷ್ಟ ಸಾಧ್ಯತೆಯ ಕೃತ್ಯಗಳಿಂದ ದೂರವಿರಬೇಕು" ಮುಂತಾದವುಗಳು. ಇಂಥ ಲೇಖನಗಳ, ಸಲಹೆಗಳ ಜನಪ್ರಿಯತೆ, ಇಂಥ ಅಧ್ಯಯನಶಿಸ್ತುಗಳ ಆವಿಷ್ಕಾರಗಳೆಲ್ಲವೂ ಇವತ್ತಿನ ನಮ್ಮ ಉದ್ಯೋಗ ವ್ಯವಸ್ಥೆಗಳಲ್ಲಿ ಸೃಷ್ಟಿಯಾಗುತ್ತಿರುವ ದುರಂತಗಳಿಗೆ ಜೀವಂತ ಸಾಕ್ಷಿ. ಹೌದು, ದುರಂತಗಳು ಸೃಷ್ಟಿಯಾದಾಗ ಅವುಗಳಿಂದ ಹೊರಬರುವ ವಿವೇಚನೆ ಹೊಂದುವುದು ಸಹ ಬಹು ಮುಖ್ಯ. ಒಟ್ಟಾರೆಯಾಗಿ ಇವತ್ತಿನ ಜಾಗತೀಕರಣ ಉದ್ಯೋಗ ವ್ಯವಸ್ಥೆಗೆ ಸಂಬಂಧಿಸಿದಂತೆ ಅಲ್ಲಮಪ್ರಭು ತನ್ನ ವಚನದಲ್ಲಿ ತಿರಸ್ಕರಿಸಿದ ಸ್ಥಿತಿಯನ್ನು ನಿರ್ಮಾಣ ಮಾಡುತ್ತದೆ ಎನ್ನುವುದು ಮಾತ್ರ ನಿಸ್ಸಂಶಯ.

ನಾವು ಸ್ವಾಗತಿಸಬೇಕಾದ ಬದಲಾವಣೆಗಳು ಮನುಷ್ಯರನ್ನು ಸಂಪನ್ಮೂಲವನ್ನಾಗಿಸುವಂತಹುದಾಗಿರಬೇಕು, ಕೆಲಸವಿಲ್ಲದ ಕೈಗಳಿಗೆ ಕೆಲಸ ನೀಡುವಂತಹುದಾಗಿರಬೇಕು, ಬರಡು ನೆಲವನ್ನು ಚಿಗುರಿಸುವಂತಹುದಾಗಿರಬೇಕು. ಹೀಗೆ ನಮ್ಮ ಕನಸಿನ ಎಲ್ಲೆಯನ್ನು ವಿಸ್ತರಿಸುತ್ತಾ ಹೋಗಬಹುದು. ಇವು ಜಾರಿಗೊಳಿಸಲಾಗದ ಬರೀ ಆದರ್ಶಗಳಲ್ಲ, ಸಂಘಟಿತ ಪ್ರಯತ್ನದಿಂದ ಸಾಧಿಸಬಹುದಾದಂಥವು. ದಿಟ್ಟ ಮಾರ್ಗಗಳ ಮೂಲಕ ಚೀನಾ ಮತ್ತು ಜಪಾನ್ ದೇಶಗಳ ಮಾದರಿಯಲ್ಲಿ ಜನಸಂಖ್ಯೆ ಏರಿಕೆಯನ್ನು ನಿಯಂತ್ರಿಸುವುದರಿಂದ, ಬದಲಾದ ಪರಿಸ್ಥಿತಿಯಲ್ಲಿ, ಆಧುನಿಕ ತಂತ್ರಜ್ಞಾನದ ಹಿನ್ನೆಲೆಯಲ್ಲಿ, ಉತ್ಪಾದನಾ ಕೌಶಲ್ಯಗಳನ್ನು ವರ್ಧಿಸುವ ಶಿಕ್ಷಣವನ್ನು ಸಾರ್ವಜನಿಕ ಹಾಗೂ ಸಾರ್ವತ್ರೀಕರಣಗೊಳಿಸುವುದರಿಂದ, ಹೆಚ್ಚು ಉದ್ಯೋಗಾವಕಾಶಗಳನ್ನು ಸೃಷ್ಟಿಸುವ ಸಣ್ಣ ಕೈಗಾರಿಕೆಗಳಿಗೆ ಮರುಜೀವ ನೀಡುವುದರಿಂದ, ಕೈಗಾರಿಕಾ ಘಟಕವೊಂದರ ಮೌಲ್ಯಮಾಪನಕ್ಕೆ ಅದು ಉತ್ಪಾದಿಸುವ ಒಟ್ಟು ಸರಕಿನ ಮೌಲ್ಯಕ್ಕಿಂತ ಸೃಷ್ಟಿಸುವ ಉದ್ಯೋಗಗಳ ಸಂಖ್ಯೆಯನ್ನು ಆಧಾರವಾಗಿಟ್ಟುಕೊಳ್ಳುವುದರಿಂದ, ಸರ್ಕಾರಗಳು ಆರ್ಥಿಕ ಕ್ಷೇತ್ರದಲ್ಲಿ ನಿಯಂತ್ರಣದ ಅಗತ್ಯ ಮತ್ತು ಜಾಗತೀಕರಣ ಮತ್ತು ಉದಾರೀಕರಣಗಳೂ ಒಡ್ಡುವ ಸವಾಲುಗಳ ನಡುವೆ ಸ್ಪಷ್ಟ ಸಮನ್ವಯವನ್ನು ಸಾಧಿಸುವತ್ತ ಕ್ರಿಯಾಶೀಲವಾಗುವುದರಿಂದ ಇದು ನಿಜಕ್ಕೂ ಸಾಧ್ಯ. ಬದಲಾಗಿ ಕತ್ತಿ-ಗುರಾಣಿ, ಕೋಲು-ಕುಡಗೋಲು, ಶೂಲ-ತ್ರಿಶೂಲ ಮತ್ತು ಮದ್ದು-ಗುಂಡು ಸಂಸ್ಕೃತಿ ಮೂಲದ ನೀತಿಯ ಜಾಗತೀಕರಣ ನಮ್ಮನ್ನು ಮತ್ತೊಮ್ಮೆ ಸ್ವಾವಲಂಬನೆ, ಸ್ವಾತಂತ್ರ್ಯ ಕಳೆದುಕೊಳ್ಳುವ ವಿನಾಶದತ್ತ ಒಯ್ಯುತ್ತದೆ, ಬಲಿ ತೆಗೆದುಕೊಳ್ಳುತ್ತದೆ.




ಜಿ. ಎನ್. ಮಲ್ಲಿಕಾರ್ಜುನಪ್ಪ
ವಾಣಿಜ್ಯ ಶಾಸ್ತ್ರ ಉಪನ್ಯಾಸಕ
ಸರ್ಕಾರಿ ಕಲಾ ಕಾಲೇಜು, ಚಿತ್ರದುರ್ಗ

# ಬಾಲೆಯಾಡಿಸುವ ಬಾಲೆ



ಬಾಲೆಯಾಡಿಸುವ ಬಾಲೆಗೆ
ತಾನು ಬಾಲೆಯೆಂಬುದು ಗೊತ್ತಿಲ್ಲ.
ಬಾಲೆಯಾಡಿಸುವ ಏಳರ ಬಾಲೆಗೆ
ತಾನೂ ಬಾಲೆಯೆಂಬುದು ಗೊತ್ತಿಲ್ಲ.

ಬಾಲೆಯಾಡಿಸುವ ಬಾಲೆಗೆ
ಬಾಲೆಯಾಡಿಸುವುದೊಂದೇ ಕೆಲಸವಲ್ಲ
ಬಾಲೆಯಾಡಿಸುವ ಜೊತೆಗೆ
ಸಣ್ಣಪುಟ್ಟ ಮನೆಕೆಲಸಗಳ ತರಬೇತಿ
ಬಾಲೆಗೆ ಬಿಡುವೆಂಬುದಿಲ್ಲ.

ಬಾಲೆಯಾಡಿಸುವ ಬಾಲೆ
ಹೊಸಿಲು ದಾಟಿ ಹೊರಬರುವಂತಿಲ್ಲ
ಆಚೀಚಿನವರ ಜೊತೆ ಬೆರೆಯುವಂತಿಲ್ಲ
ಮನೆಯವರ ಪ್ರಕಾರ
ಸಲಿಗೆ ಇಂತವರಿಗೆ ತರವಲ್ಲ.

ಬಾಲೆಯಾಡಿಸುವ ಬಾಲೆಗೆ
ತನ್ನ ಬೆವರ ಬೆಲೆ ಗೊತ್ತಿಲ್ಲ
ಕೊಟ್ಟೆ ಸಾರಾಯಿಯ ತಲುಬಿಗೆ
ಅಡವಾಗಿರುವುದರ ಅರಿವಿಲ್ಲ.

ಬಾಲೆಯಾಡಿಸುವ ಬಾಲೆಗೆ
ಉದ್ದನೆಯ ಜಡೆಯಿಲ್ಲ
ಎಣ್ಣೆ, ಸೀಗೆಗಳ ಉಪಚಾರ ಬೇಕಿಲ್ಲ
ಹೇನು ಹತ್ತೀತೆಂಬ ಭಯವಿಲ್ಲ
ಸಣ್ಣಗೆ ಕತ್ತರಿಸಿದ ಕ್ರಾಪಿಗೆ
ಬಾಚಣಿಗೆ ಸೇವೆ ಅನಿವಾರ್ಯವಲ್ಲ.

ಬಾಲೆಯಾಡಿಸುವ ಬಾಲೆಗೆ
ಉದ್ದನೆಯ ಫ್ರಾಕಿಲ್ಲ
ನೀರಲ್ಲಿ ತುದಿ ನೆನೆದು ಸೀತ ಅಂಟಿದರೆ
ಮನೆಯ ಎಳೆಬಾಲೆ ನರಳಬಾರದಲ್ಲ ?

ಬಾಲೆಯಾಡಿಸುವ ಬಾಲೆ
ಬೆರಗು ಕಳೆದುಕೊಂಡಿಲ್ಲ.
ಕಿಟಕಿ ಕಂಡಿಯಲಿ ಹಣಿಹಣಿಕಿ ನೋಡುವ
ಚಪಲ ತಗ್ಗಿಲ್ಲ
ಬೈಸಿಕೊಂಡರೂ ಬೈಗುಳ
ಒಳಗೆ ಉಳಿಯುವುದಿಲ್ಲ

ಬಾಲೆಯಾಡಿಸುವ ಬಾಲೆಗೆ
ಬಾಲೆ ಆಡಿಸುವುದು ಸಲೀಸೇನಲ್ಲ
ಎಳೆಬಾಲೆಯನು ನೆಗ್ಗಿ ಎತ್ತಿ
ಪುಟ್ಟ ಸೊಂಟದಲಿ ಸ್ಥಾಪಿಸಿ
ಓಲೈಸಿ, ರಮಿಸುವ ಕೆಲಸ ಹುಡುಗಾಟವಲ್ಲ.

ಬಾಲೆಯಾಡಿಸುವ ಬಾಲೆಗೆ
ಗುದ್ದು ಹೊಸದಲ್ಲ
ಮನೆಯ ಎಳೆಬಾಲೆ ಬಿದ್ದರೆ, ಎದ್ದರೆ, ಅತ್ತರೆ,
ಹೊಣೆಗಾರರಾಗಿಸಲು ಜನವೊಂದು ಬೇಕಲ್ಲ ?

ಬಾಲೆಯಾಡಿಸುವ ಬಾಲೆಗೆ
ಬಾಯಿರುಚಿ ಕಲಿಸಿಲ್ಲ
ಉಳಿದದ್ದು, ಪಳಿದದ್ದು ಬೀದಿನಾಯಿಗೆ ಎಸೆವ
ಕಾಲವೂ ಅಲ್ಲ.

ಬಾಲೆಯಾಡಿಸುವ ಬಾಲೆಗೆ
ಕಾನೂನು ಗೊತ್ತಿಲ್ಲ
ಕಾನೂನು ಗೊತ್ತಿರುವವರು
ಗಣನೆ ಮಾಡುವುದಿಲ್ಲ.
ಶಾಲೆಗೆ ಮರಳುವುದಿರಲಿ, ಮುನ್ನವೂ ಹೋಗಿಲ್ಲ.
ಬಾಲೆಯಾಡಿಸುವ ಬಾಲೆಗೆ
ಬೇಜಾರೇನಿಲ್ಲ
ತಕರಾರೂ ಇಲ್ಲ
ಹೀಗೆಲ್ಲಾ ಯೋಚಿಸುವಷ್ಟು
ಬಾಲೆ ಬೆಳೆದೂ ಇಲ್ಲ
ಬಹುಶಃ ಬೆಳೆಯುವುದೂ ಇಲ್ಲ
ಬೆಳೆಯಲು ನಮ್ಮಂತವರು
ಬಿಡವುದೂ ಇಲ್ಲ
ಬಿಟ್ಟರೆ ಗೆಯ್ಯಲು ನಮಗೆ
ಜನ ಸಿಗುವುದೂ ಇಲ್ಲ.

ವಸುಮತಿ ಉಡುಪ
'ಗೌರಿ', ೪ನೇ ಕ್ರಾಸ್, ಗಾಂಧೀನಗರ
ಶಿವಮೊಗ್ಗ - ೫೭೭ ೨೦೧

# ನಮ್ಮ ಸಂವಿಧಾನದತ್ತ ರಾಜ್ಯನೀತಿ ಸೂತ್ರಗಳೂ ಮೂಲಭೂತ ಕರ್ತವ್ಯಗಳೂ ಎಲ್ಲಿ ಹೋದವು ?

**ಅರವಿಂದ ಎಸ್. ಮಲೆಬೆನ್ನೂರ್**

**ಭಾ**ರತೀಯರು ತಮ್ಮ ದೇಶ ಒಂದು ಸಾರ್ವಭೌಮ, ಸಮಾಜವಾದಿ, ಜಾತ್ಯತೀತ, ಪ್ರಜಾಸತ್ತಾತ್ಮಕ ಗಣತಂತ್ರವಾಗಿರಬೇಕು; ದೇಶದ ಎಲ್ಲ ಪ್ರಜೆಗಳಿಗೂ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ನ್ಯಾಯ ದೊರಕುವಂತಾಗಬೇಕು; ಎಲ್ಲರಿಗೂ ವಿಚಾರ, ಅಭಿವ್ಯಕ್ತಿ, ಮತನಂಬಿಕೆ, ಆರಾಧನೆ ಇತ್ಯಾದಿ ಸ್ವಾತಂತ್ರ್ಯವಿರಬೇಕು; ಎಲ್ಲರೂ ಸಮಾನತೆ – ಸೋದರತೆಯ ಸ್ಥಾನಮಾನ ಪಡೆದಿರಬೇಕು; ವ್ಯಕ್ತಿಯ ಪುರೋಭಿವೃದ್ಧಿಗೆ ಎಲ್ಲ ಮುಕ್ತ ಅವಕಾಶಗಳಿರಬೇಕು; ವ್ಯಕ್ತಿಯ ಘನತೆಗೆ, ರಾಷ್ಟ್ರದ ಏಕತೆಗೆ ಖಾಚಿತ್ಯವಿರಬೇಕು – ಎಂದು ಘೋಷಿಸುವ ಸಂವಿಧಾನವನ್ನು ೧೯೫೦ರ ಜನವರಿ ೨೬ರಂದು ಅಂಗೀಕರಿಸಿದರು.

ಪ್ರತಿ ಪ್ರಜೆಯೂ ಸಂವಿಧಾನದ, ರಾಷ್ಟ್ರೀಯ ಸಂಸ್ಥೆಗಳ, ರಾಷ್ಟ್ರೀಯ ಧ್ವಜದ ಹಾಗೂ ರಾಷ್ಟ್ರಗೀತೆಯ ಘನತೆಯನ್ನು ಎತ್ತಿ ಹಿಡಿಯಬೇಕು; ರಾಷ್ಟ್ರದ ಸ್ವಾತಂತ್ರ್ಯವನ್ನು ಸಂರಕ್ಷಿಸಲು ಸದಾ ಸಿದ್ಧನಿರಬೇಕು; ಯಾವುದೇ ಧಾರ್ಮಿಕ, ಭಾಷಾ, ಪ್ರಾದೇಶಿಕ ಅಥವಾ ವಿಭಾಗೀಯ ಸಂಕುಚಿತ ಭಾವನೆಗಳಿಗೂ ಎಡೆ ಕೊಡದೆ ಎಲ್ಲರ ನಡುವೆ ಸಾಮರಸ್ಯ ಭಾವನೆ ಮೂಡಿಸಬೇಕು; ವೈಜ್ಞಾನಿಕ ಮನೋಧರ್ಮ, ಮಾನವೀಯತೆ ಹಾಗೂ ವೈಚಾರಿಕ ಪ್ರವೃತ್ತಿಯನ್ನು ಬೆಳೆಸಿಕೊಳ್ಳಬೇಕು; ವೈಯಕ್ತಿಕ ಹಾಗೂ ಸಾಮೂಹಿಕ ಚಟುವಟಿಕೆಗಳ ಎಲ್ಲ ವಲಯಗಳಲ್ಲೂ ಪರಮೋಚ್ಚತೆಯನ್ನು ಸಾಧಿಸಬೇಕು – ಎಂದು ಈ ಸಂವಿಧಾನದ 51-A ನಿಬಂಧನೆ ನಿಗದಿಪಡಿಸುತ್ತದೆ.

ದೇಶದ ವಿವಿಧ ರಾಜ್ಯಗಳ ವಿಧಾನಸಭೆಗಳಿಂದ ಆಯ್ಕೆಗೊಂಡ ಹಾಗೂ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದಲ್ಲಿ ಕ್ರಿಯಾಶೀಲವಾಗಿ ಭಾಗವಹಿಸಿದ್ದ ಶ್ರೇಷ್ಠ ಪ್ರತಿನಿಧಿಗಳು ಕೂಡಿ ರಚಿಸಿದ ಈ ಸಂವಿಧಾನದ IV- A ಭಾಗವು, ದೇಶದ ಸಕಲ ಪ್ರಜೆಗಳೂ, ಸಚಿವರೂ, ವಿಧಾನಸಭಾ ಹಾಗೂ ಪಾರ್ಲಿಮೆಂಟ್ ಸದಸ್ಯರುಗಳೂ ಸಂವಿಧಾನದ ಮೂಲಭೂತ ಕರ್ತವ್ಯಗಳನ್ನು ತಪ್ಪದೇ ಪಾಲಿಸಬೇಕೆಂದು ಆಗ್ರಹಿಸುತ್ತದೆ. ಸಂವಿಧಾನದ IV ನೇ ಭಾಗವು ರಾಜ್ಯ ಅನುಸರಿಸಬೇಕಾದ ನೀತಿ ಸೂತ್ರಗಳನ್ನು ನಮೂದಿಸುತ್ತದೆ. ಈ ನೀತಿ ಸೂತ್ರಗಳು ನ್ಯಾಯಾಂಗವನ್ನೂ ಒಳಗೊಂಡಂತೆ ದೇಶದ ಎಲ್ಲ ಸಾರ್ವಜನಿಕ ಹಾಗೂ ಸರಕಾರೀ ಸಂಘ ಸಂಸ್ಥೆಗಳಿಗೆ ಮಾರ್ಗದರ್ಶಕ ಸೂತ್ರಗಳಾಗಿವೆ. ಈ ಸೂತ್ರಗಳನ್ನು ಪರಿಪಾಲಿಸಬೇಕಾದುದು ಎಲ್ಲ ರಾಜ್ಯಗಳ ಕರ್ತವ್ಯವೆಂದು ಸಂವಿಧಾನದ ೩೭ನೇ ನಿಬಂಧನೆ ಗೊತ್ತುಪಡಿಸುತ್ತದೆ.

ಈ ನಿಬಂಧನೆಗಳು ಯಾವುವೇ ಹೊಸ ವರ್ಷದ ನಿರ್ಣಯಗಳಂತಲ್ಲ, ಯಾವುದೇ ರಾಜಕೀಯ ಪ್ರಣಾಳಿಕೆಯಂತಲ್ಲ, ಆದರೆ ಜನರಿಗೆ ಜವಾಬ್ದಾರಿಯುತವಾದ ಯಾವುದೇ ಸಚಿವ ಸಂಪುಟವೂ ಲಘುವಾಗಿ ಉಪೇಕ್ಷಿಸಬಾರದಂತಹ ನಿಯಮಗಳಾಗಿವೆ ಎಂದು ಸರ್ ಅಲ್ಲಾಡಿ ಕೃಷ್ಣಸ್ವಾಮಿ ಐಯರ್ ವಿವರಿಸಿದ್ದಾರೆ. ಸಂವಿಧಾನದ ರಚನೆಯಲ್ಲಿ ಭಾಗಿಗಳಾಗಿದ್ದ ಬಿ. ಆರ್. ಅಂಬೇಡ್ಕರ್, ಜವಹರಲಾಲ ನೆಹರು, ಸೋಮನಾಥ ಲಹರಿಯಂಥವರೂ ರಾಜ್ಯನೀತಿ ಸೂತ್ರಗಳನ್ನೊಳಗೊಂಡ ಸಂವಿಧಾನದ IV ನೇ ಭಾಗಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿದ್ದಾರೆ. ''ಸಂವಿಧಾನದ IV ನೇ ಭಾಗ ಒಳಗೊಂಡಿರುವ ರಾಜ್ಯ ನೀತಿ ನಿರ್ದೇಶಕ ಸೂತ್ರಗಳು ಅತ್ಯಮೂಲ್ಯವಾದವುಗಳೆಂದು ನನ್ನ ಭಾವನೆ. ಆರ್ಥಿಕ ಪ್ರಜಾಸತ್ತೆಯೇ ನಮ್ಮ ಧ್ಯೇಯಾದರ್ಶವಾಗಿರಬೇಕು ಎಂದು ಅವು ಸ್ಪಷ್ಟಪಡಿಸುತ್ತವೆ. ನಮ್ಮ ಆರ್ಥಿಕ ಆದರ್ಶ ಏನಾಗಿರಬೇಕು, ನಮ್ಮ ಸಾಮಾಜಿಕ ವ್ಯವಸ್ಥೆ ಹೇಗಿರಬೇಕು ಎಂಬುದನ್ನು ಸ್ಪಷ್ಟಗೊಳಿಸಲೆಂದೇ ನಾವು ಈ ನಿರ್ದೇಶಕ ಸೂತ್ರಗಳನ್ನು ಬೇಕೆಂತಲೇ ಸೇರಿಸಿದ್ದೇವೆ'' ಎಂದು ಡಾ|| ಅಂಬೇಡ್ಕರ್ ತಿಳಿಸಿದ್ದಾರೆ.

ನಮ್ಮ ಸಂವಿಧಾನದ ಆದ್ಯ ಪ್ರವರ್ತಕರಲ್ಲೊಬ್ಬರಾದ ಪಂಡಿತ ಜವಹರಲಾಲ ನೆಹರು ಹೀಗೆ ಹೇಳಿದ್ದಾರೆ: ''ಜಗತ್ತಿನ ಹಾಗೂ ಭಾರತದ ಸಮಸ್ಯೆಗಳ ಪರಿಹಾರಕ್ಕೆ ಸಮಾಜವಾದವೊಂದೇ ಮುಕ್ತಿಮಾರ್ಗ ಎಂದು ನಾನು ದೃಢವಾಗಿ ಮನಗಂಡಿದ್ದೇನೆ. ನಾನು ಸಮಾಜವಾದ ಎಂಬ ಪದವನ್ನು ಕೇವಲ ಮಾನವೀಯ ದೃಷ್ಟಿಯಿಂದಲ್ಲ, ಆದರೆ ವೈಜ್ಞಾನಿಕ ಹಾಗೂ ಆರ್ಥಿಕ ದೃಷ್ಟಿಯಿಂದ ಬಳಸುತ್ತಿದ್ದೇನೆ. ಸಮಾಜವಾದವು ಕೇವಲ ಒಂದು ಆರ್ಥಿಕ ಸಿದ್ಧಾಂತವಲ್ಲ, ಅದೊಂದು ಜೀವನ ದರ್ಶನ. ಬಡತನ, ನಿರುದ್ಯೋಗ, ಅವನತಿಗಳನ್ನು ಹೋಗಲಾಡಿಸಲು ಸಮಾಜವಾದ ಬಿಟ್ಟು ಬೇರೆ ಮಾರ್ಗವೇ ನಮಗೆ ಕಾಣೆಸದು. ಆದರೆ ಸಮಾಜವಾದವನ್ನು ಜಾರಿಗೆ ತರಲು ನಮ್ಮ ರಾಜಕೀಯ ಹಾಗೂ ಸಾಮಾಜಿಕ ಸಂರಚನೆಯಲ್ಲಿ ಭಾರಿ ಕ್ರಾಂತಿಕಾರೀ ಪರಿವರ್ತನೆಗಳಾಗಬೇಕು, ಭೂ ಕ್ಷೇತ್ರದಲ್ಲೂ ಕೈಗಾರಿಕಾ ರಂಗದಲ್ಲೂ ಪಟ್ಟಭದ್ರ ಹಿತಾಸಕ್ತಿಗಳೂ, ಸಾಮಂತಶಾಹಿ ನಿರಂಕುಶ ರಾಜ್ಯ ಪದ್ಧತಿಗಳೂ ಕೊನೆಗಾಣಬೇಕು. ಇದಕ್ಕೆ ಖಾಸಗಿ ಒಡೆತನ ಸೀಮಿತ ಪ್ರಮಾಣದಲ್ಲಷ್ಟೇ ಇರಬೇಕು. ಭಾರಿ ಪ್ರಮಾಣದ ಖಾಸಗಿ ಒಡೆತನ ಹೋಗಬೇಕು. ಇಂದಿನ ಲಾಭಗಳಿಕೆ ವ್ಯವಸ್ಥೆಯ ಸ್ಥಳದಲ್ಲಿ ಉನ್ನತಾದರ್ಶದ ಸಹಕಾರೀ ಸೇವಾ ವ್ಯವಸ್ಥೆ ಜಾರಿಗೆ ಬರಬೇಕು. ಅಂದರೆ ನಮ್ಮ ಅಭ್ಯಾಸ, ಬಯಕೆ ಹಾಗೂ ಹುಟ್ಟುಗುಣಗಳಲ್ಲಿ ಬದಲಾವಣೆಯಾಗಬೇಕು. ಸ್ವಲ್ಪದರಲ್ಲಿ, ಇಂದಿನ ಬಂಡವಾಳಶಾಹಿ ವ್ಯವಸ್ಥೆಯ ಸ್ಥಳದಲ್ಲಿ ಮೂಲಭೂತವಾಗಿ ಭಿನ್ನವಾದ ಒಂದು ಹೊಸ ನಾಗರಿಕತೆ ಬರಬೇಕು.''

ಮೇಲಿನ ವಿಚಾರಗಳ ಹಿನ್ನಲೆಯಲ್ಲಿ, ಇಂದಿನ ಸರಕಾರೀ ನಿರ್ವಹಣೆಯಲ್ಲಿ ಸಂವಿಧಾನದ IV ನೇ ಭಾಗದ ನೀತಿ ನಿರ್ದೇಶಗಳನ್ನು ಎಷ್ಟರಮಟ್ಟಿಗೆ ಅನುಸರಿಸಲಾಗುತ್ತಿದೆ ಎಂಬುದನ್ನು ನೋಡೋಣ. IVನೇ ಭಾಗದ ೩೮ನೇ ನಿಬಂಧನೆ

> **''ಜಗತ್ತಿನ ಹಾಗೂ ಭಾರತದ ಸಮಸ್ಯೆಗಳ ಪರಿಹಾರಕ್ಕೆ ಸಮಾಜವಾದವೊಂದೇ ಮುಕ್ತಿಮಾರ್ಗ ಎಂದು ನಾನು ದೃಢವಾಗಿ ಮನಗಂಡಿದ್ದೇನೆ. ನಾನು ಸಮಾಜವಾದ ಎಂಬ ಪದವನ್ನು ಕೇವಲ ಮಾನವೀಯ ದೃಷ್ಟಿಯಿಂದಲ್ಲ ಆದರೆ ವೈಜ್ಞಾನಿಕ ಹಾಗೂ ಆರ್ಥಿಕ ದೃಷ್ಟಿಯಿಂದ ಬಳಸುತ್ತಿದ್ದೇನೆ. ಸಮಾಜವಾದವು ಕೇವಲ ಒಂದು ಆರ್ಥಿಕ ಸಿದ್ಧಾಂತವಲ್ಲ, ಅದೊಂದು ಜೀವನ ದರ್ಶನ. ಬಡತನ, ನಿರುದ್ಯೋಗ, ಅವನತಿಗಳನ್ನು ಹೋಗಲಾಡಿಸಲು ಸಮಾಜವಾದ ಬಿಟ್ಟು ಬೇರೆ ಮಾರ್ಗವೇ ನಮಗೆ ಕಾಣೆಸದು. ಆದರೆ ಸಮಾಜವಾದವನ್ನು ಜಾರಿಗೆ ತರಲು ನಮ್ಮ ರಾಜಕೀಯ ಹಾಗೂ ಸಾಮಾಜಿಕ ಸಂರಚನೆಯಲ್ಲಿ ಭಾರಿ ಕ್ರಾಂತಿಕಾರೀ ಪರಿವರ್ತನೆಗಳಾಗಬೇಕು, ಭೂ ಕ್ಷೇತ್ರದಲ್ಲೂ ಕೈಗಾರಿಕಾ ರಂಗದಲ್ಲೂ ಪಟ್ಟಭದ್ರಹಿತಾಸಕ್ತಿಗಳೂ, ಸಾಮಂತಶಾಹಿ ನಿರಂಕುಶ ರಾಜ್ಯ ಪದ್ಧತಿಗಳೂ ಕೊನೆಗಾಣಬೇಕು. ಇದಕ್ಕೆ ಖಾಸಗಿ ಒಡೆತನ ಸೀಮಿತ ಪ್ರಮಾಣದಲ್ಲಷ್ಟೇ ಇರಬೇಕು. ಭಾರಿ ಪ್ರಮಾಣದ ಖಾಸಗಿ ಒಡೆತನ ಹೋಗಬೇಕು. ಇಂದಿನ ಲಾಭಗಳಿಕೆ ವ್ಯವಸ್ಥೆಯ ಸ್ಥಳದಲ್ಲಿ ಉನ್ನತಾದರ್ಶದ ಸಹಕಾರೀ ಸೇವಾ ವ್ಯವಸ್ಥೆ ಜಾರಿಗೆ ಬರಬೇಕು. ಅಂದರೆ ನಮ್ಮ ಅಭ್ಯಾಸ, ಬಯಕೆ ಹಾಗೂ ಹುಟ್ಟುಗುಣಗಳಲ್ಲಿ ಬದಲಾವಣೆಯಾಗಬೇಕು. ಸ್ವಲ್ಪದರಲ್ಲಿ, ಇಂದಿನ ಬಂಡವಾಳಶಾಹಿ ವ್ಯವಸ್ಥೆಯ ಸ್ಥಳದಲ್ಲಿ ಮೂಲಭೂತವಾಗಿ ಭಿನ್ನವಾದ ಒಂದು ಹೊಸ ನಾಗರಿಕತೆ ಬರಬೇಕು.''**
>
> **– ಜವಹರಲಾಲ ನೆಹರು**

ತಿಳಿಸುತ್ತದೆ: ರಾಷ್ಟ್ರ ಜೀವನದಲ್ಲಿ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ನ್ಯಾಯ ಪರತೆ ಪರಿಣಾಮಕಾರಿಯಾಗಿ ರಕ್ಷಿತವಾಗಬೇಕು. ಆದಾಯಗಳಲ್ಲಿನ ಅಸಮಾನತೆಯನ್ನು ಕನಿಷ್ಠಗೊಳಿಸಬೇಕು. ದೇಶದ ವಿವಿಧ ಪ್ರದೇಶಗಳಲ್ಲಿ ವಾಸವಾಗಿದ್ದುಕೊಂಡು ವಿವಿಧ ವೃತ್ತಿಗಳನ್ನು ಅನುಸರಿಸುತ್ತಿರುವಂಥ ವ್ಯಕ್ತಿಗಳ ಹಾಗೂ ಜನವೃಂದಗಳ ನಡುವೆ ಸ್ಥಾನಮಾನ, ಸೌಲಭ್ಯ ಮತ್ತು ಅವಕಾಶಗಳಿಗೆ ಸಂಬಂಧಿಸಿ ಇರುವ ಅಸಮಾನತೆಗಳನ್ನು ತೊಡೆದುಹಾಕಲು ಶ್ರಮಿಸಬೇಕು. ೩೯ನೇ ನಿಬಂಧನೆ ಹೇಳುತ್ತದೆ: ಜನಸಮುದಾಯದ ವಸ್ತು ಸಂಪನ್ಮೂಲಗಳ ಮೇಲಿನ ಒಡೆತನ ಹಾಗೂ ನಿಯಂತ್ರಣಗಳು ಹೇಗೆ ವಿತರಣೆಯಾಗಬೇಕೆಂದರೆ, ಸಂಪತ್ತೂ ಉತ್ಪಾದನಾ ಸಾಧನಗಳೂ ಕೆಲವೇ ವ್ಯಕ್ತಿಗಳ ಕೈಯಲ್ಲಿ ಕೇಂದ್ರೀಕೃತವಾಗಿ ಸಾಮಾನ್ಯರ ಹಿತಕ್ಕೆ ಪ್ರತಿಕೂಲವಾಗುವಂತೆ ಆಗಬಾರದು. ಮಕ್ಕಳೂ, ಯುವಕರೂ ಶೋಷಣೆಗೊಳಗಾಗದಂತೆ ಅವರಿಗೆ ರಕ್ಷಣೆ ಒದಗಿಸಬೇಕು. ನ್ಯಾಯಾಂಗ ವ್ಯವಸ್ಥೆಯು ಸಮಾನ ಅವಕಾಶದ ಆಧಾರದ ಮೇಲೆ ಸಕಲರಿಗೂ ನ್ಯಾಯ ಒದಗಿಸುವಂತಿದ್ದು ಆರ್ಥಿಕ ಅಥವಾ ಮತ್ತಾವುದೇ ಕುಂದುಕೊರತೆಯ ಕಾರಣಕ್ಕಾಗಿ ಯಾವುದೇ ಪ್ರಜೆಗೂ ನ್ಯಾಯ ನಿರಾಕರಿಸುವಂತಾಗಬಾರದು.

ರಾಜ್ಯವು ಗ್ರಾಮ ಪಂಚಾಯತಿಗಳನ್ನು ಸಂಘಟಿಸಿ ಅವುಗಳಿಗೆ ಸ್ವಯಮಾಡಳಿತದ ಘಟಕಗಳಾಗಿ ಕಾರ್ಯಜರುಗಿಸುವಂತೆ ಸಾಧ್ಯಮಾಡಿಕೊಡಬೇಕೆಂದು ನಿಬಂಧನೆ ೪೦ ತಿಳಿಸುತ್ತದೆ. ಎಲ್ಲರಿಗೂ ಕೆಲಸದ, ವಿದ್ಯಾಭ್ಯಾಸದ ಅವಕಾಶಗಳನ್ನು ಒದಗಿಸಿಕೊಡಬೇಕು ಮತ್ತು ನಿರುದ್ಯೋಗ, ಮುಪ್ಪು, ರೋಗ ಮತ್ತಿತರ ಅಂಗ ನ್ಯೂನತೆಗಳ ಪ್ರಸಂಗಗಳಲ್ಲಿ ಜೀವನ ಸಾಗಿಸಲು ಸೂಕ್ತ ಸಾರ್ವಜನಿಕ ಸೌಲಭ್ಯ ಖಚಿತಪಡಿಸಿಕೊಡಬೇಕು ಎಂದು ನಿಬಂಧನೆ ೪೧ ನಿಗದಿಪಡಿಸುತ್ತದೆ. ಜನತೆಯ ದುರ್ಬಲ ವಿಭಾಗಗಳ, ಅದರಲ್ಲೂ ಪರಿಶಿಷ್ಟ ಜಾತಿ ಹಾಗೂ ಬುಡಕಟ್ಟು ಜನರಿಗೆ, ಶೈಕ್ಷಣಿಕ ಹಾಗೂ ಆರ್ಥಿಕ ಹಿತರಕ್ಷಣೆಗಾಗಿ ರಾಜ್ಯವು ಕಾಳಜಿ ವಹಿಸಬೇಕು ಎಂದು ನಿಬಂಧನೆ ೪೬ ಗೊತ್ತುಪಡಿಸುತ್ತದೆ. ನ್ಯಾಯಾಂಗವು ಕಾರ್ಯಾಂಗದಿಂದ ಬೇರ್ಪಟ್ಟಿರಬೇಕು, ದೇಶವು ಇತರ ರಾಷ್ಟ್ರಗಳೊಂದಿಗೆ ನ್ಯಾಯಯುತವಾದ ಹಾಗೂ ಗೌರವಾರ್ಹ ಸಂಬಂಧಗಳನ್ನು ಏರ್ಪಡಿಸಿಕೊಂಡಿರಬೇಕು ಎಂದು ನಿಬಂಧನೆ ೫೦ ತಿಳಿಸುತ್ತದೆ.

ಆದರೆ ಇಂದು ನಾವು ಕಾಣುತ್ತಿರುವ ಪರಿಸ್ಥಿತಿ ಏನು ? ಸಂವಿಧಾನದ IV ನೇ ಅಧ್ಯಾಯ ಒಳಗೊಂಡಿರುವ ಪ್ರತಿಯೊಂದು ನಿರ್ದೇಶಕ ಸೂತ್ರವನ್ನೂ ಇಂದಿನ ಆಳುವ ವರ್ಗ ಅಪಭ್ರಂಶಗೊಳಿಸಿದೆಯಷ್ಟೇ ಅಲ್ಲ, ಅವುಗಳನ್ನು ಖಂಡತುಂಡರಿಸಿದೆ ಎಂಬುದು ಕೇಶವಾನಂದ ಭಾರತಿ (೧೯೭೩), ಮಿನರ್ವ ಮಿಲ್ಸ್ (೧೯೮೦) ಹಾಗೂ ಗೋಲಕನಾಥ (೧೯೬೭) ಪ್ರಸಂಗಗಳಲ್ಲಿ ಸುಸ್ಪಷ್ಟವಾಗಿದೆ.

ವಿಶ್ವ ವ್ಯಾಪಾರ ಸಂಸ್ಥೆ ಹೊರಿಸಿದ ಷರತ್ತುಗಳಿಗೆ ಒಪ್ಪಿಗೆ ನೀಡಿರುವುದರ ಪರಿಣಾಮವಾಗಿ ದೇಶದ ಆರ್ಥಿಕ ಬೆಳವಣಿಗೆಯು ಕುಗ್ಗಿದೆ. ಮಾರುಕಟ್ಟೆಯ ಜಾಗತೀಕರಣದ ಘೋಷಣೆಯಡಿ ಮುಕ್ತ ಆಮದುಗಳಿಗೆ ಅವಕಾಶ ನೀಡಿ ಆರ್ಥಿಕ ಪ್ರಗತಿ ಕುಂಠಿತವಾಗಿದೆ. ಸೆಲ್ಲೋ ಜೆಲ್ ಪೆನ್, ಕಾಸ್ಮೆಟಿಕ್ಸ್ ಹಾಗೂ ಲಿಪ್‌ಸ್ಟಿಕ್‌ಗಳಿಂದ ಹಿಡಿದು ಮರ್ಸಿಡೀಸ್ ಬೆನ್ಜ್ ಕಾರುಗಳವರೆಗೆ ನಾನಾ ವಿದೇಶೀ ಬಳಕೆದಾರ ವಸ್ತುಗಳನ್ನು ನಮ್ಮ ಮಾರುಕಟ್ಟೆಯೊಳಕ್ಕೆ ಗಿಡುಕಿ ತುಂಬಲಾಗುತ್ತಿದೆ. ಅಮೆರಿಕದ 'ಅಂಕಲ್ಸ್ ಚಿಪ್ಸ್' ಬಂದು ಇನ್ನುಮೇಲೆ ಮನೆಯಲ್ಲೇ ಮಾಡಿದ ಚಿಪ್ಸ್ ಮಂಗಮಾಯವಾಗಲಿದೆ. ಕೋಕಾಕೋಲಾ ಪೆಪ್ಸಿಕೋಲಾಗಳು ಬಂದು ಸ್ಥಳೀಯ ಪಾನೀಯ ಸಂಸ್ಥೆಗಳು ಬೀದಿಪಾಲಾಗಿವೆ. ಸಂತೆಗಳಲ್ಲಿ, ಮಾರುಕಟ್ಟೆಗಳಲ್ಲಿ ಬಸ್‌ಸ್ಟ್ಯಾಂಡ್‌ಗಳಲ್ಲಿ ಸೋಡಾ, ಲೆಮನೆಡ್ ಮುಂತಾದ ತಂಪು ಪಾನೀಯ ಮಾರಿ ಜೀವನ ಸಾಗಿಸುತ್ತಿದ್ದ ಲಕ್ಷಾಂತರ ಜನರೀಗ ನಿರುದ್ಯೋಗಿಗಳಾಗಿದ್ದಾರೆ. ನೂರಾರು ಟೆಕ್ಸ್‌ಟೈಲ್ ಮಿಲ್‌ಗಳು ರೋಗಗ್ರಸ್ತವಾಗಿವೆ. ಲಕ್ಷಾಂತರ ಎಕರೆ ಭೂಮಿಯಲ್ಲಿ ಕಬ್ಬು ಬೆಳೆದ ಕೃಷಿಕರು ಸಕ್ಕರೆ ಕಾರ್ಖಾನೆಗಳ ಮುಗ್ಗಟ್ಟಿನಿಂದಾಗಿ ಕಂಗಾಲಾಗಿದ್ದಾರೆ. ಸಾಮಾನ್ಯ ಲೆಕ್ಕದಂತೆ ದೇಶದಲ್ಲಿ ೫.೪ ಲಕ್ಷ ಸಣ್ಣ, ದೊಡ್ಡ ಹಾಗೂ ಮಧ್ಯಮ ಕೈಗಾರಿಕೆಗಳು ಮುಚ್ಚಿವೆ. ೧೧ ಮಿಲಿಯ ಕಾರ್ಮಿಕರು ಕೆಲಸ ಕಳೆದುಕೊಂಡು ೮ ಕೋಟಿ ಜನರ ಬಾಳು ಬವಣೆಗೊಳಗಾಗಿದೆ.

ಹೊಸ ಯಂತ್ರಕಲೆಯನ್ನು ಆಮದು ಮಾಡಿಕೊಳ್ಳುವ ನೆಪದಲ್ಲಿ ಭಾರತ ಸರ್ಕಾರವೂ ರಾಜ್ಯ ಸರಕಾರಗಳೂ ತಮ್ಮ ಒಡೆತನದಲ್ಲಿದ್ದ ಕೈಗಾರಿಕೆ ಹಾಗೂ ಉದ್ಯಮಗಳ ಷೇರುಗಳನ್ನು ಬಹುರಾಷ್ಟ್ರೀಯ ಸಂಸ್ಥೆಗಳಿಗೂ ಅನಿವಾಸಿ ಭಾರತೀಯರಿಗೂ ಮತ್ತು ಬೃಹತ್ ಉದ್ಯಮಿಗಳಿಗೂ ತರಾತುರಿಯಲ್ಲಿ ಮಾರುತ್ತಿರುವುದರ ಪರಿಣಾಮವಾಗಿ ದೇಶದ ಕೈಗಾರಿಕಾಭಿವೃದ್ಧಿ ಸ್ಥಗಿತಗೊಂಡಿದೆಯಷ್ಟೇ ಅಲ್ಲ, ಸಂಪತ್ತು ಕೆಲವೇ ಕೈಗಳಲ್ಲಿ ಕೇಂದ್ರೀಕೃತವಾಗಿ ಕೋಟ್ಯಾಂತರ ಜನರ ತುತ್ತು ಊಟಕ್ಕೂ ಭಂಗ ಬಂದಿದೆ. ಜಗತ್ತಿನ ಇತರ ಕೆಲವು ದೇಶಗಳಿಗೆ ಹೋಲಿಸಿದಂತೆ ಭಾರತದಲ್ಲಿ ದುರ್ಬಲ ಜನವಿಭಾಗಗಳು ಎದುರಿಸುತ್ತಿರುವ ದುಃಸ್ಥಿತಿಯನ್ನು ಈ ಕೆಳಗಿನ ೨೦೦೧ರ ಮಾನವ ವಿಕಾಸ ವರದಿಯ ಪಟ್ಟಿ ಸ್ಪಷ್ಟಪಡಿಸುತ್ತದೆ.

ಬಡತನ ರೇಖೆಯ ಕೆಳಗಿರುವವರ ಶೇಕಡಾವಾರು ಸಂಖ್ಯೆ ಈ ಕೆಳಗಿನಂತಿದೆ. ಜಗತ್ತಿನಾದ್ಯಂತ ೨೪%, ವಿಕಸಿತ ದೇಶಗಳಲ್ಲಿ ೨೬%, ದಕ್ಷಿಣ ಏಷ್ಯ ದೇಶಗಳಲ್ಲಿ ೪೦%, ಸಬ್ - ಸಹಾರ ಆಫ್ರಿಕಾದಲ್ಲಿ ೪೩%, ಭಾರತದಲ್ಲಿ ೪೪%, ಪಾಕಿಸ್ತಾನದಲ್ಲಿ ೩೧%, ಬಾಂಗ್ಲಾದೇಶದಲ್ಲಿ ೨೯%; ಶ್ರೀಲಂಕಾದಲ್ಲಿ ೭%, ನೇಪಾಳದಲ್ಲಿ ೩೮%. ಈ ಪಟ್ಟಿಯ ಪ್ರಕಾರ ಭಾರತವೇ ಮೇಲಿನ ಸ್ಥಾನದಲ್ಲಿದೆ.

| ದೇಶ | ಆದಾಯ/ಬಳಕೆಯಲ್ಲಿ ಮೇಲಿನ ಶೇ. ೧೦ ಜನರ ಪಾಲು | ಆದಾಯ/ಬಳಕೆಯಲ್ಲಿ ಕೆಳಗಿನ ಶೇ. ೧೦ ಜನರ ಪಾಲು | ಮೇಲಿನ ಶೇ. ೧೦ ಹಾಗೂ ಕೆಳಗಿನ ಶೇ. ೧೦ರ ನಡುವಿನ ಅಸಮಾನತೆ |
|---|---|---|---|
| ಲುಕ್ಸೆಂಬರ್ಗ್ | ೨೨.೦% | ೪.೦% | ೫.೪ |
| ಸ್ವಿಟ್ಸರ್‌ಲೆಂಡ್ | ೨೫.೨ % | ೨.೬% | ೯.೯ |
| ನಾರ್ವೆ | ೨೧.೮ % | ೪.೧ % | ೫.೩ |
| ಜಪಾನ್ | ೨೧.೭% | ೪.೮% | ೪.೫ |
| ಡೆನ್ಮಾರ್ಕ್ | ೨೦.೫ % | ೩.೬ % | ೫.೭ |
| ಭಾರತ | ೩೩.೫ % | ೩.೫ % | ೯.೫ |

ಬಹುಭಾರಿ ಜನಸಂಖ್ಯೆಯ ದೇಶಗಳಲ್ಲಿನ ಬಡತನ ಪ್ರಮಾಣ ಈ ರೀತಿ ಇದೆ : ಚೀಣಾ ೧೯%, ಭಾರತ ೪೪%, ಇಂಡೋನೇಷ್ಯ, ೧೫%, ಬ್ರೆಜಿಲ್ ೫%. ಇಲ್ಲೂ ಭಾರತವೇ ಮೇಲು ಪಂಕ್ತಿಯಲ್ಲಿದೆ.

| ಭಾರತ ಸರಕಾರದ ಬಜೆಟ್ ಹಂಚಿಕೆ | | |
|---|---|---|
| ಸಂಖ್ಯೆ | ಇಲಾಖೆ | ಬಜೆಟ್ (ಕೋಟಿಗಳಲ್ಲಿ) |
| ೧. | ಆರೋಗ್ಯ ಇಲಾಖೆ | ರೂ. ೨,೪೨೭ |
| ೨. | ಕುಡಿಯುವ ನೀರು ಸರಬರಾಜು ಇಲಾಖೆ | ರೂ. ೨,೪೦೧ |
| ೩. | ನಗರ ಬೆಳವಣಿಗೆ ಹಾಗೂ ಬಡತನ ನಿರ್ಮೂಲನ ಇಲಾಖೆ | ರೂ. ೬೪೨ |
| ೪. | ಪ್ರಾಥಮಿಕ ಶಿಕ್ಷಣ, ಸಾಕ್ಷರತೆ | ರೂ. ೧೦,೩೭೫ |
| ೫. | ಪೊಲೀಸ್ ಇಲಾಖೆ | ರೂ. ೧೦,೭೪೩ |

೧೯೯೩ರ ಯೂನೆಸ್ಕೊ ವರದಿಯ ಪ್ರಕಾರ ಭಾರತದಲ್ಲಿ ೨೮೦.೭ ಮಿಲಿಯ ವಯಸ್ಕರು ನಿರಕ್ಷರಸ್ಥರು. ಅದೇ ಚೀಣಾದಲ್ಲಿ ನೂರರಲ್ಲಿ ೯೧ ಮಂದಿ ಸಾಕ್ಷರಸ್ಥರು. ಭಾರತದಲ್ಲಿ ಶಿಶು ಮರಣ ದರ ಶೇ. ೭೦ ಆಗಿದ್ದಲ್ಲಿ, ಅತ್ಯಂತ ಹಿಂದುಳಿದ ಜನಭರಿತ ದೇಶಗಳಲ್ಲೂ ಇದು ಕೇವಲ ಶೇ. ೩೫.

೨೦೦೩ರ ಮಾರ್ಚ್ ೧ ರಂದು ಭಾರತದ ವಿತ್ತ ಮಂತ್ರಿ ಶ್ರೀ ಸಿನ್ಹಾರವರು ಪ್ರಕಟಿಸಿದ ಬಜೆಟ್ ಅನೇಕ ವಿಸಂಗತ ಅಂಶಗಳನ್ನು ಒಳಗೊಂಡಿದೆ. ದೇಶದಲ್ಲಿ ಬಡತನ ತಾಂಡವವಾಡುತ್ತಿದ್ದರೂ ವಿತ್ತ ಮಂತ್ರಿಗಳು ಅತ್ತ ಕಡೆಗೆ ಗಮನ ಹರಿಸದೆ ನಾಚಿಕೆಗೆಟ್ಟ ರೀತಿಯಲ್ಲಿ ಶ್ರೀಮಂತರಿಗೆ ನೆರವಾಗುವಂತೆ ಕಾರುಗಳ ಮೇಲಿನ ಆಮದು ತೆರಿಗೆಯನ್ನೂ, ಏರ್‌ಕಂಡೀಷನರ್‌ಗಳ ಮೇಲಿನ ತೆರಿಗೆಯನ್ನೂ ಕಡಿಮೆ ಮಾಡಿದ್ದಾರೆ. ಇದರಿಂದಾಗಿ ಉಂಟಾದ ಖೋತಾವನ್ನು ತುಂಬಲೋಸುಗ ಅವರು ಸಾಮಾನ್ಯ ಜನರ ಬಳಕೆ ಪದಾರ್ಥಗಳಲ್ಲಿ ಶೇ. ೬೫ರ ಮೇಲಿನ ತೆರಿಗೆ ಹೆಚ್ಚಿಸಬಯಸುತ್ತಾರೆ. ಇದು, ದುಡಿಯುವ ಜನರನ್ನು ಅನಿರ್ಬಂಧಿತವಾಗಿ ಸುಲಿಗೆ ಮಾಡಿ, ಜನಸಂಖ್ಯೆಯ ಕೇವಲ ಶೇ. ೩ರಷ್ಟಿರುವ ಶ್ರೀಮಂತ ಭಾರತೀಯರ – ಅಲ್ಲ, ಬಹುರಾಷ್ಟ್ರೀಯರ, ಅನಿವಾಸಿ ಭಾರತೀಯರ ಹಾಗೂ ಭಾರಿ ಬಂಡವಾಳಗಾರರ – ಕೈಗಳಲ್ಲಿ ದೇಶದ ಸಂಪತ್ತು ಕೇಂದ್ರೀಕೃತವಾಗುವಂತೆ ಮಾಡುವ ಸನ್ನಾಹವಲ್ಲದೆ ಬೇರೇನೂ ಅಲ್ಲ. ಇದೇ ರೀತಿ ಶಿಕ್ಷಣರಂಗದಲ್ಲೂ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಉತ್ತೇಜನ ನೀಡಿ ಸರಕಾರೀ ಹಾಗೂ ಸ್ಥಳೀಯ ಸಂಸ್ಥೆಗಳ ಶಾಲೆಗಳನ್ನು ಅನೂರ್ಜಿತಗೊಳಿಸಿ, ವಿದ್ಯಾಭ್ಯಾಸವು 'ದುಡ್ಡಿದ್ದವರ' ಮಕ್ಕಳಿಗಷ್ಟೇ ಲಭ್ಯವಾಗುವಂತೆ ಮಾಡಲಾಗಿದೆ. ಸಾರ್ವಜನಿಕ ಆರೋಗ್ಯ ಕ್ಷೇತ್ರವನ್ನು ಪರಿಗಣಿಸಿದಾಗ,

೧೯೯೦ ಹಾಗೂ ೨೦೦೦ದ ನಡುವಿನ ಒಂದು ದಶಕದಲ್ಲೇ ಖಾಸಗಿ ಕ್ಲಿನಿಕ್‌ಗಳೂ ನರ್ಸಿಂಗ್ ಹೋಮ್‌ಗಳೂ ಔಷಧ ಅಂಗಡಿಗಳೂ ಹಿಂದೆಂದೂ ಕಂಡುಬರದಷ್ಟು ಪ್ರಮಾಣದಲ್ಲಿ ನಾಯಿಕೊಡೆಗಳಂತೆ ಥಟ್ಟನೆ ಉಬ್ಬಿ ಹರಡಿಕೊಂಡಿರುವುದು ಕಂಡು ಬರುತ್ತದೆ. ಸರಕಾರೀ ಹಾಗೂ ಪೌರಾಡಳಿತದ ವೈದ್ಯಕೀಯ ಸಂಸ್ಥೆಗಳನ್ನು ಸಂಪೂರ್ಣವಾಗಿ ಕಡೆಗಣಿಸಿರುವುದೇ ಇದಕ್ಕೆ ಕಾರಣ. ಜನರೀಗ ಖಾಸಗಿ ವೈದ್ಯರ ಅಥವಾ ನರ್ಸಿಂಗ್ ಹೋಮ್‌ಗಳ ಮೊರೆ ಹೋಗುವಂತಾಗಿದೆ. ಹಾಗಾಗಿ ಬಡಜನರಿಗೆ ವೈದ್ಯಕೀಯ ಸೇವೆ ಇನ್ನುಮೇಲೆ ಕೇವಲ ಕನಸಾಗುವಂತಿದೆ.

ಹೀಗೆ ಸಂವಿಧಾನದ IVನೇ ಅಧ್ಯಾಯ ಸೂಚಿಸಿರುವ ರಾಜ್ಯ ನೀತಿಯ ಹಾಗೂ ಮೂಲಭೂತ ಕರ್ತವ್ಯಗಳ ಪ್ರತಿಯೊಂದು ವಿಧಿಯನ್ನೂ ನಿರರ್ಥಕಗೊಳಿಸಲಾಗಿದೆ. ಸಂಜೀವ ಕೋಕ್ ತಯಾರಿಕಾ ಪ್ರಸಂಗ (೧೯೮೩)ಹಾಗೂ ತಿನ್ಸೂಖಿಯ ವಿದ್ಯುತ್ ಸರಬರಾಜು ಪ್ರಸಂಗ (೧೯೯೦)ಗಳಲ್ಲಿ ಸರಕಾರವು ಅಧಿಕಾರವನ್ನು ದುರುಪಯೋಗ ಮಾಡಿದೆ, ಅದರ ಕ್ರಿಯೆಗಳು ದುರುದ್ದೇಶಪೂರಿತವಾಗಿವೆ. ಈ ಆರೋಪವನ್ನು ದೃಢಪಡಿಸಿದರಷ್ಟೆ ತಾನು ಅದನ್ನು ಪರಿಶೀಲನೆಗೆ ತೆಗೆದುಕೊಳ್ಳಲು ಸಿದ್ಧ ಎಂದು ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರೇ ಘೋಷಿಸಿರುವುದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಸಾಮಾನ್ಯ ಪ್ರಜೆಗಳು ಇದನ್ನೆಲ್ಲ ನೋಡಿಕೊಂಡು ಸುಮ್ಮನೆ ಕೈಕಟ್ಟಿ ಕುಳಿತಿರಬೇಕೇ ? ಸರಕಾರದ ಇಂಥ ಅಪ್ರಾಮಾಣಿಕ ಹಾಗೂ ಸಂವಿಧಾನ - ವಿರೋಧಿ ಚಟುವಟಿಕೆಗಳನ್ನು ಸರ್ವೋಚ್ಚ ನ್ಯಾಯಾಲಯವೂ ಸರಿಪಡಿಸದೆ ಹೋದಾಗ ಕಪ್ಪುಕೋಟು ತೊಟ್ಟ ವಕೀಲ ಸಮುದಾಯ ಸದಸ್ಯರುಗಳಾದರೂ ಮುಂದೆ ಬಂದು ಜನರಿಗೆ ಸೂಕ್ತ ಪರಿಹಾರ ಒದಗಿಸುವಂತೆ ಮಾಡಬಾರದೇಕೆ ಎಂಬುದು ಒಂದು ದೊಡ್ಡ ಪ್ರಶ್ನೆಯಾಗಿದೆ.

ಇಡೀ ಎಡಪಕ್ಷಗಳು, ಟ್ರೇಡ್ ಯೂನಿಯನ್‌ಗಳು, ಕಿಸಾನ್ ಸಂಘಟನೆಗಳು, ಯುವಜನ ಹಾಗೂ ವಿದ್ಯಾರ್ಥಿ ಸಂಸ್ಥೆಗಳು, ಮಹಿಳಾ ಸಂಘಟನೆಗಳು ಎಲ್ಲ ಒಂದಾಗಿ, ಸರಕಾರ ಹೇಗೆ ಸಂವಿಧಾನದತ್ತ ರಾಜ್ಯನೀತಿ ಸೂತ್ರಗಳನ್ನೂ ಮೂಲಭೂತ ಕರ್ತವ್ಯಗಳನ್ನೂ ಉಲ್ಲಂಘಿಸುತ್ತಿದೆ ಎಂಬುದನ್ನು ಸಾಮಾನ್ಯ ಜನರಿಗೆ ವಿವರಿಸಿ ತಿಳಿಸಿ ಅವರನ್ನು ಕ್ರಿಯಾಶೀಲರನ್ನಾಗಿ ಮಾಡಬೇಕು. ವಿಶ್ವವ್ಯಾಪಾರೀ ಸಂಸ್ಥೆಯ ಹಾಗೂ ವಿಶ್ವ ಬ್ಯಾಂಕಿನ ಷರತ್ತುಗಳಿಗೆ ಒಪ್ಪಿಕೊಂಡು ಜಾಗತೀಕರಣವನ್ನು ಜಾರಿಗೆ ತರುತ್ತಿರುವುದರಿಂದ ದೇಶದ ಆರ್ಥಿಕತೆಗೂ ಜನರ ಬಾಳ ಪರಿಸ್ಥಿತಿಗಳಿಗೂ ಭಾರಿ ಅಪಚಾರವಾಗುತ್ತಿದೆಯೆಂದು ಕೇವಲ ಘೋಷಣೆಗಳನ್ನು ಕೂಗಿದರೆ ಸಾಲದು. ಅರಿವೆ ಗಿರಣಿಗಳು, ಸಕ್ಕರೆ ಕಾರ್ಖಾನೆಗಳು, ಪೆಟ್ರೋಲಿಯಂ ಹಾಗೂ ಪೆಟ್ರೋಲಿಯಂ ಉತ್ಪನ್ನ ಸಂಸ್ಥೆಗಳೇ ಮುಂತಾದ ದೇಶದ ಪ್ರಧಾನ ಕೈಗಾರಿಕೆಗಳ ಪತನಕ್ಕೆ ಕಾರಣವಾದ ಮತ್ತು ಅದಕ್ಕೆ ಸಂಬಂಧಪಟ್ಟ ಅಂಕಿ ಅಂಶಗಳನ್ನು ಸ್ಪಷ್ಟವಾಗಿ ಜನರ ಮುಂದಿರಿಸಿ ಅವರನ್ನು ಹೋರಾಟಕ್ಕಿಳಿಸಬೇಕು. ಸಂಪತ್ತು ಹೇಗೆ ಕೆಲವೇ ಶ್ರೀಮಂತರ ಕೈಗಳಲ್ಲಿ ಕೇಂದ್ರೀಕೃತವಾಗುತ್ತಿದೆ ಎಂಬುದನ್ನು ಅಂಕಿ - ಅಂಶಗಳೊಂದಿಗೆ ವಿವರಿಸಿ ತಿಳಿಸಬೇಕು. ಆರೋಗ್ಯ ಕ್ಷೇತ್ರದಲ್ಲಾಗುತ್ತಿರುವ ಇಂಥ ವೈಪರೀತ್ಯಗಳಿಗೆ ಹೆಚ್ಚು ಒತ್ತು ಕೊಡಬೇಕು.

ಮದ್ಯಪಾನಮುಕ್ತ ದೇಶ ನಿರ್ಮಾಣವು ರಾಷ್ಟ್ರೀಯ ವಿಮೋಚನಾ ಚಳವಳಿಯ ಒಂದು ಮುಖ್ಯ ಗುರಿಯಾಗಿದ್ದಿತು. ಹಾಗಾಗಿ ಮದ್ಯಪಾನ ಮತ್ತು ಮಾದಕ ವಸ್ತುಗಳ ನಿಷೇಧದ ಶಾಸನವನ್ನು ತಕ್ಷಣವೇ ಜಾರಿಗೆ ತರಬೇಕಾಗಿದ್ದಿತು. ಆದರೆ ಇಂದು ಆಡಳಿತದಲ್ಲಿರುವ ನಾಚಿಕೆಗೆಟ್ಟ ಭಾರತ ಸರಕಾರವು ವಿದೇಶೀ ಮಾದಕ ವಸ್ತುಗಳ ಮೇಲಿನ ಆಮದು ತೆರಿಗೆಯನ್ನು ಕಡಿತಗೊಳಿಸಿದೆ. ಇದರಿಂದಾದ ನಷ್ಟವನ್ನು ಭರ್ತಿ ಮಾಡಲು ಸಾಮಾನ್ಯ ಜನರ ಗೃಹೋಪಯೋಗಿ ವಸ್ತುಗಳ ಮೇಲಿನ ಸುಂಕವನ್ನು ಹೆಚ್ಚಿಸಿದೆ. ಸಿದ್ಧ ಉಡುಪುಗಳ ತಯಾರಿಕೆ ಇಂದು ಗೃಹಕೈಗಾರಿಕೆಯ ಸ್ವರೂಪ ಪಡೆದಿದೆ. ಇದರಲ್ಲಿ ಅನಕ್ಷರಸ್ಥ ಮಹಿಳೆಯರೇ ಹೆಚ್ಚಾಗಿ ಕೆಲಸ ಮಾಡುತ್ತಿದ್ದಾರೆ. ಪ್ರಸಕ್ತ ಸರಕಾರದ ತೆರಿಗೆ ನೀತಿಯು ಇಂತಹ ಲಕ್ಷಾಂತರ ಜನರ ಹೊಟ್ಟೆಪಾಡಿಗೇ ಧಕ್ಕೆ ತಂದಿದೆ.

ಕೈಗಾರಿಕೆಗಳ ನಿರ್ವಹಣೆಯಲ್ಲಿ ಕಾರ್ಮಿಕರೂ ಕ್ರಮೇಣ ಭಾಗವಹಿಸುವಂತೆ ಮಾಡಲು ಕ್ರಮ ಕೈಗೊಳ್ಳಬೇಕೆಂದು ಸಂವಿಧಾನದ 43A ನಿಬಂಧನೆ ಸ್ಪಷ್ಟವಾಗಿ ತಿಳಿಸುತ್ತದೆ. ಆದರೆ ಈಗ ಆಗುತ್ತಿರುವುದೇನು ? ಸಂಘಟನೆಗೊಳ್ಳುವ ಮೂಲಭೂತ ಹಕ್ಕನ್ನು ಕಾರ್ಮಿಕರಿಂದ ಕಸಿದುಕೊಳ್ಳಲಾಗುತ್ತಿದೆ. ದುರದೃಷ್ಟವಶಾತ್ ಕೆಲವು ನ್ಯಾಯಾಲಯಗಳೂ ಇದರಲ್ಲಿ ಶಾಮೀಲಾಗುತ್ತಿವೆ - ಟ್ರೇಡ್ ಯೂನಿಯನ್‌ಗಳನ್ನು ರಿಜಿಸ್ಟರ್ ಮಾಡಿಕೊಳ್ಳಕೂಡದೆಂದು ರಿಜಿಸ್ಟ್ರಾರ್‌ರಿಗೆ ಆದೇಶ ನೀಡಿವೆ. ಈಚೆಗೆ ಕರ್ನಾಟಕ ಸರಕಾರದ ಕಾರ್ಮಿಕ ಸಚಿವಾಲಯದ ಕಾರ್ಯದರ್ಶಿಯವರನ್ನು ಕಾಣುವ ಒಂದು ಸಂದರ್ಭ ನನಗೆ ಒದಗಿಬಂದಿತ್ತು. ಕೈಗಾರಿಕೆಗಳೇ ಮುಗ್ಗಟ್ಟನ್ನು ಎದುರಿಸುತ್ತಿರುವಾಗ ಕಾರ್ಮಿಕರು ಟ್ರೇಡ್ ಯೂನಿಯನ್‌ಗಳನ್ನು ರಚಿಸಿಕೊಂಡಿರುವುದೇ ಭಾರಿ ತಪ್ಪೆಂದು ಆತ ವಾದಿಸಿದರು. ಇನ್ನು ನಿರ್ವಹಣೆಯಲ್ಲಿ ಕಾರ್ಮಿಕರ ಸಹಭಾಗಿತ್ವಕ್ಕೆ ಅವಕಾಶ ಎಲ್ಲಿ ಬಂತು ? ಸಾರ್ವಜನಿಕವಲಯದ ಅಂಥ ಕೈಗಾರಿಕೆಗಳಲ್ಲಿ ಭ್ರಷ್ಟ ಅಧಿಕಾರಿಗಳಿಗೇ ಸಂಪೂರ್ಣ ಸ್ವಾತಂತ್ರ್ಯ ನೀಡಿ ಉದ್ದೇಶಪೂರ್ವಕವಾಗಿ ಆ ಕೈಗಾರಿಕೆಗಳು ನಷ್ಟ ಅನುಭವಿಸುವಂತೆ ಮಾಡಲಾಗುತ್ತಿದೆ. ಅಂಥ ಕೈಗಾರಿಕೆಗಳನ್ನು ಕೊನೆಯಲ್ಲಿ ಖಾಸಗಿ ಬಂಡವಾಳಗಾರರಿಗೆ ಮಾರಾಟ ಮಾಡುವುದು ಇದರ ಹಿಂದಿರುವ ಮೂಲೋದ್ದೇಶ.

ಇಂಥ ಎಲ್ಲ ಅನುಭವಗಳನ್ನೂ ಎಲ್ಲ ಮಟ್ಟಗಳಲ್ಲೂ ಆಯ್ದು, ಸಂಗ್ರಹಿಸಿ, ಅಭ್ಯಾಸ ಮಾಡಿ, ಅವನ್ನು ಸರ್ವೋಚ್ಚ ನ್ಯಾಯಾಲಯಕ್ಕೆ ಒಯ್ಯಬೇಕು. ಸಂವಿಧಾನ ಒದಗಿಸಿರುವ ಮೂಲಭೂತ ಹಕ್ಕುಗಳನ್ನು ರಾಷ್ಟ್ರವ್ಯಾಪಿಯಾಗಿ ಎಲ್ಲರೂ ಅರಿಯುವಂತೆ ಮಾಡಬೇಕು. ಇದು ಇಂದು ನ್ಯಾಯವಾದಿಗಳ ಮುಂದಿರುವ ಅತ್ಯಗತ್ಯ ಕಾರ್ಯಭಾರವಾಗಿದೆ. ಅವರು ಸಾಮೂಹಿಕ ಯತ್ನಗಳ ಮೂಲಕ ಸೂಕ್ತ ದತ್ತಾಂಶಗಳನ್ನೆಲ್ಲ ಸಂಗ್ರಹಿಸಿ, ಜನರ ಮಧ್ಯೆ ವಿವರಿಸಿ ತಿಳಿಸಿ ಅವರ ಜಾಗೃತಿಯನ್ನು ಹೆಚ್ಚಿಸಬೇಕು. ವಿಶ್ವ ವ್ಯಾಪಾರ ಸಂಸ್ಥೆ, ವಿಶ್ವ ಬ್ಯಾಂಕ್, ಅಂತಾರಾಷ್ಟ್ರೀಯ ಹಣಕಾಸು ನಿಧಿ ಇತ್ಯಾದಿ ವಿದೇಶೀ ಸಂಸ್ಥೆಗಳೆಲ್ಲ ಹೇಗೆ ನಮ್ಮ ಸಂವಿಧಾನದತ್ತ ಸೌಲಭ್ಯಗಳನ್ನೂ, ಹಕ್ಕುಗಳನ್ನೂ ನಿರರ್ಥಕಗೊಳಿಸುತ್ತಿವೆ ಎಂಬುದನ್ನು ತಿಳಿಯ ಹೇಳಿ ಅವುಗಳ ಕುತಂತ್ರಗಳ ವಿರುದ್ಧ ಜನರನ್ನು ಸಂಘಟಿಸಬೇಕಾದುದು ಇಂದಿನ ರಾಷ್ಟ್ರಪ್ರೇಮಿ ಪಕ್ಷಗಳ, ನಾಯಕರೆಲ್ಲರ ಆದ್ಯ ಕರ್ತವ್ಯವಾಗಿದೆ.

**ಅರವಿಂದ ಎಸ್. ಮಲೆಬೆನ್ನೂರ್**
ನ್ಯಾಯವಾದಿ, ಬಳ್ಳಾರಿ




ಧಾರವಾಡದ ಕಡಪಾ ಮೈದಾನದಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಯಶಸ್ವಿಯಾಗಿ ನಡೆಯುತ್ತಿದೆ. ಹಿರಿಯ ನ್ಯಾಯವಾದಿಗಳಾದ ಜಿ. ಎಂ. ಪಾಟೀಲ ಪ್ರದರ್ಶನ ಉದ್ಘಾಟಿಸಿದರು. ಚಿತ್ರದಲ್ಲಿ ಅನ್ವರ ಮೂಧೂಳ, ಸಿದ್ದಪ್ಪ ಹೊಸಮನಿ ಮತ್ತು ಚೆನ್ನಪ್ಪ ಮುಂತಾದವರಿದ್ದಾರೆ.

# ಮೇಲೆ ಮೇಲೆ ಹೋದಂತೆ...

■ ಹ. ಶಿ. ಭೈರನಟ್ಟಿ

''ನಿಮ್ಮನ್ನ ಸ್ವಲ್ಪ ನಗಿಸೋಣಾ ಅಂತ ಬಂದೆ ಸಾರ್'' ಎನ್ನುತ್ತ ಬಂದ ಉದಯೋನ್ಮುಖ ಕವಿ ಉದಯ.

''ಬಾರೋ ಮಾರಾಯಾ ಬಾ, ಸ್ವಲ್ಪ ಯಾಕ, ಪೂರಾ ನಗಸೂವಂತೆ ಬಾ'' ಎಂದೆ. ಬಂದು ಕೂತ್ಕೊಂಡ.

''ನಿಮ್ಮ ಮನೆಯಲ್ಲಿ ದಕ್ಷಿಣ ದಿಕ್ಕು ಯಾವುದು ಸಾರ್''? - ಎಂದು ಕೇಳಿದ.

ಸಿಡಿಲು ಹೊಡೆದ ಹಾಗಾಯಿತು. ಹೆದರಿ ಉಗುಳು ನುಂಗಿದೆ.

ವಾಸ್ತು ಪುರುಷನೇ ಅವತಾರ ತಾಳಿ ಉದಯನ ರೂಪದಲ್ಲಿ ಬಂದಿದ್ದಾನೆ ಅನ್ನಿಸಿತು. ಆವಾಗವಾಗ ನನ್ನ ಹೆಂಡತಿ ಬೇರೆ ಗೊಣಗುತ್ತಿದ್ದಳು – 'ಅಡಿಗೆ ಮನೆ ಈ ಕಡೆ ಇರಬಾರದಿತ್ತೂರಿ. ನಮ್ಮಲ್ಲಿ ಅಡಿಗೆ ಏನೇನು ಆಗಿದೆ ಅನ್ನೋದು ಪಕ್ಕದ ಮನೆಯವರಿಗೆ ತಿಳಿದುಬಿಡುತ್ತದೆ. ವಾಸ್ತು ಎಲ್ಲೋ ತಪ್ಪಾಗಿದೆ' - ಅಂತ. ಇಂಥದರಲ್ಲಿ ಈ ಉದಯ ಬೇರೆ ದಿಕ್ಕು ಕೇಳ್ತಿದ್ದಾನೆ. ನನ್ನ ಪುಣ್ಯ, ಹೆಂಡತಿ ತೌರಿಗೆ ಹೋಗಿದ್ದಾಳೆ.

''ಹೇಳಿ ಸಾರ್ ದಕ್ಷಿಣ ಯಾವ ಕಡೆ ?''

''ಮಾರಾಯ, ಪೂರ್ವ ಪಶ್ಚಿಮ ಕೇಳಿದರೆ ಸುಲಭವಾಗಿ ಹೇಳಬಹುದಿತ್ತು. ಸೂರ್ಯೋದಯ ಕಂಡು ಬಹಳ ದಿವಸಗಳಾದರೂ ಆಗಾಗ್ಗೆ ಸೂರ್ಯಾಸ್ತ ನೋಡ್ತಿರ್ತೇನೆ. ಅಂದರೆ ಪಶ್ಚಿಮ ಗೊತ್ತು. ನೀನು ಒಮ್ಮೆಲೆ ದಕ್ಷಿಣ ಕೇಳಿದರೆ ಹೇಗೆ ಹೇಳಲಿ ? ಭೂಗೋಲ ಕಲಿಸಿದ ಗುರುಗಳಿಗೇ ಗೊಂದಲ ಹಿಡಿಸುವ ಪ್ರಶ್ನೆಯಿದು.''

''ಭೂಗೋಲದ ವಿಷಯವನ್ನೇ ನಾನು ಹೇಳಲಿಕ್ಕೆ ಬಂದಿರೋದು'' ಅಂದ.

ಬಾಂಬ್ ಹಾಕಿದ ಹಾಗಾಯಿತು, ಮತ್ತಷ್ಟು ಹೆದರಿದೆ.

ಇವನೇನು ನಗಿಸಲು ಬಂದಿದ್ದಾನೋ, ಹೆದರಿಸಲು ಬಂದಿದ್ದಾನೋ ?

'ಹೋಗ್ಲಿ ಪಶ್ಚಿಮವಾದರೂ ಯಾವ ಕಡೆ ಕೈ ಮಾಡಿ ತೋರಿಸಿ'' ಎಂದ.

ನೀರಿಗೆ ಇಳಿದ ಮೇಲೆ ಕೈಕಾಲು ಆಡಿಸಲೇಬೇಕು. ಇಲ್ಲಿದ್ರೆ ಭೂಗೋಲವೇ ಗತಿ !

''ಪಶ್ಚಿಮ ಈ ಕಡೆ'' ಅಂದೆ.

ಚಟಕ್ಕನೆ ಎದ್ದು ಹಾಗಾದರೆ ಪೂರ್ವ ಈ ಕಡೆ ಎಂದು ತಾನೇ ತೋರಿಸಿ ನಿಂತು, ತೊಂಬತ್ತು ಡಿಗ್ರಿ ಬಲಕ್ಕೆ ತಿರುಗಿ ''ಇದು ದಕ್ಷಿಣ'' ಅಂದ. ''ಇರಬಹುದು'' ಎಂದೆ. ಈಗ ಉಳಿದದ್ದೇ ಉತ್ತರ. ''ಇದು ಉತ್ತರ'' ಎಂದೆ. ''ಕರೆಕ್ಟ್, ಈಗ ನಿಮಗೂ ದಿಕ್ಕುಗಳು ಗೊತ್ತಾಗಿಬಿಟ್ಟವು'' ಎಂದ. ''ಹೂಂ'' ಎಂದೆ, ಹೆಮ್ಮೆ ಪಟ್ಟು.

''ಅಂದರೆ ನಿಮ್ಮ ಅಡಿಗೆ ಮನೆ ಇರೋದು ದಕ್ಷಿಣ ದಿಕ್ಕಿಗೆ'' ಎಂ[illegible].

ಎಲ್ಲೋ 'ಢಂ' ಅಂದ ಹಾಗಾಯಿತು, ತಿರುತಿರುಗಿ, ತಿರುತಿರುಗಿ ನೋಡಿದೆ.

''ಏನು ಹುಡುಕ್ತಿದ್ದೀರಿ ಸಾರ್?''

''ಅಡಿಗೆ ಮನೆ... ಆಂ... ಏನಿಲ್ಲ...'' ಎಂದು ತಡವರಿಸಿದೆ.

''ನಿಮ್ಮ ಅಡಿಗೆ ಮನೆ ದಕ್ಷಿಣಕ್ಕಿದೆ. ದಕ್ಷಿಣಕ್ಕೇ ಇರಲಿ, ದಾಕ್ಷಿಣ್ಯಕ್ಕೊಳಗಾಗಿ ಅದನ್ನು ಬೇರೆ ಕಡೆ ಶಿಫ್ಟ್ ಮಾಡಬೇಡಿ. ಅದು ಇದ್ದಲ್ಲೇ ಇರಲಿ. ಅದನ್ನು ಹೇಳೋಣಾಂತಲೇ ಬಂದಿದ್ದೆ'' ಎಂದ.

ಇದ್ದುದನ್ನು ಇದ್ದಂತೇ ಇಡುವುದಕ್ಕೆ ಇವನೇಕೆ ಇಲ್ಲೀವರೆಗೆ ಬಂದು ಹೇಳಬೇಕು? ಅರ್ಥವಾಗಲಿಲ್ಲ.

''ದಿಕ್ಕು ಗಿಕ್ಕು ಅಂದ್ರೆ ಈಗ ಜನಾ ದಿಕ್ಕೆಟ್ಟವರಂತೆ ಹೆದಕ್ಕೊಂಡು ಬಿಡ್ತಾರೆ. ನೀವು ಹೆದಕ್ಕೊಳ್ಳಿಲ್ಲ, ಅದೇ ಸಂತೋಷ'' ಅಂದ. ನನ್ನ ಬನಿಯನ್ ತೊಯ್ದದ್ದು ಇವನಿಗೇನು ಗೊತ್ತು ?!

''ದಿಕ್ಕುಗಳೆಲ್ಲಾ ಈ ಭೂಮಿಯ ಮೇಲೆ ಮಾತ್ರ ನೋಡಿ ಸಾರ್. ನಮ್ಮ ಅನುಕೂಲಕ್ಕಾಗಿ ನಾವು ಮಾಡಿಕೊಂಡದ್ದು. ಮೇಲೆ ಮೇಲೆ ಹೋದಂತೆ... ಈ ದಿಕ್ಕುಗಳೆಲ್ಲಾ ಅರ್ಥ ಕಳೆದುಕೊಂಡುಬಿಡ್ತವೆ ಸಾರ್, ಅಲ್ಲಿ ದಿಕ್ಕುಗಳೇ ಇಲ್ಲ'' - ಎನ್ನುತ್ತಾ ಮೇಲೆ ನೋಡಿದ, ನಾನೂ ಮೇಲೆ ನೋಡಿದೆ. ಫ್ಯಾನಿನ ಪಕ್ಕದಲ್ಲೊಂದು ಜೇಡು ! ಲೆಕ್ಕ ಹಾಕಿದೆ - ಮಡದಿ ತವರಿಗೆ ಹೋಗಿ ನಾಲ್ಕು ದಿವಸಗಳ ಮೇಲಾಯ್ತು. ಈವತ್ತು ಬರೋದಿದ್ರೆ ಫೋನ್ ಮಾಡೋದಿಲ್ಲ. ಫೋನ್ ಮಾಡಿದರೆ ಈವತ್ತು ಬರೋದಿಲ್ಲ ಅಂತ ಅರ್ಥ.

''ಸಾಕು, ಕೆಳಗೆ ನೋಡಿ ಸಾರ್.''

''ಆಂ ?'' ಎನ್ನುತ್ತ ಕೆಳಗೆ ನೋಡಿದರೆ ಅವನು ಮೇಲೆ ನೋಡತೊಡಗಿದ.

''ಆ ಅನಂತ ಅಂತರಿಕ್ಷದಲ್ಲಿ ಎಲ್ಲಿಯ ದಿಕ್ಕು ಎಲ್ಲಿಯ ದಿಶೆ. ಎಲ್ಲಾ ಅನಂತಮಯ ಅ. ನ. ಂ. ತ. ಮ. ಯ....'' ಎನ್ನುತ್ತ ಎಷ್ಟೋ ಹೊತ್ತು ಮೇಲೆ ನೋಡತೊಡಗಿದ.

ಈಗ ನಾನು ಅವನನ್ನು ಕೆಳಗಿಳಿಸಬೇಕು.

''ಹೌದಪ್ಪಾ ಹೌದು, ಮೇಲೆ ಮೇಲೆ ಹೋದಂತೆ... ದಿಕ್ಕುಗಳಷ್ಟೇ ಏಕೆ ಪಾರ್ಟಿ, ಪಂಗಡಗಳೂ ಅರ್ಥ ಕಳೆದುಕೊಳ್ಳುತ್ತವೆ. ಮುಖಂಡರೆಲ್ಲಾ ಒಂದೇ, ತೊಂದರೆ ಅನುಭವಿಸೋರು ನಾವು ಜನಸಾಮಾನ್ಯರು. ಜ. ನ. ಸಾ. ಮಾ. ನ್ಯ. ರು...'' ಅಂದೆ, ಅವನು ''ಅನಂತಮಯ'' ಅಂದ ಹಾಗೆ.

ಅವನು ಭೂಮಿಗೆ ಬಂದ.

''ನಗಿಸಲು ಬಂದಿದ್ದೇನೆ ಅಂತ ಹೇಳಿದ್ದಿಯಲ್ಲ?'' ಎಂದು ನೆನಪಿಸಿದೆ.

''ಅದಕ್ಕೇ ಸಾರ್ ನಿಮ್ಮನ್ನು ತಯಾರ್ ಮಾಡ್ತಿದ್ದೇನೆ'' ಎಂದ.

ನಗಲು ತಯಾರೇ? ಹೊಸದನ್ನು ಕೇಳುತ್ತಿದ್ದೇನಲ್ಲಾ ! ಈ ಉದಯೋನ್ಮುಖರ ಮನೋಭಾವ ಆ ಸಂಪಾದಕರಿಗೇ ಗೊತ್ತು.

''ತಯಾರಾಗೇ ಕುಳಿತಿದ್ದೇನೆ. ಅದೇನ್ ಜೋಕು ಹೇಳುವವನಿ[illegible]ಯೋ ಹೇಳು'' ಅಂದೆ.

''ಜೋಕಲ್ಲ ಸಾರ್. ಸ್ವಾನುಭವ. ಮೇಲೆ ಮೇಲೆ ಹೋದಂತೆ ಈ ದಿಕ್ಕುಗಳು ಹೇಗೆ ಅರ್ಥ ಕಳೆದುಕೊಳ್ಳುತ್ತವೆಯೋ ಹಾಗೆ ಇಲ್ಲಿ ಈ ಭೂಮಿಯ ಮೇಲೆ ಸ್ವೀಕೃತಿ ಅಸ್ವೀಕೃತಿಗಳು ಅರ್ಥ ಕಳೆದುಕೊಳ್ಳುತ್ತವೆ ಸಾರ್. ನನ್ನ ಕವನಗಳನ್ನು ಸಂಪಾದಕರು ಪ್ರಕಟ ಮಾಡಿದರೂ ಅಷ್ಟೆ, ಮಾಡದಿದ್ದರೂ ಅಷ್ಟೆ'' ಅಂದ.

ಕಂಗಾಲಾದೆ. ನಗೆ ಬರುವುದಂತೂ ದೂರ. ಉದಯನ ವೈರಾಗ್ಯ ನನ್ನನ್ನು ಹಿಂಡಿ ಹಿಪ್ಪಿ ಮಾಡಿತು. ಸುಮ್ಮನೆ ಕುಳಿತೆ. ಅವನೇ ಮಾತು ಮುಂದುವರಿಸಿದ.

''ಕವಿ ಅನ್ನಿಸಿಕೋಬೇಕಂತ ಯಾರೂ ಕವನ ಬರೆಯೋದಿಲ್ಲ ಸಾರ್. ಬರೆದು ಬರೆದು ಮೇಲೆ ಮೇಲೆ ಹೋದಂತೆ... ಜನಾ ಅವನನ್ನು 'ಕವಿ' ಅಂತ ಗುರುತಿಸ್ತಾರೆ. ಒಬ್ಬ ಮನುಷ್ಯ ಕವನಗಳನ್ನು ಬರೀತಾನಾದರೂ ಯಾತಕ್ಕೆ ಸಾರ್, ಯಾತಕ್ಕೆ? ತನ್ನ ತೃಪ್ತಿಗೋಸ್ಕರ, ತನ್ನ ಸಂತೋಷಕ್ಕೋಸ್ಕರ. ತನಗೆ ಕಂಡದ್ದು ಇತರರಿಗೂ ಕಾಣಿಸಲಿ, ತಾನು ಅರ್ಥಮಾಡಿಕೊಂಡಂತೆ ಇತರರೂ ಜೀವನವನ್ನು ಅರ್ಥಮಾಡಿಕೊಳ್ಳಲಿ ಅಂತ ಏನೋ ಒಂದು ಒಳ್ಳೇ ಉದ್ದೇಶದಿಂದ. ಈ ಉದ್ದೇಶಾನ್ನೇ ಸಂಪಾದಕರು ಅರ್ಥ ಮಾಡಿಕೊಳ್ಳದೆ, ನನ್ನ ಕವನಗಳನ್ನು ಪ್ರಕಟ ಮಾಡದಿದ್ದರೆ ಬಿಟ್ಟುಕೊಳ್ಳಲಿ ನನಗೇನು ಸಾರ್ ಅದರಿಂದ ಹಾನಿ, ಲಾಭವಾದರೂ ಏನು ? ಏನೇನೂ ಇಲ್ಲ'' - ಎಂದು ಸಣ್ಣ ಹುಡುಗರಿಗೆ ತಿಳಿಸಿ ಹೇಳಿದಂತೆ ಹೇಳಿದ.

ಉದಯ ಈ 'ಅವಸ್ಥೆ' ಮುಟ್ಟಿದ್ದಾನೆಂದು, ಮುಟ್ಟುತ್ತಾನೆಂದು, ಊಹಿಸಿರಲಿಲ್ಲ. ಅವನ ಮಾತುಗಳು ಹುಬ್ಬು ಏರಿಸುವಂಥವು ! ಆದರೆ ನಾನಾದರೂ ಎಷ್ಟಂತ ಹುಬ್ಬು ಏರಿಸಲು ಸಾಧ್ಯ ?

''ಈ ನಾಸ್ತಿಕ ಮತ್ತು ಆಸ್ತಿಕ ಅಂತ ಎರಡು ಶಬ್ದ ಇವೆ ನೋಡಿ ಸಾರ್. ಇವೂ ಕೂಡ ದಿಕ್ಕುಗಳಂತೆಯೇ ಅರ್ಥ ಕಳೆದುಕೊಂಡುಬಿಡ್ತವೆ ಮೇಲೆ, ಮೇಲೆ ಹೋದಂತೆ...'' ಎಂದ.

ನನಗೆ ದಿಕ್ಕೇ ತೋಚದಾಯ್ತು.

''ಈ ಆಸ್ತಿಕರು ಮಾಡುವುದಾದರೂ ಏನು ? ದೇವರು ದೇವರು ಅಂತ ಅವನಿಗೆ ಡಿಸ್ಟರ್ಬ್ ಮಾಡ್ತಾರೆ. ಆ ವರ ಕೊಡು ಈ ವರ ಕೊಡು ಅಂತ ದೇವರಿಗೆ ತೊಂದರೆ ಕೊಡ್ತಾನೇ ಇರ್ತಾರೆ. ಆದರೆ ಅದೇ ನಾಸ್ತಿಕರು ನೋಡಿ ಎಂದಾದರೂ ಹಾಗೆ ತೊಂದರೆ ಕೊಡ್ತಾರೆಯೇ ? ನಿಜ ಹೇಳಬೇಕೆಂದರೆ ಈ ಆಸ್ತಿಕರ ಉಪಟಳ ತಾಳಲಾರದೆ ಆ ದೇವರು ನಾಸ್ತಿಕರ ಹೃದಯದಲ್ಲಿ ಅವಿತುಕೊಂಡಿರ್ತಾನೆ. ದೇವರ ನಿಜವಾದ ಭಕ್ತರೆಂದರೆ ನಾಸ್ತಿಕರೇ. ನಾಸ್ತಿಕರೇ ನಿಜವಾದ ಆಸ್ತಿಕರು'' - ಎಂದು ಘೋಷಣೆಗೈದ. ತಲೆಗೆ ಯಾರೋ ಮೊಳೆ ಹೊಡೆದಂತೆನಿಸಿತು.

ಅವನ ಘೋಷಣೆಯನ್ನು ನನ್ನ ತಲೆ ಅರಗಿಸಿ ಕೊಳ್ಳಲು ಇನ್ನೂ ದಿಕ್ಕುಗಳನ್ನು ಹುಡುಕಾಡುತ್ತಿದೆ !

ಹ. ಶಿ. ಭೈರನಟ್ಟಿ
ಭಾಗೀರಥಿ ನಿಲಯ, ವಿನಾಯಕ ನಗರ
ಧಾರವಾಡ - ೫೮೦ ೦೦೧

# ಭಿನ್ನರಾಶಿ



- ೧ -

ಕಾಲು ಮುಕ್ಕಾಲಿನ ಲೆಕ್ಕದಲ್ಲಿ
ಪಾವು ಅಚ್ಚೇರಿನ ಅಳತೆಯಲ್ಲಿ
ಚೀಲ ಡಬ್ಬದ ಪಾಲಿನಲ್ಲಿ
ತುತ್ತು ತುತ್ತಿನ ಭಾಗದಲ್ಲಿ

ಕಣ್ಣನೀರು ಯಾರ ಪಾಲು
ಯಾವ ಪಾಲು ಯಾರ ಸೇರು

ಪಾಲಿಸಿಕೊಂಡೇ ಬಂದ ಊರು
ಯಾವ ದೇಶದ ಹೋಳು
ಹೆಚ್ಚಿಸಿಕೊಂಡೇ ಬಂದ ದೇಶ
ಯಾವ ಖಂಡದ ತುಂಡು

ಭಾಗವೆಂಬುದು ಏನು
ನೀರಾದರೆ ನಾಕನೇ ಮೂರು
ನೆಲವಾದರೆ ನಾಕನೇ ಒಂದು

ಒಂದು ಗುಕ್ಕಿನ ಮೇಲೆ ಮೂರು ಗುಟುಕು ನೀರು
ಚಾಚುವ ಕೈಗಳು ಸಾವಿರ

ಮೂರು ಎರಡನೇ ಒಂದು
ಹತ್ತು ಏಳನೇ ನಾಕು
ನಾಕು ಐದನೇ ಎರಡು

ಬಗೆಹರಿಯದ ಭಿನ್ನರಾಶಿ
ಭಾಗಿಸದೇ ಉತ್ತರವಿಲ್ಲ
ಬೇಕಿರುವುದು ಇನ್ನೊಂದು ಮಗ್ಗಿ
ಯಾವುದು ಆ ಮಗ್ಗಿ

- ೨ -

ಒಂದು ಮಗ್ಗಿ ಮುರಿಯಲು ಇನ್ನೊಂದು ಮಗ್ಗಿ
ಗುಣಿಲೆ ಭಾಗಿಲೆ ಶೇಷದಲ್ಲಿ ಕೋಟಿ ಮಗ್ಗಿ

ರಾಶಿ ಭಿನ್ನವಾದವರು ಭಿನ್ನರಾಶಿ ಕಲಿಯುವಲ್ಲಿ
ಸೂತ್ರಗಳ ಸುಳಿಗೆ ಸರಾಸರಿ ಕನಸು
ಹೊಟ್ಟೆಯೊಳಗಿನ ಕೂಸೂ
ಎರಡೊಂದಲೆ ಮೂರು

ಹೊರ ಬಿದ್ದ ಮಗ್ಗಿ
ಯಾರ ಬಾಯೊಳಗಿನ ಮೆಲುಕು
ಕೂಡಿ ಕಳೆದು ಹೊಡೆದು
ಭಾಗಿಸಿದರೂ ಏಳುವ ಬಹುರೂಪಿ

ಗುಟುರಿದ ಸಿಂಹ ತೂಗದ ತುಲಾ
ಕಡಿಯುವ ಮಕರ ಮೂಸದ ಕನ್ಯಾ

ಬೇಕಲ್ಲಾ ಯಾವುದಾದರೂ ಒಂದು ರಾಶಿ
ಕನಸು ಕಾತರ
ಯಾರನ್ನು ಕೇಳುವುದು

ದೇಶ ಲ ಸಾ ಅ
ವಿಶ್ವ ಮ ಸಾ ಅ

- ೩ -

ಮಗ್ಗಿ ಪುಸ್ತಕವೇ ಬೇಡದ ದಿನ

ಯಾವ ನದಿಯಲ್ಲಿ ಮುಳುಗಿತು
ಯಾವ ಗಡಿಯಲ್ಲಿ ಕಳೆಯಿತು
ಮಾಸ್ತರರ ಕೈಯಲಿ ಹರಿಯಿತು

ದೇವರಾಣೆ ತಾಯಾಣೆ ಅವರವರ ಅಪ್ಪನಾಣೆ
ಯಾರಿಗೂ ಗೊತ್ತಿಲ್ಲವಂತೆ
ಇನ್ನು ಹದಿನಾರಾಣೆಗೆ ಯಾರನ್ನು ಹುಡುಕುವುದು

ಅವರು ಸುಪಾರಿ ಲೆಕ್ಕದಲ್ಲಿದ್ದಾರೆ
ರಾಶಿ ಫಲಕ್ಕಾಗಿ
ಪೇಪರಿನವರು ಕಾಯುತ್ತಿದ್ದಾರೆ.

ಜ. ಕಿ. ರವೀಂದ್ರಕುಮಾರ್
ಆಕಾಶವಾಣಿ, ಮೈಸೂರು - ೫೭೦ ೦೧೦

*(ಕಳೆದ ಸಂಚಿಕೆಯಿಂದ ಮುಂದುವರಿದಿದೆ)*

**ಈ** ಗ್ರಂಥದಲ್ಲಿ ಚಿದಾನಂದಮೂರ್ತಿಗಳು ಪ್ರತಿಪಾದಿಸುವ ಮತ್ತೊಂದು ವಿಚಾರವೆಂದರೆ 'ಕರ್ಮಸಿದ್ಧಾಂತವು ವಚನ ಸಂಸ್ಕೃತಿಯ ಭಾಗವೇ ಆಗಿದೆ' ಎಂಬುದಾಗಿದೆ. ಅವರ ಮಾತುಗಳು ಹೀಗಿವೆ :

*''ಹಿಂದೂ ಧರ್ಮದಂತೆ ವೀರಶೈವ ಧರ್ಮವೂ ಬಹುದೇವತಾ ವಾದವನ್ನು ಒಪ್ಪುತ್ತದೆ. ಅಂತೆಯೇ ಕರ್ಮಸಿದ್ಧಾಂತದಲ್ಲೂ ಅದಕ್ಕೆ ನಂಬಿಕೆ ಇದೆ. ವ್ಯಕ್ತಿಯು ಇಷ್ಟಲಿಂಗಧಾರಿಯಾದ ಮೇಲೆ ಅವನ ಕರ್ಮಗಳೆಲ್ಲ ನಾಶವಾಗಿ ಅವನಿಗೆ ಮರುಹುಟ್ಟು ಇಲ್ಲ ಎಂದು ವೀರಶೈವ ಧರ್ಮ ನಂಬುತ್ತದೆ. ನಿಜ. ''ಶಿವಧರ್ಮ ಕುಲೇ ಜಾತಃ, ಪುನರ್ಜನ್ಮ ವಿವರ್ಜಿತಃ'' ''ಪಂಡಿತನಾಗಲಿ ಮೂರ್ಖನಾಗಲಿ ಸಂಚಿತ ಕರ್ಮ ಉಂಡಲ್ಲದೆ ಮಾಣದು, ಪ್ರಾರಬ್ಧ ಕರ್ಮ ಭೋಗಿಸಿದಲ್ಲದೆ ಹೋಗದೆಂದು ಶ್ರುತಿ ಸಾರುತ್ತೈದಾವೆ, ನೋಡಾ'', ''ಆಸತ್ತೆ ಆಲಸಿದೆನೆಂದಡೆ ಮಾಣದು. ಬೇಸತ್ತೆ ಬೆಂಬಿದ್ದೆನೆಂದಡೆ ಮಾಣದು. ಏವೆನೇವೆನೆಂದಡೆ ಮಾಣದು. ಕಾಯದ ಕರ್ಮದ ಫಲ ಭೋಗವು...'' ಎನ್ನುತ್ತಾನೆ ಬಸವ. ಎಂದರೆ ಕರ್ಮದ ಪರಿಕಲ್ಪನೆ ಬಗ್ಗೆ ಆದಕ್ಕೆ ನಂಬಿಕೆ ಇದೆ ಎಂದೇ ಅರ್ಥ. ಇಷ್ಟಲಿಂಗವನ್ನು ಧರಿಸಿ ಬಳಿಕ ಅದನ್ನು ನಿರಾಕರಿಸಿದ ವ್ಯಕ್ತಿ ಮರುಭವಗಳಲ್ಲಿ ಜನ್ಮ ತಾಳಲೇಬೇಕಾಗುತ್ತದೆ. ವೀರಶೈವರಲ್ಲದವರಿಗೆ ಮರು ಹುಟ್ಟುಗಳು ಉಂಟು - ಅವರು ಶಿವಭಕ್ತರಾಗುವ ಜನ್ಮದ ತನಕ. 'ಭವಿ' ಎಂದರೆ ಭವ ಅಥವಾ ಮರುಹುಟ್ಟು ಉಳ್ಳವನೆಂದರ್ಥ ತಾನೇ. ಬಸವ, ಅಲ್ಲಮ ಅವರೇ ತಾವು ಬೇರೆ ಬೇರೆ ಭವಗಳಲ್ಲಿ ಬಂದವರೆಂಬುದನ್ನು ಸಾಂಕೇತಿಕವಾಗಿ ಹೇಳಿಕೊಂಡಿದ್ದಾರೆ.'' (ಪುಟ ೨೮೪)*

ವಚನ ಸಂಸ್ಕೃತಿಯ ವಿಚಾರ ಪ್ರಣಾಳಿಕೆಯ, ಅದರ ಸಾಮಾಜಿಕ ಸ್ವರೂಪದ, ಅದರ ರಾಜಕಾರಣದ ಸಾರಸತ್ವವನ್ನು ಹಿಡಿಯಲಾರದೆ ಅವರು ಕೇವಲ ಅದರ ಸಿಪ್ಪೆಯನ್ನು ಹಿಡಿದು ಜಗ್ಗಾಡುತ್ತಿದ್ದಾರೆ ಎಂಬುದು ಕರ್ಮಸಿದ್ಧಾಂತ ಮತ್ತು ವಚನ ಸಂಸ್ಕೃತಿಗಳ 'ಆಶಯ'ವನ್ನು ಬಿಟ್ಟು ಕೇವಲ ವಿಷಯವನ್ನು ಹಿಡಿದುಕೊಂಡು ಚಿಂತನೆಯನ್ನು ಬೆಳೆಸಿದಾಗ ಅವರು ರೂಪಿಸಿರುವ ತೀರ್ಮಾನಕ್ಕೆ ಬರಬೇಕಾಗುತ್ತದೆ.

ಚಿದಾನಂದಮೂರ್ತಿಗಳು ಕರ್ಮಸಿದ್ಧಾಂತವನ್ನು ಕೇವಲ ಪುನರ್ಜನ್ಮಕ್ಕೆ ಮಾತ್ರ ಮೀಸಲಿರಿಸಿಕೊಂಡಿದ್ದಾರೆ. ವಾಸ್ತವವಾಗಿ ಕರ್ಮಸಿದ್ಧಾಂತಕ್ಕೆ ಅನೇಕ ಮುಖಗಳಿವೆ. ವೈರಾಗ್ಯ, ಮಾಯೆ, ಜಗತ್ತು, ಮಿಥ್ಯೆ, ಅನಾಸಕ್ತಿಯೋಗ ಮುಂತಾದ ಸಂಗತಿಗಳೆಲ್ಲ ಕರ್ಮಸಿದ್ಧಾಂತದಲ್ಲಿ ಅಂತರ್ಗತಗೊಂಡಿವೆ.

ವಚನ ಸಂಸ್ಕೃತಿಯು ಕರ್ಮಸಿದ್ಧಾಂತವನ್ನು ಒಪ್ಪಿಕೊಂಡಿತ್ತು ಎಂದು ನಂಬಿಬಿಟ್ಟರೆ ನಾವು ಅನೇಕ ಸಮಸ್ಯೆಗಳಿಗೆ ಸಿಕ್ಕಿಹಾಕಿಕೊಂಡು ಬಿಡುತ್ತೇವೆ. ಏಕೆಂದರೆ ಅದನ್ನು ಒಪ್ಪಿಕೊಂಡರೆ, ಅದರ ಸಂತಾನಗಳಾದ 'ಹುಟ್ಟಿನಿಂದ ಜಾತಿ', 'ಹುಟ್ಟಿನಿಂದ ವರ್ಣ', 'ಹುಟ್ಟಿನಿಂದ ಶ್ರೇಷ್ಠ', 'ಹುಟ್ಟಿನಿಂದ ಕನಿಷ್ಠ' ಎಂಬ ವಿಚಾರಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ವಚನ ಸಂಸ್ಕೃತಿಯು 'ಜಾತಿ - ವರ್ಣ'ಗಳು 'ಶ್ರೇಷ್ಠ - ಕನಿಷ್ಠಗಳು' ಹುಟ್ಟಿನಿಂದ ಪ್ರಾಪ್ತವಾಗುವುದಿಲ್ಲ ಎಂಬುದನ್ನು ಸ್ಪಷ್ಟಪಡಿಸಿದೆ. ಅಂದಮೇಲೆ ವಚನ ಸಂಸ್ಕೃತಿಯು ತಾರ್ಕಿಕವಾಗಿ ಕರ್ಮಸಿದ್ಧಾಂತವನ್ನು ಒಪ್ಪಕೊಳ್ಳುವುದು ಸಾಧ್ಯವಿಲ್ಲ. ಒಂದು ವೇಳೆ ಅದರ ಪರವಾಗಿ ವಚನಕಾರರು ಅಲ್ಲಲ್ಲಿ ಹೇಳಿದ್ದರೆ ಅದು ಕೇವಲ ಅಪವಾದ - ಅಬಿರೇಷನ್.

ಈ ಕರ್ಮಸಿದ್ಧಾಂತ ಮತ್ತು ವಚನ ಸಂಸ್ಕೃತಿಗಳ ನಡುವಿನ ಸಂಬಂಧ ಕುರಿತಂತೆ ಒಂದು ವಿಚಿತ್ರವಾದ ವಾದವನ್ನು ಚಿದಾನಂದಮೂರ್ತಿಗಳು ಮಂಡಿಸಿದ್ದಾರೆ. ಅವರ ಮಾತುಗಳು ಹೀಗಿವೆ :

*''ವೀರಶೈವ ಧರ್ಮವು ಹಿಂದೂ ಧರ್ಮದಂತೆ ಕರ್ಮಸಿದ್ಧಾಂತ - ಮಾಯೆಗಳನ್ನು ನಂಬುವುದಿಲ್ಲವೆಂಬ ಸ್ವಯಂಕೃತ ಅನುಕೂಲಕರ ವಾದವು ನೋಡಲು ಆಕರ್ಷಕ: ವಿಚಾರಿಸಿದಲ್ಲಿ ತನಗೆ ತಾನೇ ಬಿದ್ದು ಹೋಗುತ್ತದೆ'' (ಪುಟ ೨೮೫).*



# ಡಾ॥ ಎಂ. ಚಿದಾನಂದಮೂರ್ತಿಗಳ ಅನರ್ಥ ವಿಚಾರ ಪ್ರಣಾಳಿಕೆ

**ಡಾ॥ ಟಿ. ಆರ್. ಚಂದ್ರಶೇಖರ**

ನಡುವಿನ ಸಂಬಂಧ ಕುರಿತಂತೆ ಅವರು ಹೇಳಿರುವ ಮೇಲಿನ ಮಾತುಗಳಿಂದ ಸ್ಪಷ್ಟವಾಗುತ್ತದೆ. ಅದರ ಪ್ರಸ್ತುತ ಅಧ್ಯಯನದ ಮುಖ್ಯ ಸಮಸ್ಯೆಯೆಂದರೆ ಅವರಿಗೆ ಇಲ್ಲಿ ವಚನ ಸಂಸ್ಕೃತಿಯ 'ವಿಷಯ' ಮುಖ್ಯವಾಗಿದೆ ವಿನಾ ವಚನ ಸಂಸ್ಕೃತಿಯ 'ಆಶಯ'ವಲ್ಲ.

ಕರ್ಮಸಿದ್ಧಾಂತವನ್ನು ಕುರಿತಂತೆ ವಚನಕಾರರು ಒಂದು ಟೀಕುವನ್ನು ಕಟ್ಟಿದ್ದಾರೆ. ಪ್ರಧಾನ ಧಾರೆಯ ವಿಚಾರ ಪ್ರಣಾಳಿಕೆಯೊಂದನ್ನು ಕುರಿತು ಟೀಕುವನ್ನು ಕಟ್ಟುವಾಗ, ಇಂತಹ ಚಳುವಳಿ ಕಟ್ಟುವ ಕಾರ್ಯದ ಆರಂಭದಲ್ಲಿ ಅನೇಕ ವೈಚಾರಿಕ ಗೊಂದಲಗಳು ಕಂಡುಬರುವುದು ಸಾಮಾನ್ಯ. ನಾವು ಯಾವುದೇ ಚಳುವಳಿ-ಹೋರಾಟ-ತಾತ್ವಿಕ ಸಂಘರ್ಷ ತೆಗೆದುಕೊಂಡರೂ ಇಂತಹ ನಿದರ್ಶನಗಳು ದೊರೆಯುತ್ತವೆ. ಆರಂಭದಲ್ಲಿ ವೈಚಾರಿಕ ಗೊಂದಲಗಳಿರುತ್ತವೆ. ಸಾವಕಾಶವಾಗಿ ಅವು ಖಚಿತತೆ ಪಡೆದುಕೊಳ್ಳುತ್ತವೆ. ಟೀಕಾಕಾರರು ತಮ್ಮ ಟೀಕೆಗಳ ಬಗ್ಗೆ ಸ್ಪಷ್ಟತೆಯನ್ನು ಪಡೆದುಕೊಳ್ಳುತ್ತಿರುತ್ತಾರೆ. ಕರ್ಮಸಿದ್ಧಾಂತದ ಬಗ್ಗೆ ವಚನಕಾರರಲ್ಲಿ ಪರವಾದ ಮತ್ತು ವಿರುದ್ಧವಾದ ವಿಚಾರಗಳಿವೆ. ಆದರೆ ಅವುಗಳ ಪ್ರಸ್ತುತತೆ - ಅಪ್ರಸ್ತುತತೆ ಬಗ್ಗೆ ಅವರು ಚಿಂತಿಸಲಿಕ್ಕೆ ಶುರುಮಾಡಿದ್ದಾರಲ್ಲ ಅದರ ಹಿಂದಿನ ಆಶಯವನ್ನು ನಾವು ಗಮನಿಸಬೇಕು. ತಾವು ಪ್ರತಿಪಾದಿಸುವ ತಮ್ಮ ಮೂಗಿನ ನೇರದ ಸತ್ಯಕ್ಕೆ ಪುರಾವೆಗಳನ್ನು ವಚನಕಾರರಿಂದ ನಮಗೆ ಅನುಕೂಲವಾಗುವಂತೆ ಆಯ್ಕೆ ಮಾಡಿಕೊಳ್ಳಬಹುದು. ಕರ್ಮಸಿದ್ಧಾಂತದ ಬಗ್ಗೆಯೂ ವಚನ ಸಂಸ್ಕೃತಿಗೆ ಸಮ್ಮತಿಯಿತ್ತು ಎಂದು ಅವರು ಹೇಳುವಾಗ ತಮಗೆ ಬೇಕಾದ ವಚನಕಾರರ ವಚನಗಳ ಉಕ್ತಿಗಳನ್ನು ಆಯ್ಕೆಮಾಡಿಕೊಂಡು ಅವರು ತಮ್ಮ ವಿಚಾರ ಮಂಡಿಸುತ್ತಿದ್ದಾರೆ. (ಮೇಲಿನ ಹೇಳಿಕೆಯಲ್ಲಿನ ಬಸವನ ವಚನಗಳ ಉಕ್ತಿಯನ್ನು ನೋಡಬಹುದು.) ಒಂದು ವಿಚಾರ ಪ್ರಣಾಳಿಕೆಯ - ಸಂಘರ್ಷವಾದಿ ಸಂಕಥನದ 'ವಿಚಾರಿಸಿದಲ್ಲಿ' ಬಿದ್ದು ಹೋಗುವುದು ಚಿದಾನಂದಮೂರ್ತಿಗಳು ಕಟ್ಟಿರುವ ಸತ್ಯವೆ ವಿನಾ ವಚನ ಸಂಸ್ಕೃತಿಯ ತಾತ್ವಿಕ ಪ್ರತಿಪಾದನೆಯಲ್ಲ. ವಚನ ಸಂಸ್ಕೃತಿಯಲ್ಲಿ ಕರ್ಮಸಿದ್ಧಾಂತವನ್ನು ಅನೇಕರು ಪ್ರಶ್ನಿಸಿದ್ದಾರೆ. ಇದಕ್ಕೆ ನಾವು ಚಿದಾನಂದಮೂರ್ತಿಗಳಂತೆ ಬಸವಣ್ಣನನ್ನು ಮಾತ್ರ ನೆಮ್ಮಿಕೊಂಡರೆ ಉಪಯೋಗವಿಲ್ಲ.

ವಚನ ಸಂಸ್ಕೃತಿಯು ಪ್ರಜ್ಞಾಪೂರ್ವಕವಾಗಿ ವೈದಿಕ ಪ್ರಣೀತ ಕರ್ಮಸಿದ್ಧಾಂತವನ್ನು ತಿರಸ್ಕರಿಸಿತು. ಇದನ್ನು ಅವರು 'ಅನುಕೂಲಕರವಾದ'ವೆಂದೂ, ಅದು ನೋಡಲು ಮಾತ್ರ 'ಆಕರ್ಷಕ'ವೆಂದೂ, 'ವಿಚಾರಿಸಿದರೆ ಅದು ತನಗೆ ತಾನೆ ಬಿದ್ದು ಹೋಗುತ್ತದೆ' ಎಂದೂ ಹೇಳುತ್ತಾರೆ. ವಚನ ಸಂಸ್ಕೃತಿಯು ಕರ್ಮಸಿದ್ಧಾಂತವನ್ನು ಪರಿಭಾವಿಸಿಕೊಂಡಿದ್ದ ಬಗೆಯನ್ನು ಕುರಿತಂತೆ ಅವರು ಮಾಡಿರುವ ವಿಶ್ಲೇಷಣೆಯು 'ಅನುಕೂಲಸಿಂಧು'ವಾಗಿದೆಯೆಂದು ಅನಿವಾರ್ಯವಾಗಿ ಹೇಳಬೇಕಾಗಿದೆ. ಕರ್ಮಸಿದ್ಧಾಂತದ ಪರವಾಗಿ ವಕೀಲಿ ಹಿಡಿಯುವುದು ಅವರಿಗೆ 'ಕಾಲ'ದ ಅವಶ್ಯಕತೆಯಾಗಿರಬಹುದು. ಆದರೆ ತಮ್ಮ 'ಕಾಲ'ದ ಅಗತ್ಯವನ್ನು ಪೂರೈಸಿಕೊಳ್ಳಲು ವಚನ ಸಾಹಿತ್ಯ - ವಚನ ಸಂಸ್ಕೃತಿಯನ್ನು ವಿಕೃತಗೊಳಿಸುವುದು ಸಲ್ಲ.

ಕರ್ಮಸಿದ್ಧಾಂತದ ಇನ್ನೊಂದು ಬಹುಮುಖ್ಯ ಮುಖವೆಂದರೆ ನಿಷ್ಕಾಮಕರ್ಮ. ಅನಾಸಕ್ತಿಯೋಗವೆಂದೆ ಅದನ್ನು ಕರೆಯಲಾಗಿದೆ. ಕರ್ಮದ ಫಲಾಫಲಗಳ ಬಗ್ಗೆ ವ್ಯಕ್ತಿ ಯೋಚಿಸಬಾರದು. ಕರ್ಮ ಮಾಡುವುದು ಮಾತ್ರ ಮನುಷ್ಯನ ಕರ್ತವ್ಯ. ಅದರ ಫಲಾಫಲಗಳ ಬಗ್ಗೆ ಯೋಚಿಸುವುದು ಮನುಷ್ಯನ ಕೆಲಸವಲ್ಲ. ಅವನ ಹಿಂದಿನ ಜನ್ಮದ ಪಾಪ ಪುಣ್ಯಗಳಿಗೆ ಅನುಗುಣವಾಗಿ ಅವನ ಕರ್ಮಕ್ಕೆ ಫಲ ಪ್ರಾಪ್ತವಾಗುತ್ತದೆ. ಇದು ಸ್ಥೂಲವಾಗಿ ಅನಾಸಕ್ತಿಯೋಗ. ವಚನ ಸಂಸ್ಕೃತಿ ಇದನ್ನು ಉಗ್ರವಾಗಿ ಖಂಡಿಸಿತು ಮತ್ತು ತಿರಸ್ಕರಿಸಿತು. ಈ ಬಗ್ಗೆ ಕೆಳಗಿನ ಬಸವನ ವಚನವನ್ನು ನೋಡಬಹುದು:

ಹೊಯ್ದಡೆ ಹೊಯ್ಯಲು ಕೈಯ ಮೇಲೆ
ಬೈದಡೆ ಬೈಗಳು ಕೈಯ ಮೇಲೆ
ಹಿಂದಿನ ಜನನವೇನಾದಡಾಗಲಿ
ಇಂದಿನ ಭೋಗವು ಕೈಯ ಮೇಲೆ
ಕೂಡಲಸಂಗಮದೇವಯ್ಯ
ನಿಮ್ಮ ಪೂಜಿಸಿದ ಫಲ ಕೈಯ ಮೇಲೆ.

ಇಲ್ಲಿ ಬಸವ 'ಹಿಂದಿನ' ಮತ್ತು 'ಇಂದಿನ' ಜನ್ಮದ ಬಗ್ಗೆ ಮಾತನಾಡುತ್ತಿದ್ದಾನೆ. ಪ್ರಾಸಕ್ಕಾಗಿಯಾದರೂ ಅವನು 'ಹಿಂದಿನ' ಆದ ಮೇಲೆ 'ಮುಂದಿನ'ದರ ಬಗ್ಗೆ ಮಾತನಾಡಬೇಕಾಗಿತ್ತು. ಅದನ್ನು ಬಿಟ್ಟು ಅವನು ಪ್ರಜ್ಞಾಪೂರ್ವಕವಾಗಿ 'ಇಂದಿನ' ಬಗ್ಗೆ ಮಾತನಾಡುತ್ತಿದ್ದಾನೆ. 'ಹಿಂದಿನ ಜನನ'ದ ಬಗ್ಗೆ ಬಸವ ಇಲ್ಲಿ ಮಾತನಾಡುತ್ತಿರುವುದರಿಂದ ಅವನು ಪುನರ್ಜನ್ಮದ ಬಗ್ಗೆ ಮಾತನಾಡುತ್ತಿದ್ದಾನೆ ಎಂದು ತಿಳಿಯುವುದು ಬಾಲಿಶತನವಾದೀತು. ಅವನಿಗೆ 'ಇಂದು', 'ಸದ್ಯ' ಮುಖ್ಯ. ಅಂದಿನ ಕರ್ಮದ ಫಲ ಅಂದೇ ಪಾವತಿಯಾಗಬೇಕು. ಇದು ಕರ್ಮಸಿದ್ಧಾಂತಕ್ಕೆ ಕೊಟ್ಟ ಕೊಡಲಿ ಪೆಟ್ಟಲ್ಲವೆ ? ಮರುಹುಟ್ಟು, ವೈರಾಗ್ಯ, ಫಲಾಪೇಕ್ಷೆ ಎಲ್ಲವನ್ನು ಒಟ್ಟಿಗೆ ಮೇಲಿನ ವಚನವು ತಿರಸ್ಕರಿಸುತ್ತಿದೆ. ಅಲ್ಲಮಪ್ರಭುವಿನ 'ಒಡಲಸಂಸ್ಕೃತಿ'ಯ ವಚನವನ್ನು ನೋಡಿ.

''ಎಣ್ಣೆ ಬೇರೆ ಬತ್ತಿ ಬೇರೆ ಎರಡೂ ಕೂಡಿ ಸೊಡರಾಗಿತ್ತು
ಪುಣ್ಯ ಬೇರೆ ಪಾಪ ಬೇರೆ ಎರಡೂ ಕೂಡಿ ಒಡಲಾಗಿತ್ತು
ಮಿಗಬಾರದು ಮಿಗದಿರಬಾರದು
ಒಡಲಿಚ್ಛೆಯ ಸವೆಸದೆ ನಿಮಿಷವಿರಬಾರದು
ಕಾಯಗುಣವಳಿದು ಮಾಯಾ ಜ್ಯೋತಿ
ವಾಯುವ ಸೇರುವ ಮುನ್ನ ಭಕ್ತಿಯ ಮಾಡಬಲ್ಲಡೆ
ಅವನೇ ದೇವ ಗುಹೇಶ್ವರಾ.''

ಕರ್ಮಸಿದ್ಧಾಂತವನ್ನು ತಾತ್ವಿಕವಾಗಿ ಅತ್ಯಂತ ಸೂಕ್ಷ್ಮವಾಗಿ ತಿರಸ್ಕರಿಸಿರುವ ವಿಚಾರ ಇಲ್ಲಿನ ವಚನದಲ್ಲಿದೆ. ಕಾಯಗುಣವಳಿದ ಮೇಲೆ ಅದು ಪಂಚಭೂತದಲ್ಲಿ ಸೇರುತ್ತದೆ ವಿನಾ ಇನ್ನೊಂದು ಜನ್ಮವೆಂಬುದು ಇಲ್ಲಿ ಇಲ್ಲ. ಆದ್ದರಿಂದ 'ಕಾಯಗುಣವಳಿದು ಮಾಯಾ ಜ್ಯೋತಿ ವಾಯುವ ಸೇರುವ ಮುನ್ನ'ದ ಅಂದರೆ ಸದ್ಯದ ಜೀವನ ಮುಖ್ಯ. ಪುಣ್ಯ-ಪಾಪ ಎಲ್ಲವೂ ಒಂದೆ.

**ಉಂಡು ಉಪವಾಸಿಗಳು – ಬಳಸಿ ಬ್ರಹ್ಮಚಾರಿಗಳು**

ಕರ್ಮಸಿದ್ಧಾಂತಕ್ಕೆ, ನಿಷ್ಕಾಮ ಕರ್ಮಕ್ಕೆ, ಪರಮಾರ್ಥಕ್ಕೆ ಭಿನ್ನವಾದ ಪದಾರ್ಥವಾದಿ ಚಿಂತನೆಯ ಇನ್ನೊಂದು ಆಯಾಮವನ್ನು ಚನ್ನಬಸವಣ್ಣನ ಕೆಳಗಿನ ವಿಶಿಷ್ಟ ವಚನದಲ್ಲಿ ಕಾಣಬಹುದು.

ಬೇಕೆನಲಾಗದು ಶರಣಂಗೆ
ಬೇಡೆನಲಾಗದು ಶರಣಂಗೆ
ಬಂದ ಸುಖವನತಿಗಳೆಯಲಾಗದು ಶರಣಂಗೆ
ಇದು ಕಾರಣ ಕೂಡಲ ಚನ್ನಸಂಗಯ್ಯನ ಶರಣರು
ಉಂಡು ಉಪವಾಸಿಗಳು ಬಳಸಿ ಬ್ರಹ್ಮಚಾರಿಗಳು.

ವೈರಾಗ್ಯದ ವಿರುದ್ಧ ಶರಣರು ಕಟ್ಟಿದ ಟೀಕು ಇಲ್ಲಿನ ವಚನದಲ್ಲಿದೆ. ಇದು ಸಮನ್ವಯ ಯೋಗ ಮಾರ್ಗವಲ್ಲ, ಇದೊಂದು ಸಂಯಮಶೀಲ ಯೋಗ ಮಾರ್ಗ.

ನಿಷ್ಕಾಮಕರ್ಮದ ಬಗ್ಗೆ ತೀವ್ರ ಸ್ವರೂಪದ ಟೀಕೆಯನ್ನು ಮಾಡಿರುವ ನುಲಿಯ ಚಂದಯ್ಯನ ಕಾಯಕ ಸಿದ್ಧಾಂತವನ್ನು ಕೆಳಗಿನ ವಚನದಲ್ಲಿ ನೋಡಬಹುದು. ಮಾಡಿದ ಕಾಯಕಕ್ಕೆ ಕೂಲಿಯ ಅಗತ್ಯವನ್ನು ಅವನು ಇಲ್ಲಿ ಹೇಳುತ್ತಿದ್ದಾನೆ. ಅವನು ಇಲ್ಲಿ ಮಂಡಿಸಿರುವ ಕೂಲಿ ಸಿದ್ಧಾಂತವು ಕರ್ಮಸಿದ್ಧಾಂತಕ್ಕೆ ಪ್ರತಿಯಾದುದಾಗಿದೆ.

ಸತ್ಯ ಶುದ್ಧ ಕಾಯಕದಿಂದ ಬಂದ ದ್ರವ್ಯದಲ್ಲಿ
ಚಿತ್ತ ವಿಚ್ಛಂದವಾಗದಿರಬೇಕು.
ನೇಮದ ಕೂಲಿಯಿಂದಿನ ನಿತ್ಯನೇಮದಲ್ಲಿ ಸಂದಿಲ್ಲದಿರಬೇಕು
ನೇಮದ ಕೂಲಿಯ ಬಿಟ್ಟು





ಹೇಮದಾಸೆಗೆ ಕಾಮಿಸಿ ದ್ರವ್ಯದ ಹಿಡಿದಡೆ
ತಾ ಮಾಡುವ ಸೇವೆ ನಷ್ಟವಯ್ಯಾ
ನಿನ್ನಾಸೆಯ ವೇಷದ ಪಾಶಕ್ಕೆ ನೀನೇ ಹೋಗು
ನನಗೆ ನನ್ನ ಜಂಗಮದ ಪ್ರಸಾದದಾಶೆ
ಚಂದೇಶ್ವರಲಿಂಗಕ್ಕೆ ಪ್ರಾಣವಯ್ಯಾ.

ಇದು ನುಲಿಯ ಚಂದಯ್ಯನ ಕೂಲಿ ಸಿದ್ಧಾಂತವನ್ನು ಪ್ರತಿಪಾದಿಸುವ ವಚನ. ನುಲಿಯ ಚಂದಯ್ಯನು 'ಕಾಯಕ' - ಅದಕ್ಕೆ ಪ್ರತಿಯಾಗಿ ದೊರಕುವ 'ದ್ರವ್ಯ' - 'ಸಂಪಾದನೆ' - 'ಸಂಭಾವನೆ' ಬಗ್ಗೆ ಮಾತನಾಡುತ್ತಿದ್ದಾನೆ. 'ಕೂಲಿ' ಎಂಬ ನುಡಿ ಇಲ್ಲಿ ತುಂಬಾ ಕುತೂಹಲಕಾರಿಯಾದುದಾಗಿದೆ. ನೇಮದ ಕೂಲಿಯ ಬಗ್ಗೆ ಹೇಳಲಾಗುತ್ತಿದೆ. ಮಾಡಿದ ಕೆಲಸಕ್ಕೆ ತಕ್ಕ ಕೂಲಿಯೇ ನೇಮದ ಕೂಲಿ. ಅದು ಹೆಚ್ಚೂ ಅಲ್ಲ; ಕಡಿಮೆಯೂ ಅಲ್ಲ. ಕೂಲಿಯ ಬಗ್ಗೆ ಅತಿಯಾಸೆ ಸಲ್ಲದು ಎಂಬುದು ಇಲ್ಲಿ ಪ್ರತಿಪಾದಿತವಾಗಿದೆ. ಕೂಲಿ ಹೆಚ್ಚೋ ಅಥವಾ ಕಡಿಮೆಯೋ ಎಂಬುದು ಬೇರೆಯದೇ ಚರ್ಚೆ. ಅದು ನಮಗೆ ಮುಖ್ಯವಲ್ಲ. ಚಂದಯ್ಯನು ಕೂಲಿಯ ಬಗ್ಗೆ ಬಹಳ ಜಾಗೃತನಾಗಿದ್ದಾನೆ. ಶರಣರದ್ದು ನಿಷ್ಕಾಮಕರ್ಮವಲ್ಲ. ಅದು ಪ್ರತಿಫಲಾಪೇಕ್ಷೆಯಿಂದ ಕೂಡಿದ ದುಡಿಮೆ. ಮುಂದಿನ ಜನ್ಮಕ್ಕೆಂದು ಕೂಡಿಡುವ, ಪುಣ್ಯವನ್ನು ಕಟ್ಟಿಡುವ ಬಗ್ಗೆ ಇಲ್ಲಿ ಪ್ರಸ್ತಾಪವಿಲ್ಲ. ವೈದಿಕತೆಯ ಕರ್ಮಸಿದ್ಧಾಂತಕ್ಕೆ ಇಲ್ಲಿ ಸರಿಯಾದ ಉತ್ತರವಿದೆ.

ವಚನ ಸಂಸ್ಕೃತಿಯ ಪ್ರಕಾರ ಜಗತ್ತು ಮಿಥ್ಯೆಯಲ್ಲ. ಅವರಿಗೆ ಬದುಕು ಮುಖ್ಯ. ಅದಕ್ಕೆ ಬಸವ ಹೇಳಿದ್ದು 'ಬದುಕ ಸವೆಸ ಬಳಸುವೆನು' ಎಂದೂ 'ಪ್ರಸಾದ ಕಾಯವ ಕೆಡಿಸಲಾಗದು' ಎಂದೂ. ಅವರಿಗೆ ವರ್ತಮಾನ ಮುಖ್ಯವಾಗಿತ್ತು. 'ಇಂದಿನದು' ಮುಖ್ಯವಾಗಿತ್ತು. ಮುಂದಿನದರ ಬಗ್ಗೆ ಅವರು ಮಾತನಾಡುವುದಿಲ್ಲ. ವಚನ ಸಂಸ್ಕೃತಿಯು ಕರ್ಮಸಿದ್ಧಾಂತಕ್ಕೆ ಪ್ರತಿಯಾಗಿ ಕಟ್ಟಿದ ಬದುಕು - ವರ್ತಮಾನ - ಕೂಲಿ ಆಧರಿಸಿದ ಕಾಯಕ ಸಿದ್ಧಾಂತವನ್ನು ಅವರು ಸರಿಯಾಗಿ ಗ್ರಹಿಸಿದಂತೆ ಕಾಣಲಿಲ್ಲ. ಈ ಕಾರಣಕ್ಕೆ ಅವರಿಗೆ ಕಾಯಕ ಸಿದ್ಧಾಂತ ಮತ್ತು ಕರ್ಮಸಿದ್ಧಾಂತಗಳು ಪರಸ್ಪರ ಸಂವಾದಿಯಂತೆ ಕಾಣುತ್ತವೆ.

**''ಲಿಂಗಭೇದ ನಿರಾಕರಣೆಯು ವೀರಶೈವ ಧರ್ಮದ ವೈಶಿಷ್ಟ್ಯವೇನೂ ಅಲ್ಲ!''**

ವಚನ ಸಂಸ್ಕೃತಿ ಕುರಿತಂತೆ ಚಿದಾನಂದಮೂರ್ತಿಗಳು ಮಂಡಿಸಿರುವ ಅತ್ಯಂತ ವಿವಾದಾತ್ಮಕ ಹಾಗೂ ಖಂಡನೀಯ ಹೇಳಿಕೆ ಇದಾಗಿದೆ. ಹಿಂದೂಶಾಹಿಯನ್ನು ವೈಭವೀಕರಿಸುವ ಉತ್ಸಾಹದಲ್ಲಿ ಅವರು ಬಾಲಿಶತನವನ್ನು ಮೆರೆದಿದ್ದಾರೆ ಎಂಬುದು ಮೇಲಿನ ಹೇಳಿಕೆಯಿಂದ (ಪುಟ ೨೮೩) ಸ್ಪಷ್ಟವಾಗುತ್ತದೆ. ಇದಕ್ಕಿಂತ ಆತಂಕಕಾರಿಯಾದದ್ದು ಅಂದರೆ, ಅವರು ರಾಮಾನುಜ ಮತ್ತು ಮಧ್ವಾಚಾರ್ಯರನ್ನು ಮಾನದಂಡ - ಒರೆಗಲ್ಲನ್ನಾಗಿ ಇಟ್ಟುಕೊಂಡು ವಚನಕಾರರ ವಚನ ಸಂಸ್ಕೃತಿಯ ಸಿದ್ಧಿ ಸಾಧನೆಗಳನ್ನು ತುಲನೆ ಮಾಡಿರುವ ಸಂಗತಿಯಾಗಿದೆ. (ನೋಡಿ ಪುಟ : ೨೮೩-೨೯೦) ವಚನ ಸಂಸ್ಕೃತಿಯು ಮಹಿಳೆಯರನ್ನು ಪರಿಭಾವಿಸಿಕೊಂಡಿರುವ ಪರಿಯನ್ನು ಕುರಿತಂತೆ ಅವರು ರೂಪಿಸಿರುವ ತಥ್ಯಗಳನ್ನು - ತಲುಪಿರುವ ತೀರ್ಮಾನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ವಚನ ಸಂಸ್ಕೃತಿಯು ಪ್ರತಿಪಾದಿಸಿರುವ ಲಿಂಗಸಂಬಂಧಗಳನ್ನು ಕುರಿತ ವಿಚಾರ ಪ್ರಣಾಳಿಕೆ ಅವರಿಗೆ ಸರಿಯಾಗಿ ದಕ್ಕಿಲ್ಲವೆಂದು ವಿಷಾದದಿಂದ ಹೇಳಬೇಕಾಗುತ್ತದೆ. ಇವರ ೪೧೫ ಪುಟಗಳ ಪ್ರಸ್ತುತ ಗ್ರಂಥದಲ್ಲಿ ಶಿವಶರಣೆಯರ ಸಿದ್ಧಿ - ಸಾಧನೆಗಳ ವಿಚಾರಗಳಿಗೆ, ಅದನ್ನು ಕುರಿತು ಚರ್ಚೆಗೆ ದೊರೆತಿರುವ ಪುಟಗಳು ಕೇವಲ ಐದು. (೮೧-೮೫). ಕೇವಲ ಐದು ಪುಟಗಳನ್ನು ಮೀಸಲಿರಿಸಿದ್ದಾರೆ ಎಂಬುದು ಮುಖ್ಯವಾಗಬೇಕಾಗಿಲ್ಲ. ಏಕೆಂದರೆ ಐವತ್ತು ಪುಟಗಳಲ್ಲಿ ಹೇಳಬಹುದಾದುದನ್ನು ಕೇವಲ ಐದು ಪುಟಗಳಲ್ಲಿ ಪರಿಣಾಮಕಾರಿಯಾಗಿ ಹೇಳುವುದು ಸಾಧ್ಯ. ಆದ್ದರಿಂದ ಇಲ್ಲಿ ಅವರು ಏನು ಹೇಳಿದ್ದಾರೆ ಎಂಬುದು ಮುಖ್ಯವಾಗುತ್ತದೆ.

ಮೊದಲನೆಯದಾಗಿ 'ಲಿಂಗಭೇದ ನಿರಾಕರಣೆಯು ವೀರಶೈವದ ವೈಶಿಷ್ಟ್ಯವೇನೂ ಅಲ್ಲ'ವೆಂದು ಹೇಳಿ ಅವರು ಶಿವಶರಣೆಯರಿಗೆ ಅಪಮಾನ ಮಾಡುತ್ತಿದ್ದಾರೆ. ಇಪ್ಪತ್ತೊಂದನೆಯ ಶತಮಾನದ ವಿದ್ವಾಂಸರು - ಸ್ತ್ರೀವಾದಿಗಳು ಬೆಕ್ಕಸ ಬೆರಗಾಗುವಂತಹ ರೀತಿಯಲ್ಲಿ 'ಸ್ತ್ರೀವಾದಿ ವಿಚಾರ ಪ್ರಣಾಳಿಕೆ' ಕಟ್ಟಿರುವ, ಲಿಂಗಸಂಬಂಧಗಳನ್ನು ರಾಜಕೀಯವಾಗಿ ಹಿಡಿದಿಡಲು ಪ್ರಯತ್ನಿಸಿರುವ, ಶಿವಶರಣೆಯರ ಸಿದ್ಧಿ-ಸಾಧನೆಗಳನ್ನು ಕುರಿತಂತೆ 'ಲಿಂಗಭೇದ ನಿರಾಕರಣೆಯು ವೀರಶೈವದ ವೈಶಿಷ್ಟ್ಯವೇನೂ ಅಲ್ಲ'ವೆಂದು ಹೇಳಿದರೆ ಅವರಿಗೆ ಅಪಮಾನ ಮಾಡಿದಂತಲ್ಲದೆ ಮತ್ತೇನು ?

ಲಿಂಗ ಸಂಬಂಧಗಳನ್ನು ಚಿದಾನಂದಮೂರ್ತಿಗಳು ಕೇವಲ ಲಿಂಗಭೇದ ನಿರಾಕರಣೆಗೆ, ಲಿಂಗ ಸಮಾನತೆಗೆ ಸೀಮಿತಗೊಳಿಸಿದ್ದಾರೆ. ಶಿವಶರಣೆಯರು ತಮ್ಮ ನೆಲೆಯಲ್ಲಿ ಲಿಂಗಸಂಬಂಧಿ ವಿಚಾರ ಪ್ರಣಾಳಿಕೆಯೊಂದನ್ನು ಕಟ್ಟಿದ್ದಾರೆ ಎಂಬುದು ಅವರಿಗೆ ತಿಳಿದಿಲ್ಲ. ವಚನ ಸಂಸ್ಕೃತಿಯಲ್ಲಿ ಮಹಿಳೆಯರ ಬಗ್ಗೆ ಏನು ಹೇಳಲಾಗಿದೆ ಎಂದರೆ ಇವರ ಪ್ರಕಾರ ಕೇವಲ ಅದು ಲಿಂಗಭೇದವನ್ನು ನಿರಾಕರಿಸಿದೆ ಅಥವಾ ಲಿಂಗಸಮಾನತೆಯನ್ನು ಪ್ರತಿಪಾದಿಸಿದೆ ಎಂಬುದಾಗಿದೆ. ಶಿವಶರಣೆಯರ ಲಿಂಗಸಂಬಂಧಿ ವಿಚಾರಗಳು ಲಿಂಗ ಸಮಾನತೆಯನ್ನು ಮೀರಿ ಅನೇಕ ಸೂಕ್ಷ್ಮ ಸಂಗತಿಗಳ ಬಗ್ಗೆ ಬೆಳಕು ಚೆಲ್ಲುತ್ತವೆ. ಲಿಂಗ ಸಂಬಂಧಗಳನ್ನು ಜೈವಿಕ ನಿಯತಿಯ ಚೌಕಟ್ಟಿನಿಂದ ಸಾಮಾಜಿಕ ಸಂಕಥನದ ಚೌಕಟ್ಟಿಗೆ ತಂದ ಕೀರ್ತಿ ಶಿವಶರಣೆಯರಿಗೆ ಸಲ್ಲಬೇಕು.

ಚಿದಾನಂದಮೂರ್ತಿಗಳಿಗೆ ಗೊತ್ತಿಲ್ಲ, ಕೇವಲ ಕರ್ನಾಟಕಕ್ಕೆ - ಭಾರತಕ್ಕೆ ಮಾತ್ರವಲ್ಲ, ಇಡೀ ವಿಶ್ವದಲ್ಲೇ ೧೨ನೆಯ ಶತಮಾನಕ್ಕೆ ಮೊದಲು ಇಂತಹ ಬಗೆಯಲ್ಲಿ ಲಿಂಗಸಂಬಂಧಗಳನ್ನು ಪರಿಭಾವಿಸಿಕೊಂಡಿರುವುದಕ್ಕೆ ನಮಗೆ ನಿದರ್ಶನಗಳು ದೊರೆಯುವುದಿಲ್ಲ. 'ಲಿಂಗಭೇದ ನಿರಾಕರಣೆ ವೀರಶೈವದ ವೈಶಿಷ್ಟ್ಯವೇನೂ ಅಲ್ಲ'ವೆನ್ನುವ ಚಿದಾನಂದಮೂರ್ತಿಗಳಿಗೆ ಹೇಳಬೇಕಾಗಿದೆ – ಅದು ಇಡೀ ವಿಶ್ವಕ್ಕೆ ವಿಶಿಷ್ಟವಾದುದಾಗಿದೆ. ಇಡೀ ವಿಶ್ವದಲ್ಲಿ ಮೊದಲ ಬಾರಿಗೆ ಲಿಂಗಸಂಬಂಧಿ ವಿಚಾರ ಪ್ರಣಾಳಿಕೆಯನ್ನು ಉದ್ಘೋಷಿಸಿದ ಕೀರ್ತಿ ವಚನ ಸಂಸ್ಕೃತಿಗೆ – ವಚನಕಾರ್ತಿಯರಿಗೆ ಸಲ್ಲಬೇಕು. ಒಂದು ವೇಳೆ ಲಿಂಗಭೇದ ನಿರಾಕರಣೆಯು ವೀರಶೈವರ ವೈಶಿಷ್ಟ್ಯವೇನೂ ಅಲ್ಲವೆಂದು ಹೇಳಿದರೆ, ಅವರಿಗೆ ಲಿಂಗಸಂಬಂಧಗಳನ್ನು ಕುರಿತಂತೆ ಸೈದ್ಧಾಂತಿಕ ಅರಿವಿಲ್ಲವೆಂದೂ, ಅದಕ್ಕೆ ಸಂಬಂಧಿಸಿದ ಚರಿತ್ರೆ ಗೊತ್ತಿಲ್ಲವೆಂದೂ ಸ್ಪಷ್ಟವಾಗಿ ಹೇಳಬಹುದು. ಇದು ಅತ್ಯಂತ ಧಾರ್ಷ್ಟ್ಯದ ಮಾತಾದರೂ ಸಹ ಹೇಳಲೇಬೇಕಾಗಿದೆ.

ಲಿಂಗಭೇದವೆನ್ನುವುದು ಕಟ್ಟಿಕೊಂಡ ಸಾಮಾಜಿಕ ಸಂಗತಿಯೇ ವಿನಾ ಹುಟ್ಟಿನಿಂದಲೇ ಪ್ರಾಪ್ತವಾದ ಜೈವಿಕ ನಿಯತಿಯಲ್ಲವೆನ್ನುವ ಕ್ರಾಂತಿಕಾರಿ ವಿಚಾರವನ್ನು ಪ್ರಥಮ ಬಾರಿಗೆ ಪ್ರತಿಪಾದಿಸಿದವರು ಶಿವಶರಣೆಯರಾಗಿದ್ದಾರೆ. ಶಿವಶರಣೆಯರ ಇಂತಹ ವಿಚಾರದ ಪ್ರತಿಪಾದನೆಗೂ ಇಡೀ ವಚನ ಸಂಸ್ಕೃತಿಯು ಪ್ರತಿಪಾದಿಸಿದ ವಿಚಾರ ಪ್ರಣಾಳಿಕೆಗೂ ಸಂಬಂಧವಿದೆ. ಹುಟ್ಟಿನಿಂದ ಪ್ರಾಪ್ತವಾಗುವ ಎಲ್ಲ ಸಂಗತಿಗಳನ್ನು ವಚನ ಸಂಸ್ಕೃತಿ ತಿರಸ್ಕರಿಸಿತು. ಆ ಹಿನ್ನೆಲೆಯಲ್ಲಿ ಅದು ಲಿಂಗಭೇದಗಳನ್ನು ತಿರಸ್ಕರಿಸಲೇಬೇಕಾಗಿತ್ತು.

ಆಯ್ದಕ್ಕಿ ಲಕ್ಕಮ್ಮನ ಕೆಳಗಿನ ವಚನವು ಲಿಂಗಸಂಬಂಧವನ್ನು ಸಾಮಾಜಿಕ ನೆಲೆಯಲ್ಲಿ ಪ್ರತಿಪಾದಿಸುತ್ತಿದೆ.

ಆವ ಬೀಜ ಬೀಳುವಲ್ಲಿ ಮೊಳೆಮುಖ ಹಿಂಚು ಮುಂಚುಂಟೆ ?
ನೀ ಮರೆದಲ್ಲಿ ನಾನರಿದಲ್ಲಿ ಬೇರೊಂದೊಡಲುಂಟೆ ?
ಮೂಲ ನಷ್ಟವಾದಲ್ಲಿ ಅಂಕುರ ನಿಂದಿತ್ತು
ಕೂಟಕ್ಕೆ ಸತಿ ಪತಿ ಎಂಬ ನಾಮವಲ್ಲದೆ
ಅರಿವಿಂಗೆ ಬೇರೊಂದೊಡಲುಂಟೆ ?
ಬೇರೊಂದಡಿಯಿಡದಿರು
ಮಾರಯ್ಯ ಪ್ರಿಯ ಅಮರೇಶ್ವರ ಲಿಂಗನರಿಯ ಬಲ್ಲಡೆ.

ಈ ಬಗೆಯು ಚಿದಾನಂದಮೂರ್ತಿಗಳಿಗೆ ತಿಳಿಯುವುದಿಲ್ಲ. ತಿಳಿದರೂ ಅರ್ಥವಾಗುವುದಿಲ್ಲ. ಅರ್ಥವಾದರೂ ಮುಖ್ಯವಾಗುವುದಿಲ್ಲ. ಮುಖ್ಯವೆಂದು ಅನ್ನಿಸಿದರೂ ನಾವು ಪ್ರತಿಪಾದಿಸುತ್ತಿರುವ ವಿಚಾರ ಪ್ರಣಾಳಿಕೆಗೆ ಇದು ಅಪ್ರಸ್ತುತವಾಗಿ ಬಿಡಬಹುದು. ಲಿಂಗಸಂಬಂಧಗಳನ್ನು ಸಾಮಾಜಿಕ ನೆಲೆಯಲ್ಲಿ (ವಚನದ ನಾಲ್ಕನೆಯ ಸಾಲು) ಪರಿಭಾವಿಸಿಕೊಳ್ಳುವುದರ ಮೂಲಕ ವೈದಿಕ ಸಂಸ್ಕೃತಿಯ ಜೈವಿಕ ನಿಯತಿಯನ್ನು ಶಿವಶರಣೆಯರು ಭಾರತದ ಸಂದರ್ಭದಲ್ಲಿ ಪ್ರಥಮಬಾರಿಗೆ ತಿರಸ್ಕರಿಸಿದ್ದಾರೆ.

ಇದೇ ವಿಚಾರವನ್ನು ಬೇರೊಂದು ನೆಲೆಯಿಂದ ಹಿಡಿದಿಡಲು ಪ್ರಯತ್ನಿಸಿರುವ ಸತ್ಯಕ್ಕನ ವಚನ ಅತ್ಯಂತ ಕುತೂಹಲಕಾರಿಯಾದುದಾಗಿದೆ.

ಮೊಲೆ ಮುಡಿ ಇದ್ದುದೆ ಹೆಣ್ಣೆಂದು ಪ್ರಮಾಣಿಸಲಿಲ್ಲ
ಕಾಸೆ ಮೀಸೆ ಕಠಾರವಿದ್ದುದೆ ಗಂಡೆಂದು ಪ್ರಮಾಣಿಸಲಿಲ್ಲ
ಅದು ಜಗದ ಹಾಹೆ ಬಲ್ಲವರ ನೀತಿಯಲ್ಲ
ಏತರ ಹಣ್ಣಾದರೂ ಮಧುರವೇ ಕಾರಣ
ಅಂದವಿಲ್ಲದ ಕುಸುಮಕ್ಕೆ ವಾಸನೆಯೇ ಕಾರಣ
ಇದರಂದವ ನೀನೆ ಬಲ್ಲೆ ಶಂಭುಜಕ್ಕೇಶ್ವರ.

ಲಿಂಗ ಸಂಬಂಧಗಳು ಮೂಲತಃ ಸಾಮಾಜಿಕವಾದವುಗಳು. ಲಿಂಗಭೇದವೆಂಬುದು

ಜಗತ್ತು ಕಟ್ಟಿಕೊಂಡ ಒಂದು ರೂಪಕ. ಅದೇ ನಿಜವಲ್ಲ.

ಹನ್ನೆರಡನೆಯ ಶತಮಾನಕ್ಕಷ್ಟೇ ಅಲ್ಲ, ಕೇವಲ ವೀರಶೈವಕ್ಕಷ್ಟೇ ಅಲ್ಲ, ಇಡೀ ವಿಶ್ವಕ್ಕೆ ವಿಶಿಷ್ಟವಾದ ಸ್ತ್ರೀವಾದಿ ಪತಾಕೆಯನ್ನು ನೀಡಿದ ಕದಿರ ರೆಮ್ಮವ್ವೆಯ ವಚನವನ್ನು ಚಿದಾನಂದಮೂರ್ತಿಯವರು ಅಗತ್ಯ ಗಮನಿಸಬೇಕು.

*ಎಲ್ಲರ ಹೆಂಡಿರು ತೊಳಸಿಕ್ಕುವರು*
*ಎನ್ನ ಗಂಡಂಗೆ ತೊಳಸುವುದಿಲ್ಲ*
*ಎಲ್ಲರ ಗಂಡಂದಿರಿಗೆ ಬಸಿವರು*
*ಎನ್ನ ಗಂಡಂಗೆ ಬಸಿವುದಿಲ್ಲ*
*ಎಲ್ಲ ಗಂಡಂದಿರಿಗೆ ಬೀಜವುಂಟು*
*ಎನ್ನ ಗಂಡಂಗೆ ಅಂಡದ ಬೀಜವಿಲ್ಲ*
*ಎಲ್ಲರ ಗಂಡಂದಿರು ಮೇಲೆ*
*ಎನ್ನ ಗಂಡ ಕೆಳಗೆ, ನಾ ಮೇಲೆ*
*ಕದಿರ ರೆಮ್ಮಯೊಡೆಯ ಗುಮ್ಮೇಶ್ವರ.*

ವೈದಿಕ ಸಂಸ್ಕೃತಿ ಪ್ರತಿಪಾದಿಸಿಕೊಂಡು ಬಂದಿದ್ದ ಲಿಂಗ ಸಂಬಂಧಗಳ ಬಗೆಯನ್ನು ಧಿಕ್ಕರಿಸುವ ಪರಿ ಇಲ್ಲಿದೆ. ಲಿಂಗಭೇದಕ್ಕೆ, ಲಿಂಗ ಸಂಬಂಧಿ ಏಣಿ ಶ್ರೇಣಿಗಳಿಗೆ ಕಾರಣವಾಗಿರುವ ಸಂತಾನೋತ್ಪತ್ತಿ ಹೊಣೆಯನ್ನೇ ರೆಮ್ಮವ್ವೆ ಇಲ್ಲಿ ಧಿಕ್ಕರಿಸುತ್ತಿದ್ದಾಳೆ. ಏಕೆಂದರೆ ಅವಳ ಗಂಡನಿಗೆ ಅಂಡದ 'ಬೀಜವಿಲ್ಲ'. ಲಿಂಗಸಂಬಂಧಿ ಪರಿಭಾಷೆಯಿಂದ ನಿಬಿಡವಾದ ವಚನ ಇದಾಗಿದೆ. ಹೆಣ್ಣು - ಗಂಡುಗಳ ನಡುವಿನ ಸಂಬಂಧವನ್ನು ತಿರುಗು ಮುರುಗು ಮಾಡುವ ಹುನ್ನಾರ ಇಲ್ಲಿದೆ. ಹನ್ನೆರಡನೆಯ ಶತಮಾನದ ಕರ್ನಾಟಕದ ವಚನ ಸಂಸ್ಕೃತಿಯನ್ನು ಬಿಟ್ಟು ಭಾರತದಲ್ಲಿ ಇದಕ್ಕೆ ಸರಿ ದೊರೆಯಾದ ವಿಚಾರ ಮಂಡನೆಯಾಗಿರುವ ನಿದರ್ಶನ ನಮಗೆ ದೊರೆಯುವುದಿಲ್ಲ. ವಚನ ಸಂಸ್ಕೃತಿಯು ಪ್ರತಿಪಾದಿಸಿದ ಲಿಂಗಸಂಬಂಧಿ ವಿಚಾರ ಪ್ರಣಾಳಿಕೆಯನ್ನು ಗ್ರಹಿಸಲಾರದಂತಹವರು ಮಾತ್ರ ಅದು ವೀರಶೈವದ ವೈಶಿಷ್ಟ್ಯವೇನೂ ಅಲ್ಲವೆಂದು ಹೇಳಬಲ್ಲರು.

ಶಿವಶರಣೆಯರನ್ನು ಕುರಿತಂತೆ ಹಾಗೂ ಅವರ ವಚನಗಳನ್ನು ಕುರಿತಂತೆ ಚಿದಾನಂದ ಮೂರ್ತಿಗಳ ಗ್ರಹಿಕೆಯು ಸರಳವಾಗಿದೆ ಮತ್ತು ಮುಗ್ಧವಾದುದಾಗಿದೆ. 'ವಚನ ಸಾಹಿತ್ಯ' ಎಂಬ ಒಂದು ಕೃತಿಯಲ್ಲಿ (೧೯೭೫ : ಪುಟಗಳು ೧೩೩-೧೫೪) ಅವರು ಶಿವಶರಣೆಯರ ಗ್ರೇಡಿಂಗ್ ಮಾಡುತ್ತಾರೆ.

*''ವಚನಕಾರ್ತಿಯರಲ್ಲಿ ಶ್ರೇಷ್ಠ ಅಕ್ಕಮಹಾದೇವಿ*
*ನಂತರ ಎರಡನೆಯ ಸ್ಥಾನದಲ್ಲಿ ಮುಕ್ತಾಯಕ್ಕ ಬರುತ್ತಾಳೆ.''*

*ವಚನಕಾರ್ತಿಯರ ಬಗ್ಗೆ ಅವರ ಕೆಲವು ಅಭಿಪ್ರಾಯಗಳು:*
*''ಅಭಿವ್ಯಕ್ತಿಯಲ್ಲಿ ತಮ್ಮತನವನ್ನು ತೋರಿರುವ ವಚನ*
*ಕಾರ್ತಿಯರ ಸಂಖ್ಯೆ ಬಹಳವಿಲ್ಲ.''*
*''ಮಹಾದೇವಮ್ಮನಿಗೆ ಅಭಿವ್ಯಕ್ತಿಯ ಸುಭಗತೆ ಸಾಲದು.''*
*''ಬೊಂತಾದೇವಿಯ ವಚನಗಳು ಸಾಮಾನ್ಯವಾಗಿವೆ''.*

ಪ್ರಸ್ತುತ ಗ್ರಂಥದಲ್ಲಿ ಶಿವಶರಣೆಯರ ಬಗ್ಗೆ ಒಂದು ಮಾತು ಹೀಗಿದೆ:

*''ಎದ್ದು ಕಾಣುವ ಸಂಗತಿಯೆಂದರೆ ಅವರಲ್ಲಿ*
*(ವಚನ ಕಾರ್ತಿಯರಲ್ಲಿ)*
*ಬ್ರಾಹ್ಮಣ ವರ್ಗದ ಟೀಕೆ ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆಯಾಗಿರುವುದು'' (ಪುಟ ೮೨).*

ಬೊಂತಾದೇವಿಯ ವಚನಗಳು ಸಾಮಾನ್ಯವಾಗಿವೆಯೆಂದು ಹೇಳುವ ಚಿದಾನಂದಮೂರ್ತಿಗಳು ಕೆಳಗಿನ ಆಕೆಯ ವಚನ ವನ್ನು ಮತ್ತೊಮ್ಮೆ ನೋಡುವುದು ಒಳ್ಳೆಯದು.

*''ಊರ ಒಳಗಣ ಬಯಲು, ಊರ ಹೊರಗಣ*
*ಬಯಲೆಂದುಂಟೆ ?*
*ಊರೊಳಗೆ ಬ್ರಾಹ್ಮಣ ಬಯಲು, ಊರ ಹೊರಗೆ*
*ಹೊಲೆ ಬಯಲೆಂದುಂಟೆ ?*
*ಎಲ್ಲ ನೋಡಿದಡೆ ಬಯಲೊಂದೆ*
*ಭಿತ್ತಿಯಿಂದ ಒಳಹೊರಗೆಂಬ ನಾಮ ವೈಸೆ*
*ಎಲ್ಲ ನೋಡಿದಡೆ ಕರೆದಡೆ ಓ ಎಂಬಾತನೆ ಬಿಡಾಡಿ.''*

ಈ ಬಗೆಯ ಸಮಾನತೆ ಕುರಿತ ಸಾಮಾಜಿಕ ಸಿದ್ಧಾಂತವನ್ನು ಹನ್ನೆರಡನೆಯ ಶತಮಾನಕ್ಕೆ ಮೊದಲು ಯಾವ ಮಹಿಳೆಯರು ಪ್ರತಿಪಾದಿಸಿದ್ದರು ? ಇದು ಚಿದಾನಂದ ಮೂರ್ತಿಗಳಿಗೆ 'ಸಾಮಾನ್ಯ' ವಚನವಾಗಿದೆ. ಬೊಂತಾದೇವಿಯ ವಚನಗಳು 'ಸಾಮಾನ್ಯ' ಎಂದು ಪ್ರಮಾಣಪತ್ರ ನೀಡುವ ಚಿದಾನಂದಮೂರ್ತಿಗಳು ''ಬೊಂತಾದೇವಿಗೆ ನಾಲ್ಕು ವೇದ ಹದಿನಾರು ಶಾಸ್ತ್ರ ಹದಿನೆಂಟು ಪುರಾಣ ಇಪ್ಪತ್ತೆಂಟು ಆಗಮಗಳ ವಿಷಯ ತಿಳಿದಿದೆ'' (ಪುಟ ೮೨) ಎಂಬುದು ಬಹುದೊಡ್ಡ ಸಂಗತಿಯಾಗಿಬಿಟ್ಟಿದೆ.

ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯ ಬಗ್ಗೆ ಚಿದಾನಂದಮೂರ್ತಿಗಳು ಒಂದು ವಿಚಾರವನ್ನು ಅನೇಕ ಸಂದರ್ಭದಲ್ಲಿ ಪುನರುಚ್ಚರಿಸಿದ್ದಾರೆ. ಪ್ರಸ್ತುತ ಗ್ರಂಥದಲ್ಲಿ ಅವಳ ಬಗ್ಗೆ ಅವರು ಹೀಗೆ ಬರೆಯುತ್ತಾರೆ.

*'ದಲಿತವರ್ಗದ ಉರಿಲಿಂಗ ಪೆದ್ದಿ ಶ್ರೇಷ್ಠ ಸಂಸ್ಕೃತ*
*ವಿದ್ವಾಂಸನಾಗಿದ್ದರೆ, ಅವನ ಹೆಂಡತಿಗೂ ಸಂಸ್ಕೃತದಲ್ಲಿ*
*ಪ್ರವೇಶವಿತ್ತು'' (ಪುಟ ೮೨).*
*''ದಲಿತ ಉರಿಲಿಂಗ ಪೆದ್ದಿಯ ಹೆಂಡತಿ ಕಾಳವ್ವೆಯೂ*
*ಸಂಸ್ಕೃತವನ್ನು ಚೆನ್ನಾಗಿ ಬಲ್ಲವಳಾಗಿದ್ದಳು.''*
*(ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ, ಪು. ೩೨)*

ಕಾಳವ್ವೆಯ ಬಗ್ಗೆ ಇಷ್ಟು ಹೇಳುವ ಅವರು, ಅವಳ ಸಂಸ್ಕೃತ ಜ್ಞಾನದ ಬಗ್ಗೆ ಹೆಮ್ಮೆಯಿಂದ ಮಾತನಾಡುವ ಇವರು ಅವಳ ಕೆಳಗಿನ ವಚನದಲ್ಲಿನ ವಿಚಾರದ ಬಗ್ಗೆ ಚಕಾರವೆತ್ತುವುದಿಲ್ಲ.

*''ಕುರುಕೋಳೀ ಕಿರುಮೀನು ತಿಂಬರಿಗೆಲ್ಲ ಕುಲಜ ಕುಲಜರೆಂದೆಂಬರು*
*ಶಿವಗೆ ಪಂಚಾಮೃತವ ಕರೆವ ಪಶುವತಿಂಬ ಮಾದಿಗ ಕೀಳುಜಾತಿಯೆಂಬರು*
*ಅವರೆಂದು ಕೀಳು ಜಾತಿಯಾದರು ? ಜಾತಿಗಳು ನೀವೇಕೆ ಕೀಳಾಗಿರೊ ?*
*ಬ್ರಾಹ್ಮಣನುಂಡುಂದು ಪುಲ್ಲಿಗೆ ಶೊಂಭಿತಲಾಗಿ ನಾಯಿನೆಕ್ಕಿ ಹೋಯಿತು*
*ಮಾದಿಗರುಂಡುದು ಪುಲ್ಲಿಗಿ ಬ್ರಾಹ್ಮಣಗೆ ಶೋಭಿತವಾಯಿತು*
*ಅದೆಂತೆಂದಡೆ ಸಿದ್ದಲಿಕೆಯಾಯಿತು ಸಗ್ಗಳೆಯಾಯಿತು*
*ಸಿದ್ದಲಿಕೆಯ ತುಪ್ಪವನು ಸಗ್ಗಳೆಯ ನೀರನು*
*ಶುದ್ಧವೆಂದು ಕುಡಿದ ಬುದ್ಧಿಗೇಡಿ ವಿಪ್ರರಿಗೆ ನಾಯಿ ನರಕದಪ್ಪದಯ್ಯಾ*
*ಉರಿಲಿಂಗ ಪೆದ್ದಿಗಳರಸ ಒಲ್ಲೆನವ್ವಾ.''*

ಇದೊಂದು ಅರ್ಥಗರ್ಭಿತ, ಸಮಕಾಲೀನ ಮಹತ್ವವುಳ್ಳ ಮತ್ತು ಅನೇಕ ದೃಷ್ಟಿಯಿಂದ ಕುತೂಹಲಕಾರಿಯಾದ ವಚನವಾಗಿದೆ. ಈ ವಚನವನ್ನು ಚಿದಾನಂದ ಮೂರ್ತಿ ಅವರು ಮೆಚ್ಚಲಿಕ್ಕೆ ಸಾಧ್ಯವಿಲ್ಲ. ಏಕೆಂದರೆ ಈ ವಚನದಲ್ಲಿ ಮಂಡಿತವಾಗಿರುವ ಸಂಗತಿಗಳ ವಿರುದ್ಧವೇ ಅವರು ಚಳುವಳಿ ನಡೆಸಿದ್ದಾರೆ. ತಮಗೆ ಬೇಕಾದುದನ್ನು ಆಯ್ಕೆ ಮಾಡಿಕೊಂಡು ತಮಗೆ ವಿರುದ್ಧವೆಂದು ಕಂಡುಬಂದುದನ್ನು ಹತ್ತಿಕ್ಕಿ ಅವರು ತಮ್ಮ ವಿಚಾರ ಪ್ರಣಾಳಿಕೆಯನ್ನು ಕಟ್ಟುತ್ತಿದ್ದಾರೆ. ಜನರ ಆಹಾರ ಅಭ್ಯಾಸದ ಸಾಮಾಜಿಕ - ಆರ್ಥಿಕ ಸಂಗತಿಗಳನ್ನು ಗಮನಿಸದೆ ತಮ್ಮ ಪಾವಿತ್ರ್ಯದ ಬಗ್ಗೆ ಕಾಳಜಿ ವಹಿಸುವ ಜನರು ಮಾತ್ರ ಜೀವವಿರೋಧಿ ನಿಲುವು ತಳೆಯಬಲ್ಲರು. ಕಾಳವ್ವೆಯನ್ನು ಮೆಚ್ಚಲು ಅವರಿಗೆ ಇರುವ ಕಾರಣ ಅವಳು ದಲಿತ ಮಹಿಳೆ ಎಂಬುದಲ್ಲ, ಅವಳಿಗೆ ಸಂಸ್ಕೃತ ಗೊತ್ತಿದೆ ಎಂಬುದು ಅವರಿಗೆ ಮುಖ್ಯವಾಗಿದೆ. ಆದ್ದರಿಂದ ಅವಳ ಬಗ್ಗೆ ಬರೆಯುತ್ತಾರೆ. ಆದರೆ ಅವಳ ವಿಚಾರದ ಬಗ್ಗೆ ಅವರು ಚಕಾರವೆತ್ತುವುದಿಲ್ಲ.

**ದೇವಾಲಯ ನಿರಾಕರಣೆ ವಿಚಾರ**

ವಚನ ಸಂಸ್ಕೃತಿಯು ಅತ್ಯಂತ ಪ್ರಜ್ಞಾಪೂರ್ವಕವಾಗಿ, ಉಗ್ರವಾದ ರೀತಿಯಲ್ಲಿ ತನ್ನ ದೇವಾಲಯ ನಿರಾಕರಣೆಯ ವಿಚಾರವನ್ನು ಮಂಡಿಸಿತು. ವೈದಿಕ ಸಂಸ್ಕೃತಿಯನ್ನು, ಕರ್ಮಸಿದ್ಧಾಂತವನ್ನು ತಿರಸ್ಕರಿಸಿದ ವಚನ ಸಂಸ್ಕೃತಿಯು ದೇವಾಲಯ ಸಂಸ್ಕೃತಿಯನ್ನು ತಿರಸ್ಕರಿಸಲೇಬೇಕಾಗಿತ್ತು. ಕಾಯಕಕ್ಕೆ ಮತ್ತು ಪ್ರಯತ್ನಕ್ಕೆ ಪ್ರಧಾನ ಸ್ಥಾನವನ್ನು

---

**ಗಡಿಯ ಹಾಡು**

ಸಮರೋತ್ಸಾಹದಲ್ಲಿ
ನರಳುತ್ತಿವೆ
ಸರಹದ್ದುಗಳು !
ಖುಷಿಯಿಂದ
ಕುಣಿದಾಡುತ್ತಿವೆ
ರಣಹದ್ದುಗಳು !!

**ಎಸ್. ಶಶಿಕಾಂತ ಯಡಹಳ್ಳಿ**
೧೯೨, ಪ್ರಗತಿ ಕಂಪ್ಯೂಟರ್ಸ್, ವಿಮಾನ ನಿಲ್ದಾಣ ಮುಖ್ಯರಸ್ತೆ, ದೊಮ್ಮಲೂರು, ಬೆಂಗಳೂರು - ೭೧

ನೀಡಿದ್ದ ವಚನ ಸಂಸ್ಕೃತಿಯು ಪ್ರಾರಬ್ಧ ಹಾಗೂ ಕರ್ಮವನ್ನು ಬೋಧಿಸುತ್ತಿದ್ದ ದೇವಾಲಯ ಸಂಸ್ಕೃತಿಯನ್ನು ಅಪ್ಪಿಕೊಳ್ಳುವುದು ಸಾಧ್ಯವಿರಲಿಲ್ಲ. ಪ್ರಯತ್ನ ಮತ್ತು ಪರಿಶ್ರಮವನ್ನು ಆಧರಿಸಿ ಅವರು ಕಟ್ಟಿದ್ದ ವಿಚಾರ ಪ್ರಣಾಳಿಕೆಯು ವಚನ ಸಂಸ್ಕೃತಿಯ ಅತಿದೊಡ್ಡ ಸಾಧನೆಯಾಗಿದೆ. ಪ್ರಯತ್ನ ಮತ್ತು ಪರಿಶ್ರಮಗಳೇ ವಚನಕಾರರಿಗೆ ಆರಾಧನೆಯ ಸಾಧನಗಳಾದವು - ಸಂಕೇತಗಳಾದವು.

ವಚನ ಸಂಸ್ಕೃತಿಯು ಪ್ರತಿಪಾದಿಸಿದ ದೇವಾಲಯದ ನಿರಾಕರಣೆಯ ಪ್ರಣಾಳಿಕೆಯನ್ನು ಚಿದಾನಂದಮೂರ್ತಿಗಳು ಅತ್ಯಂತ ವಾಚ್ಯವಾಗಿ, ಯಾಂತ್ರಿಕವಾಗಿ, ಭೌತಿಕವಾಗಿ ಪರಿಭಾವಿಸಿ ಕೊಂಡಿದ್ದಾರೆ. ಈ ಕಾರಣದಿಂದಾಗಿ ವಚನಕಾರರ ದೇವಾಲಯ ನಿರಾಕರಣೆ ವಿಚಾರವು ಅವರಿಗೆ ಆಪಾಧಭೂತಿತನವಾಗಿ ಕಾಣುತ್ತದೆ. ದೇವಾಲಯಗಳನ್ನು ನಿರಾಕರಿಸಿ 'ವೀರಶೈವ' ವೆಂಬುದು ಇರಲು ಸಾಧ್ಯವೇ ಇಲ್ಲವೆಂದು ತಮ್ಮ ಪ್ರಮೇಯವನ್ನು ಇಲ್ಲಿ ಅವರು ಮಂಡಿಸಿದ್ದಾರೆ. ಬಸವಣ್ಣನಂತಹ ಬಸವಣ್ಣನೇ ಸಂಗಮನಾಥ ದೇವಾಲಯದ ಜೊತೆ ಸಂಬಂಧವಿಟ್ಟು ಕೊಂಡಿದ್ದನೆಂದ ಮೇಲೆ ದೇವಾಲಯದ ನಿರಾಕರಣೆ ಅವರ ಪ್ರಕಾರ ಅಸಮರ್ಥನೀಯ. ಪ್ರತಿಯೊಬ್ಬ ವಚನಕಾರರೂ ಒಂದಲ್ಲ ಒಂದು ಸ್ಥಾವರ ದೇವಾಲಯದ ಜೊತೆ ಸಂಬಂಧವಿರಿಸಿಕೊಂಡಿದ್ದರು. ಇದೊಂದು ಬಹುದೊಡ್ಡ ಸಂಶೋಧನೆಯೆಂಬಂತೆ ಅವರು ವಚನ ಸಂಸ್ಕೃತಿಯ ದೇವಾಲಯ ನಿರಾಕರಣೆಯ ವಿಚಾರವನ್ನು ತಳ್ಳಿಹಾಕಿಬಿಡುತ್ತಾರೆ. ಅವರು ಹೇಳುವುದು ಒಂದು ದೃಷ್ಟಿಯಿಂದ ಸರಿಯಿರಬಹುದು. ವೀರಶೈವರು ಇಂದು ಸ್ಥಾವರ ರೂಪಿ ದೇವಾಲಯಗಳ ಮಹಾ ಪೋಷಕರಾಗಿದ್ದಾರೆ. ಈ ದೃಷ್ಟಿಯಿಂದ ವಚನ ಸಂಸ್ಕೃತಿಯ ದೇವಾಲಯ ನಿರಕಾರಣೆಯ ವಿಚಾರ ಪ್ರಣಾಳಿಕೆಯನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ದೇವಾಲಯ ನಿರಾಕರಣೆ ವಿರುದ್ಧ ಅವರು ಹೂಡಿರುವ ವಾದ ಅತ್ಯಂತ ದುರ್ಬಲವಾಗಿದೆ. ಅವರು ವಾದಕ್ಕಾಗಿ ವಾದವನ್ನು ಇಲ್ಲಿ ಕಟ್ಟುತ್ತಿದ್ದಾರೆ. ಅವರದು ವಿತ್ತಂಡ ವಾದವಾಗಿದೆ. ಅವರಿಗೆ ದೇವಾಲಯ ನಿರಾಕರಣೆಯ ಮೂಲ ದಲ್ಲಿದ್ದ ಆಶಯವನ್ನು ಹಿಡಿಯುವುದು ಸಾಧ್ಯವಾಗಿಲ್ಲ. ಅವರಿಗೆ ಇಲ್ಲಿ 'ವಿಷಯ'ವು ಮುಖ್ಯವಾಗಿ 'ಆಶಯ'ವು ಅಮುಖ್ಯವಾಗಿ ಬಿಟ್ಟಿದೆ. ವಿಷಯವನ್ನು ಹಿಡಿದು ಹೊರಟಿರುವುದರಿಂದ ಅವರಿಗೆ ದೇವಾಲಯ ಸಂಸ್ಕೃತಿಯು ವೀರಶೈವದ ಅಂತರ್ಗತ ಭಾಗವೆಂದು ವಾದಿಸುವುದು ಸಾಧ್ಯವಾಗಿದೆ.

ವಚನಕಾರರು ಪ್ರತಿಪಾದಿಸಿದ ದೇವಾಲಯ ನಿರಾಕರಣೆಯ ಹಿಂದಿನ ಆಶಯವೇನಾಗಿತ್ತು? ಆ ಆಶಯವನ್ನು ಇಂದು ನಾವು ಹೇಗೆ ಪರಿಭಾವಿಸಿಕೊಳ್ಳಬೇಕು ? ವಚನ ಸಂಸ್ಕೃತಿಯ ವಿಚಾರಗಳಿಗೆ ವರ್ತಮಾನದ ಪ್ರಸ್ತುತತೆ ಎಂಬುದಿಲ್ಲವೆ ? ಭೂತದಲ್ಲಿ ನಿಂತು ಯೋಚಿಸುವ ಚಿದಾನಂದಮೂರ್ತಿಗಳು ಮಾತ್ರ ವಚನಕಾರರ ದೇವಾಲಯ ನಿರಾಕರಣೆ ತತ್ವವನ್ನು ಹೀಗಳೆಯಬಹುದು. ಅವರು ವರ್ತಮಾನಕ್ಕೆ ಪೂರ್ತಿ ಕುರುಡಾಗಿದ್ದಾರೆ. ದೇವಾಲಯ ನಿರಾಕರಣೆಯ ಹಿಂದಿನ ತಾತ್ವಿಕ ನೆಲೆಯನ್ನು ಭೂತದಲ್ಲಿ ಮುಳುಗಿಹೋಗಿರುವ ಅವರಿಗೆ ಹಿಡಿದಿಡುವುದು ಸಾಧ್ಯವಾಗಿಲ್ಲ.

ಜಾತಿಭೇದ-ಲಿಂಗಭೇದಗಳ ನಿರಾಕರಣೆಗಳು ಹೇಗೆ ವೀರಶೈವದ ವೈಶಿಷ್ಟ್ಯ ವಲ್ಲವೋ ಅದೇ ರೀತಿ ದೇವಾಲಯ ನಿರಾಕರಣೆಯೂ ವೀರಶೈವದ ವೈಶಿಷ್ಟ್ಯವಲ್ಲವೆಂದು ಚಿದಾನಂದಮೂರ್ತಿಗಳು ವಾದಿಸುತ್ತಾರೆ (ಪುಟ ೨೭೭).

ವಚನ ಸಂಸ್ಕೃತಿಯ ದೇವಾಲಯ ನಿರಾಕರಣೆಯ ತಾತ್ವಿಕ ಪ್ರತಿಪಾದನೆಯನ್ನು ಅವರು ಒಪ್ಪದಿರುವುದಕ್ಕೂ ಮತ್ತು ಅವರು ದೇವಾಲಯಗಳ ಪರವಾಗಿ ವಾದ ಮಾಡುತ್ತಿರುವುದಕ್ಕೂ ಹಾಗೂ ಪ್ರಸ್ತುತ ಭಾರತದಲ್ಲಿ ದೇವಾಲಯ ಸಂಸ್ಕೃತಿ ಬಗ್ಗೆ ಉಂಟಾಗಿರುವ ರಕ್ತಪಿಪಾಸೆಗೂ ಸಂಬಂಧವಿದೆ. ವಚನಕಾರರ ದೇವಾಲಯದ ನಿರಾಕರಣೆಯ ವಿಚಾರವನ್ನು ಇಂದು ಹೇಗೆ ಅರ್ಥ ಮಾಡಿಕೊಳ್ಳಬೇಕು ? ಅವರ ವಿಚಾರವು ಇಂದು ವಿಕೃತಗೊಂಡಿದ್ದರೆ, ವಿಕಾರಗೊಂಡಿದ್ದರೆ, ಅವರ ತಾತ್ವಿಕ ಪ್ರತಿ ಪಾದನೆಗೆ ವಿರುದ್ಧವಾಗಿ ಆಚರಣೆಗಳು ನಡೆಯುತ್ತಿದ್ದರೆ, ವಚನಕಾರರ ತಾತ್ವಿಕ ಪ್ರಣಾಳಿಕೆಯನ್ನು ಸೂಕ್ಷ್ಮವಾಗಿ ಗ್ರಹಿಸಿಕೊಂಡವರು ಯಾವುದರ ಪರವಾಗಿ ನಿಲ್ಲಬೇಕು ? ದೇವಾಲಯಗಳ ಅರ್ಥಹೀನತೆಯನ್ನು ತಿಳಿದೂ ಅದರ ಪರವಾಗಿ ನಿಲ್ಲುವುದು ಅವಿವೇಕವಾದೀತು. ಇವತ್ತು ದೇವಾಲಯ ನಿರ್ಮಾಣ ಮುಖ್ಯವಾಗಬೇಕೋ ಅಥವಾ




ಕರ್ನಾಟಕದ ೧೫೧.೩೩ ಲಕ್ಷ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡುವುದು ಮುಖ್ಯವಾಗಬೇಕೋ ? ದೇವಾಲಯದ ಹೆಸರಿನಲ್ಲಿ ಜನರ ಮಾರಣ ಹೋಮ ಮುಖ್ಯವಾಗಬೇಕೋ ಅಥವಾ ಭಾರತದಲ್ಲಿರುವ ೩೬೦ ದಶಲಕ್ಷ ಆಹಾರ ಅಭದ್ರತೆಯಿಂದ ನರಳುತ್ತಿರುವವರ ಸಂಕಟ ಮುಖ್ಯವಾಗ ಬೇಕೋ ? ಬರಗಾಲದಿಂದ ಕಂಗೆಟ್ಟು ಊರು ಬಿಟ್ಟು ದುಡಿಮೆ ಹುಡುಕಿಕೊಂಡು ವಲಸೆ ಹೋಗುತ್ತಿರುವ ಹೈದರಾಬಾದ್ - ಕರ್ನಾಟಕ ಪ್ರದೇಶದ ಐದು ಜಿಲ್ಲೆಗಳ ೧೬.೭೦ ಲಕ್ಷ ಭೂರಹಿತ ಕೃಷಿಕೂಲಿಕಾರರ ವಲಸೆ ತಡೆಯುವುದು ಮುಖ್ಯವಾಗಬೇಕೋ ಅಥವಾ ಪವಿತ್ರ ಸ್ಥಳಗಳ ಪಾವಿತ್ರ್ಯ ಕಾಪಾಡುವುದು ಮುಖ್ಯವಾಗಬೇಕೋ? ಸಾಮಾಜಿಕತೆಗೆ ಬೆನ್ನು ತಿರುವಿ ನಿಂತ ಜನ ಮಾತ್ರ ಅರ್ಥರಹಿತವಾದ ದೇವಾಲಯ ಸಂಸ್ಕೃತಿಯ ಪರವಾಗಿ ನಿಲ್ಲಬಲ್ಲರು. ಕರ್ನಾಟಕದಲ್ಲಿ ೬-೧೪ ವಯೋಮಾನದ ಸರಿ ಸುಮಾರು ೮.೧೪ಲಕ್ಷ ಮಕ್ಕಳು ಶಾಲೆಯಿಂದ ಹೊರಗಿದ್ದಾರೆ (೨೦೦೧). ಇದು ಯಾಕೆ ದೇವಾಲಯ ವ್ಯಸನಿಗಳಿಗೆ ಹೋರಾಟದ ವಸ್ತುವಾಗಬಾರದು ? ವಚನಕಾರರು ದೇವಾಲಯ ನಿರಾಕರಣೆಯ ವಿಚಾರವನ್ನು ಪ್ರತಿಪಾದಿಸಿದ್ದರೆ ಹಿಂದೆ ಇಂತಹ ಸಂಗತಿಗಳು ಕೆಲಸ ಮಾಡಿರಲು ಸಾಕು. ಪಾನ ನಿರೋಧದ ಬಗ್ಗೆ ಗಾಂಧೀಜಿ ಹೋರಾಟ ಮಾಡಿದರು. ಆದರೆ ಪಾನ ನಿರೋಧ ವನ್ನು ಜಾರಿಗೆ ತರಲು ಇಂದಿಗೂ ಸಾಧ್ಯವಾಗಿಲ್ಲ. ಇದರರ್ಥ ಗಾಂಧೀಜಿ ಪಾನ ನಿರೋಧವನ್ನು ಪ್ರತಿಪಾದಿಸಲಿಲ್ಲವೆಂದಾಗುತ್ತದೆಯೇ? ಹೈದರಾಬಾದ್ - ಕರ್ನಾಟಕದ ಹತ್ತಾರು ಹಳ್ಳಿಗಳಲ್ಲಿ ನಾವು ಕ್ಷೇತ್ರಕಾರ್ಯ ಮಾಡಿದ್ದೇವೆ. ಅಲ್ಲಿ ಇಂದಿಗೂ ಪರಿಶಿಷ್ಟರಿಗೆ ಊರ ಬಾವಿಗಳಿಂದ ನೀರು ಸೇದಿಕೊಳ್ಳುವ ಸ್ವಾತಂತ್ರ್ಯವಿಲ್ಲ. ಇದು ಯಾಕೆ ನಮಗೆ ಸಮಸ್ಯೆಯಾಗುತ್ತಿಲ್ಲ?

ವಚನಕಾರರು ದೇವಾಲಯ ನಿರಾಕರಣೆಯ ವಿಚಾರವನ್ನು ಪ್ರತಿಪಾದಿಸಿದ್ದಾರೆ. ಅದರ ಪಾಲನೆಯಾಗಿಲ್ಲ. ಹಾಗೆಂದು ದೇವಾಲಯ ನಿರಾಕರಣೆಯ ವಿಚಾರವೇ ಅರ್ಥರಹಿತವಾಗುವುದಿಲ್ಲ. ಚಿದಾನಂದಮೂರ್ತಿಗಳಂತಹ ವಿದ್ವಾಂಸರು ವಚನಕಾರರ ವಿಚಾರಗಳನ್ನು ತಮ್ಮ ನಿಲುವುಗಳಿಗೆ ಸರಿಹೊಂದುವಂತೆ ಮಣಿಸಿಕೊಳ್ಳುವುದರಿಂದ ಅವುಗಳ ನಿರಾಕರಣೆ ನಡೆದಿದೆ.

ಕನ್ನಡದ ಶ್ರೇಷ್ಠ ಕವಿ ಹಾಗೂ ವಿಮರ್ಶಕ ಡಾ|| ಜಿ. ಎಸ್. ಶಿವರುದ್ರಪ್ಪ ದೇವಾಲಯಗಳನ್ನು ಕುರಿತಂತೆ ಹೇಳಿರುವ ಮಾತುಗಳು ನಿಜಕ್ಕೂ ಅನುಕರಣೀಯ ವಾಗಿದೆ ಹಾಗೂ ಅತ್ಯಂತ ಪ್ರಸ್ತುತವಾಗಿದೆ. ''ಒಬ್ಬ ಬರಹಗಾರನಾಗಿ ನನಗೆ ಅನ್ನಿಸುವುದೇನೆಂದರೆ, ದೇವರಾಗಲೀ, ದೇವಾಲಯಗಳಾಗಲೀ, ಮತ-ಧರ್ಮಗಳಾ ಗಲೀ, ಈ ಹೊತ್ತಿನ ಮನುಷ್ಯನ ಅಗತ್ಯಗಳಲ್ಲ. ಅಗತ್ಯವಾದುದೆಂದರೆ ಈ ಮನುಷ್ಯನ ಮತ್ತು ಅವನನ್ನು ಒಳಗೊಂಡ ಸಮಾಜದ ಸ್ವಾಸ್ಥ್ಯವನ್ನು ಇನ್ನಷ್ಟು ಕೆಡದ ಹಾಗೆ ಉಳಿಸುವುದು ಹೇಗೆ ಎನ್ನುವುದು. ಧರ್ಮ-ದೇವರು ದೇವಾಲಯಗಳೇ ಈ ಮನುಷ್ಯರನ್ನು ಒಡೆಯುವ ಸ್ಫೋಟಕ ಸಾಮಗ್ರಿಗಳಾಗಿ ಬಳಕೆಯಾಗುತ್ತಿರುವ ಈ ಹೊತ್ತಿನಲ್ಲಿ ಇವುಗಳನ್ನು ನಿರಾಕರಿಸಿ ನಿಲ್ಲಬಲ್ಲಂಥ ಮತ್ತು ನಮ್ಮ ರಾಷ್ಟ್ರದ ಸಂವಿಧಾನದ ಮೌಲ್ಯಗಳನ್ನು ಎತ್ತಿ ಹಿಡಿಯಬಲ್ಲಂಥ ಮನಃಸ್ಥಿತಿಯೊಂದು ನಿರ್ಮಾಣವಾದೀತೆ ಎಂದು ನಾನು ಕಾದಿದ್ದೇನೆ'' (ಹೊಸತು, ಮಾರ್ಚ್ ೨೦೦೩, ಪು. ೮). ಶಿವರುದ್ರಪ್ಪನವರಿಗೆ ವಚನ ಸಂಸ್ಕೃತಿಯ ಆಶಯವನ್ನು ಹಿಡಿದಿಡುವುದು ಸಾಧ್ಯವಾಗಿದೆ. ಆದ್ದರಿಂದಲೇ ಅವರ ಮಾತುಗಳಲ್ಲಿ ವಚನಕಾರರ ವಿಚಾರದ ಪ್ರತಿಧ್ವನಿ ಕೇಳಿಬರುತ್ತದೆ. ಈ 'ಹೊತ್ತಿ'ನಲ್ಲಿ ಯಾವುದು ಮುಖ್ಯವೆಂಬುದನ್ನು ಅವರು ವಚನ ಸಂಸ್ಕೃತಿಯ ನೆಲೆಯಿಂದ ಸ್ಪಷ್ಟಪಡಿಸಿದ್ದಾರೆ. ಈ ಬಗೆಯಲ್ಲಿ ವಚನ ಸಂಸ್ಕೃತಿಯು ಪ್ರತಿಪಾದಿಸಿದ್ದ ದೇವಾಲಯ ನಿರಾಕರಣೆಯ ವಿಚಾರವನ್ನು ಚಿದಾನಂದಮೂರ್ತಿಗಳಿಗೆ ಅರ್ಥಮಾಡಿ ಕೊಳ್ಳುವುದು ಸಾಧ್ಯವಾಗಿಲ್ಲ.

*(ಸೆಪ್ಟೆಂಬರ್ ಸಂಚಿಕೆಯಲ್ಲಿ ಮುಕ್ತಾಯವಾಗುವುದು)*

ಡಾ|| ಟಿ. ಆರ್. ಚಂದ್ರಶೇಖರ
'ವಚನ', ಸ್ಟೇಷನ್ ರಸ್ತೆ, ಅಮರಾವತಿ, ಹೊಸಪೇಟೆ - ೫೮೩ ೨೦೧

# ಎಂ. ಎ. ಸೇತುರಾವ್

ನನಗೆ ಸೇತುರಾಯರ ಪರಿಚಯ ಆದದ್ದು ೧೯೪೦ರಲ್ಲಿ, ಸೆಂಟ್ರಲ್ ಕಾಲೇಜಿನ ರಸಾಯನ ಶಾಸ್ತ್ರ ವಿಭಾಗದಲ್ಲಿ ಅವರು ಬಿ.ಎಸ್‌ಸಿ. ಆನರ್ಸ್ ಮೊದಲ ವರ್ಷದ ವಿದ್ಯಾರ್ಥಿಯಾಗಿ ಸೇರಿದಾಗ. ಆಗ ನಾನು ಅದೇ ವಿಭಾಗದಲ್ಲಿ ಎರಡನೆಯ ವರ್ಷದ ವಿದ್ಯಾರ್ಥಿ. ನಾವು ಬಹುಬೇಗ ಸ್ನೇಹಿತರಾದೆವು. ಇಬ್ಬರಿಗೂ ಇದ್ದ ಓದುವ ಗೀಳು ಅದಕ್ಕೆ ಕಾರಣ. ಅವರು ಆಗ ಲೋಹಿಯಾ ಅನುಯಾಯಿ; ನಾನು ಎಂ. ಎನ್. ರಾಯ್ ಅನುಯಾಯಿ. ಆದುದರಿಂದ ಆಗಾಗ ನಮ್ಮಿಬ್ಬರ ನಡುವೆ ವಾಗ್ವಾದ ಬೆಳೆದು ಘರ್ಷಣೆಯಾಗುತ್ತಿತ್ತು. ಆ ಘರ್ಷಣೆ ಎಂದೂ ಪರಸ್ಪರ ಪ್ರೀತಿ ಗೌರವಗಳಿಗೆ ಕುಂದು ತರಲಿಲ್ಲ.

೧೯೪೨ರ ಆಗಸ್ಟ್ ೯ರಂದು 'ಕ್ವಿಟ್ ಇಂಡಿಯಾ' ಚಳವಳಿ ಪ್ರಾರಂಭವಾದಾಗ ಇನ್ನೂ ಹದಿನೆಂಟು ತುಂಬಿರದಿದ್ದ ಸೇತುರಾಯರು ಚಳವಳಿಯಲ್ಲಿ ಧುಮುಕಿ ಸೆರೆಮನೆಗೆ ಹೋದರು. ಎಂ. ಎನ್. ರಾಯ್‌ರವರ ಚಿಂತನೆಯಿಂದ ಪ್ರಭಾವಿತನಾಗಿದ್ದ ನಾನಾದರೋ ಸಹಜವಾಗಿಯೇ ಕ್ವಿಟ್ ಇಂಡಿಯಾ ಚಳುವಳಿ ವಿರೋಧಿ. ಆದುದರಿಂದ ನಾನು ಸೆರೆಮನೆಗೆ ಹೋಗದಿದ್ದುದು ಮಾತ್ರವಲ್ಲ; ಶಾಲಾ ಕಾಲೇಜುಗಳನ್ನು ಮುಚ್ಚಿದ ಮೇಲೆ ಎರಡು ಮೂರು ತಿಂಗಳ ಕಾಲ ಸುಮ್ಮನಿದ್ದು, ಅನಂತರ ''ಶಾಲಾ ಕಾಲೇಜುಗಳಿಗೆ ಹಿಂದಿರುಗಿ'' ಎಂದು ವಿದ್ಯಾರ್ಥಿಗಳಿಗೆ ಕರೆ ಕೊಡುವ ಒಂದು ಚಳವಳಿಯನ್ನು ಪ್ರಾರಂಭಿಸಿ ಅದರ ಮುಖಂಡತ್ವ ವಹಿಸಿದೆ. ಪರಿಣಾಮವಾಗಿ ನಾನು ಕೊಳೆತ ಕೋಳಿಮೊಟ್ಟೆ ಮತ್ತು ಟೊಮೆಟೊಗಳ ಏಟು ತಿಂದೆ. ಆದರೆ ನಮ್ಮ ಚಳುವಳಿ ಯಶಸ್ಸು ಕಂಡಿತು. ಶಾಲಾ ಕಾಲೇಜುಗಳು ಕೆಲಸ ಮಾಡಲು ಪ್ರಾರಂಭಿಸಿದವು. ಸೆರೆಮನೆಗೆ ಹೋಗಿದ್ದ ವಿದ್ಯಾರ್ಥಿಗಳೂ ಕ್ಷಮಾಪಣೆ ಪತ್ರ ಬರೆದುಕೊಟ್ಟು ಸೆರೆಮನೆಯಿಂದ ಬಿಡುಗಡೆಗೊಂಡು ಕಾಲೇಜುಗಳಿಗೆ ಬಂದರು. ನನಗೆ ನೆನಪಿರುವಂತೆ, ಸೆರೆಮನೆಗೆ ಹೋಗಿದ್ದ ನಮ್ಮ ಕಾಲೇಜಿನ ವಿದ್ಯಾರ್ಥಿಗಳ ಪೈಕಿ ಕ್ಷಮಾಪಣೆ ಕೇಳಲು ನಿರಾಕರಿಸಿ, ಸೆರೆಮನೆಯಲ್ಲಿಯೇ ಉಳಿದು ಒಂದು ವರ್ಷ ಕಳೆದುಕೊಂಡವರು ಇಬ್ಬರು ಮಾತ್ರ: ಸೇತುರಾವ್ ಮತ್ತು ಎಚ್. ನರಸಿಂಹಯ್ಯ.

ಸೇತುರಾಯರು ಚಳವಳಿಯಲ್ಲಿ ಭಾಗವಹಿಸಿ ಸ್ವಾತಂತ್ರ್ಯಯೋಧ ಎನ್ನಿಸಿಕೊಂಡರು. ನಾನು ಚಳವಳಿಯನ್ನು ವಿರೋಧಿಸಿ ದೇಶದ್ರೋಹಿ ಎನ್ನಿಸಿಕೊಂಡೆ. ವಿಚಿತ್ರವೆಂದರೆ ನನ್ನ ಜೊತೆಗೆ ಸೆಂಟ್ರಲ್ ಕಾಲೇಜ್ ಹಾಸ್ಟಲ್‌ನಲ್ಲಿದ್ದ ಕೆಲವು ವಿದ್ಯಾರ್ಥಿಗಳು, ಕ್ಷಮಾಪಣೆ ಪತ್ರಕ್ಕೆ ಸಹಿ ಹಾಕಿ ಸೆರೆಮನೆಯಿಂದ ಹೊರಗೆ ಬಂದಿದ್ದ ಸ್ವಾತಂತ್ರ್ಯವೀರರು, ನನ್ನನ್ನು ಹೀನಾಯವಾಗಿ ಕಾಣುತ್ತಿದ್ದರು. ನಾನು ಅವರಿಗೆ ಅಸ್ಪೃಶ್ಯನಾದೆ. ಕ್ಷಮಾಪಣೆ ಪತ್ರಕ್ಕೆ ಸಹಿ ಹಾಕಲು ನಿರಾಕರಿಸಿ ಸೆರೆಮನೆಯಲ್ಲಿಯೇ ಉಳಿದು, ಅವರಾಗಿ ಬಿಟ್ಟಾಗ ಸೆರೆಮನೆಯಿಂದ ಹೊರಬಂದ ಸೇತುರಾಯರಿಗೆ ನಾನು ಅಸ್ಪೃಶ್ಯನಾಗಲಿಲ್ಲ. ನನ್ನ ನಂಬಿಕೆಗನುಸಾರವಾಗಿ



*ಬಹಳ ವರ್ಷಗಳ ಸ್ನೇಹ - ಸಂವಾದ*

ನಾನು ನಡೆದುಕೊಂಡೆನೆಂದು ಗ್ರಹಿಸಿ ಸ್ನೇಹ ಹಸ್ತ ನೀಡಿದರು. ನನ್ನ, ಅವರ ಸಂಬಂಧ ಎಂದಿನಂತೆ ಮುಂದುವರಿಯಿತು.

ನಾಲ್ಕೈದು ವರ್ಷಗಳ ತರುವಾಯ ೧೯೪೭-೪೮ರ ವೇಳೆಗೆ, ಸೆಂಟ್ರಲ್ ಕಾಲೇಜ್ ರಸಾಯನ ಶಾಸ್ತ್ರ ವಿಭಾಗದಲ್ಲಿ ನಾವಿಬ್ಬರೂ ಸಹಅಧ್ಯಾಪಕರಾಗಿ ಒಂದುಗೂಡಿದಾಗ ನಾವು ಪರಸ್ಪರ ಇನ್ನೂ ಹತ್ತಿರವಾಗಿದ್ದುದು ನಮ್ಮ ಅನುಭವಕ್ಕೆ ಬಂದಿತು. ಇಬ್ಬರೂ ಮಾರ್ಕ್ಸ್‌ವಾದದ ಅಭಿಮಾನಿಗಳಾಗಿದ್ದೆವು. ಆಸಕ್ತಿಯುಳ್ಳ ವಿಷಯದಲ್ಲಿ ಇನ್ನೂ ಹೆಚ್ಚು ಅಧ್ಯಯನ ನಡೆಸುವ ಮತ್ತು ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳುವ ಉದ್ದೇಶದಿಂದ ಸಂಘಟನೆ ಪ್ರವೃತ್ತಿಯ ಸೇತುರಾಯರು ನಗರದ ಕಾಲೇಜುಗಳಲ್ಲಿ ಮತ್ತು ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿದ್ದ ಎಂಟು ಹತ್ತು ಮಂದಿ ಸಮಾನ ಮನಸ್ಕರನ್ನು ಗುರುತಿಸಿ, ಒಂದು ಅಧ್ಯಯನ ತಂಡವನ್ನು ನಿರ್ಮಿಸಿದರು. ಆ ತಂಡದ ಮೊದಲನೆಯ ಸಭೆಯನ್ನು ಅವರು ತಮ್ಮ ಮನೆಯಲ್ಲಿಯೇ ನಡೆಸಿದರೆಂದು ನನ್ನ ನೆನಪು. ಅಲ್ಲಿಂದ ಎರಡು ಮೂರು



*ನವಕರ್ನಾಟಕ ಪ್ರಕಾಶನದ ಒಂದು ಸಮಾರಂಭದಲ್ಲಿ*

ವರ್ಷ ಕಾಲ, ವೃತ್ತಿ ಸಂಬಂಧವಾದ ಆವಶ್ಯಕತೆಗಳ ಕಾರಣ ತಂಡದ ಸದಸ್ಯರು ಬೆಂಗಳೂರಿನಿಂದ ಚದರಿ ಹೋಗುವವರೆಗೂ ಆ ತಂಡವು ಪ್ರತಿ ಭಾನುವಾರವೂ ಬೆಳಿಗ್ಗೆ ಬೇರೆಬೇರೆಯವರ ಮನೆಯಲ್ಲಿ ಕಲೆತು ಅಧ್ಯಯನ ನಡೆಸುತ್ತಿತ್ತು.

ನಮ್ಮ ಒಡನಾಟ ಮತ್ತಷ್ಟು ನಿಕಟವಾದದ್ದು ೧೯೮೦ರಲ್ಲಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಅಸ್ತಿತ್ವಕ್ಕೆ ಬಂದು, ಅದರ ಕಾರ್ಯಕ್ರಮಗಳ ಜವಾಬ್ದಾರಿಯನ್ನು ನಾವು ವಹಿಸಿಕೊಂಡ ಮೇಲೆ. ವೈಜ್ಞಾನಿಕ ಸಾಕ್ಷರತೆಯನ್ನು ನಮ್ಮ ಜನರಲ್ಲಿ ಪ್ರಸಾರ ಮಾಡುವುದಕ್ಕಾಗಿ ಒಂದು ಸಂಸ್ಥೆಯನ್ನು ಸ್ಥಾಪಿಸುವ ಯೋಜನೆ ಕೆಲವು ಸ್ನೇಹಿತರ ಮನಸ್ಸಿನಲ್ಲಿ ಮೂಡಿದಾಗ, ಆ ವೇಳೆಗಾಗಲೇ ಸಂಸ್ಥೆಗಳನ್ನು ಹುಟ್ಟಿಹಾಕುವುದರಲ್ಲಿ ಮತ್ತು ಅವುಗಳನ್ನು ಪೋಷಿಸುವುದರಲ್ಲಿ ಪಳಗಿದ್ದ ಸೇತುರಾಯರು ಆ ಸ್ನೇಹಿತರ ನೆರವಿಗೆ ಬಂದರು. ತಾವು ಕಾರ್ಯನಿರ್ವಾಹಕ ಕಾರ್ಯದರ್ಶಿಯಾಗಿದ್ದ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಲಿಯ ಪತಿಯಿಂದಲೇ ಹೊಸ ಸಂಸ್ಥೆಯ ಸ್ಥಾಪನೆಗೆ ಅಗತ್ಯವಾದ ಪೂರ್ವಸಿದ್ಧತೆಗಳನ್ನು ಮಾಡಿದರು. ಪರಿಣಾಮವಾಗಿ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಜನ್ಮ ತಾಳಿತು. ಮೊದಲ ಹತ್ತು ವರ್ಷಗಳ ಕಾಲ ನಾನು ಉಪಾಧ್ಯಕ್ಷ ಮತ್ತು ಅಧ್ಯಕ್ಷನಾಗಿದ್ದೆ; ಆ ಹತ್ತು ವರ್ಷವೂ ಅವರು ಗೌರವ ಕಾರ್ಯದರ್ಶಿಯಾಗಿದ್ದರು. ಆದ್ದರಿಂದ ನಮ್ಮ ಒಡನಾಟ ಅತ್ಯಂತ ನಿಕಟವಾಯಿತು. ಇತರರು ಸಂಸ್ಥೆಯ ವಿಷಯ ಮಾತನಾಡುವಾಗ ನಮ್ಮಿಬ್ಬರ ಹೆಸರನ್ನು ಯಾವಾಗಲೂ ಒಟ್ಟಿಗೆ ಉಚ್ಚರಿಸುವ ಪರಿಸ್ಥಿತಿ ಉಂಟಾಯಿತು.

ಸಾರ್ವಜನಿಕ ಸಂಸ್ಥೆಯೊಂದರ ಜವಾಬ್ದಾರಿಯುತ ಸ್ಥಾನದಲ್ಲಿರುವವರು ಬಗೆಬಗೆಯ ವ್ಯಕ್ತಿಗಳೊಡನೆ ವ್ಯವಹರಿಸಬೇಕಾಗುತ್ತದೆ. ಅಂಥವರು ಎಲ್ಲದಕ್ಕಿಂತ ಮುಖ್ಯವಾಗಿ ಕಾಪಾಡಿಕೊಳ್ಳಬೇಕಾದುದು, ಅಪಾರ ತಾಳ್ಮೆ ಮತ್ತು ಸಂಯಮ. ಆ ವಿಷಯದಲ್ಲಿ ಸೇತುರಾಯರು ಮಾದರಿ ಸ್ವರೂಪದವರಾಗಿದ್ದರು. ವಿಜ್ಞಾನ ಪರಿಷತ್ತಿನ ಕಾರ್ಯಕಾರೀ ಸಮಿತಿಯಲ್ಲಾಗಲೀ ಬೇರಾವ ಉಪಸಮಿತಿಯಲ್ಲಾಗಲೀ ಸಂಸ್ಥೆಯು ಹಮ್ಮಿಕೊಳ್ಳಲಿರುವ ಕಾರ್ಯಕ್ರಮ ಅಥವಾ ಯೋಜನೆಯ ಸಾಧಕ ಬಾಧಕಗಳ ಬಗೆಗೆ ಚರ್ಚೆ ನಡೆದಾಗ, ಆ ಕಾರ್ಯಕ್ರಮ ನಮ್ಮ ಸಂಸ್ಥೆಯ ಧ್ಯೇಯೋದ್ದೇಶಗಳಿಗೆ ಅನುಗುಣವಾದುದೇ, ಅದು ಕಾರ್ಯಸಾಧ್ಯವೇ ಎಂಬುದನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಳ್ಳುವುದು ಯೋಗ್ಯ ಕ್ರಮ. ಯಾರಾದರೊಬ್ಬ ಸದಸ್ಯರು ಹಾಗೆ ಮಾಡದೆ, ಆ ಯೋಜನೆ ಹಮ್ಮಿಕೊಂಡರೆ ಯಾರಿಗೆ ಲಾಭ, ಯಾರ ವರ್ಚಸ್ಸು ವೃದ್ಧಿಯಾಗುತ್ತದೆ ಎಂಬ ದೃಷ್ಟಿ ತಳೆದದ್ದು ಕಂಡುಬಂದರೆ, ಸೇತುರಾಯರು ನೇರವಾಗಿ ಅವರನ್ನು ಛೇಡಿಸದೆ, ಚಾಕಚಕ್ಯತೆಯಿಂದ, ಉಪಾಯವಾಗಿ, ಹಳಿ ತಪ್ಪಿದವರನ್ನು ಹಳಿಯ ಮೇಲೆ ತಂದು ನಿಲ್ಲಿಸಿ ಅಂಥವರು ತಲೆ ತಗ್ಗಿಸುವಂತೆ ಮಾಡುತ್ತಿದ್ದರು.

ಒಮ್ಮೆ ಕಾರ್ಯಕಾರೀ ಸಮಿತಿಯ ಸಭೆಯಲ್ಲಿ ಸದಸ್ಯರೊಬ್ಬರು ಸೇತುರಾಯರ ಬಗ್ಗೆ ಗುರುತರವಾದ ಆಪಾದನೆ ಮಾಡಿದರು. ಪರಿಷತ್ತಿನ ಘಟಕಗಳು ಹಮ್ಮಿಕೊಳ್ಳುವ ವಿಶೇಷ ಕಾರ್ಯಕ್ರಮಗಳಿಗೆ ಧನಸಹಾಯ ನೀಡುವಾಗ ಆ ಸದಸ್ಯರು ಸಂಚಾಲಕರಾಗಿದ್ದ ಘಟಕದ ಕೋರಿಕೆಯನ್ನು ಸೇತುರಾಯರು ಬೇಕೆಂತಲೇ ಕಡೆಗಣಿಸಿ ಪಕ್ಷಪಾತ ಮಾಡಿದ್ದಾರೆ ಎಂದು ಆಪಾದಿಸಿದರು. ಕಾರ್ಯಕಾರೀ ಸಮಿತಿಯ ಅನೇಕ ಸದಸ್ಯರು ಅಂಥ ಆಪಾದನೆಯ ಬಗ್ಗೆ ಜಿಗುಪ್ಸೆ ವ್ಯಕ್ತಪಡಿಸಿದರು. ಆದರೆ, ಸೇತುರಾಯರಿಗೆ ಕೋಪ ಬರಲಿಲ್ಲ, ನೊಂದುಕೊಂಡುದನ್ನು ನುಂಗಿಕೊಂಡು ಶಾಂತರಾಗಿಯೇ ಸಂಬಂಧಪಟ್ಟ ಕಾಗದ ಪತ್ರಗಳ ಕಡತವನ್ನು ತರಿಸಿ, ಹಾಳೆಗಳನ್ನು ತಿರುವಿ ಹಾಕಿ, ಹಣಕಾಸು ಉಪಸಮಿತಿಯ ಸಭೆ ಸೇರಿ ಸಹಾಯಧನ ವಿತರಣೆಯ ಬಗ್ಗೆ ತೀರ್ಮಾನಗಳನ್ನು ಕೈಗೊಂಡ ಒಂದು ವಾರದ ಮೇಲೆ ಆ ಸದಸ್ಯರ ಕೋರಿಕೆ ಪತ್ರ ಬಂದುದನ್ನು ಕಾರ್ಯಕಾರೀ ಸಮಿತಿಯ ಗಮನಕ್ಕೆ ತಂದರು ; ಆ ಸದಸ್ಯರು ಮಾಡಿದ್ದ ಆಪಾದನೆಯ ಬಗ್ಗೆ ಒಂದು ಮಾತನ್ನೂ ಆಡದೆ ಸಮಿತಿಯ ಕಾರ್ಯಕಲಾಪಗಳನ್ನು ಮುಂದುವರಿಸಿಕೊಂಡು ಹೋದರು.

ಈ ರೀತಿ ಅವರು ತಾಳ್ಮೆಗೆಡದೆ ಸಮತೋಲನವನ್ನು ಕಾಪಾಡಿಕೊಂಡು ಸನ್ನಡತೆಗೆ ಚ್ಯುತಿಯುಂಟಾಗದಂತೆ ಎಲ್ಲರೊಡನೆಯೂ ನಡೆದುಕೊಳ್ಳುತ್ತಿದ್ದುದರಿಂದಲೇ ನಾಲ್ಕಾರು ಸಂಸ್ಥೆಗಳ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿ ಆ ಸಂಸ್ಥೆಗಳಿಗೆ ಗಣನೀಯ ಕೊಡುಗೆ ನೀಡುವುದು ಅವರಿಗೆ ಸಾಧ್ಯವಾದುದು. ವಿದ್ವತ್ಸಂಬಂಧವಾದ ವಿಷಯಗಳಲ್ಲಿ ಆಸಕ್ತಿ ಕಳೆದುಕೊಳ್ಳದೆ, ಅಧ್ಯಯನಶೀಲತೆಯನ್ನು ಬಲಿಗೊಡದೆ ಅವರು ಸಂಸ್ಥೆಗಳನ್ನು ಕಟ್ಟಿ ಬೆಳೆಸುವುದರಲ್ಲಿಯೂ ತೊಡಗಿದ್ದುದು ಒಂದು ವಿಶೇಷ. ಸೇತುರಾಯರಂಥವರ ಸ್ನೇಹ ಲಭಿಸುವುದು ಸುಲಭವಲ್ಲ; ಅಂಥವರು ವಿರಳ. ನನಗೆ ಅವರ ನಿಕಟ ಸ್ನೇಹ ಲಭಿಸಿದುದು ಮತ್ತು ಹತ್ತಿಪ್ಪತ್ತು ವರ್ಷಗಳ ಕಾಲ ಅವರೊಡನೆ ಕೆಲಸ ಮಾಡುವ ಅವಕಾಶ ದೊರೆತದ್ದು ನನ್ನ ಸುದೈವ ಎಂದು ನಾನು ಭಾವಿಸಿದ್ದೇನೆ.

*– ಜೆ. ಆರ್. ಲಕ್ಷ್ಮಣರಾವ್*

---

# ವಿಜ್ಞಾನ ಮತ್ತು ಸಾಮಾಜಿಕ ಕಳಕಳಿಯ ಸೇತುವಾಗಿದ್ದ ಪ್ರೊ॥ ಸೇತುರಾಯರು

೧೯೪೦ರ ದಶಕ. ನಾನಾಗ ನ್ಯಾಷನಲ್ ಕಾಲೇಜಿನಲ್ಲಿ ಇಂಟರ್‌ಮೀಡಿಯಟ್ ತರಗತಿಯ ವಿದ್ಯಾರ್ಥಿಯಾಗಿದ್ದೆ. ಮಾರ್ಕ್ಸ್‌ವಾದಿ ವಿಚಾರಧಾರೆಯಿಂದ ಪ್ರಭಾವಿತನಾಗಿದ್ದ ನನಗೆ ಸೆಂಟ್ರಲ್ ಕಾಲೇಜಿನಲ್ಲಿ ರಸಾಯನಶಾಸ್ತ್ರದ ಅಧ್ಯಾಪಕರಾಗಿದ್ದ ಶ್ರೀ ಸೇತುರಾಯರ ಪರಿಚಯವಾಯಿತು. ಅವರೂ ಅವರ ಸಹಧರ್ಮಿಣಿ ಶ್ರೀಮತಿ ಕುಂತಳಾ ಸೇತುರಾಯರು ಸಾಮಾಜಿಕ ಚಟುವಟಿಕೆಗಳಲ್ಲಿ ಕ್ರಿಯಾಶೀಲರಾಗಿ ಭಾಗವಹಿಸುತ್ತಿದ್ದರು.

ಆಗ ಶ್ರೀ ಸೇತುರಾಯರು ಶ್ರೀರಾಮಪುರದಲ್ಲಿ ಮನೆ ಮಾಡಿದ್ದರು. ಭಾನುವಾರಗಳಂದು ಅವರ ಮನೆಯಲ್ಲಿ ಮಾರ್ಕ್ಸ್‌ವಾದಿ ವ್ಯಾಸಂಗ ಗೋಷ್ಠಿಗಳು ನಡೆಯುತ್ತಿದ್ದವು. ಅದರಲ್ಲಿ ಭಾಗವಹಿಸುವ ಸುಯೋಗ ಗೆಳೆಯ ಸಿಯಾರ್ಕೆ, ಕೃಷ್ಣಮೂರ್ತಿ (ಕಿಚ್ಚು), ಅವರುಗಳ ಜೊತೆ ನನಗೂ ಲಭಿಸಿದ್ದಿತು. ಆ ಗೋಷ್ಠಿಗಳಲ್ಲಿ ಭಾರತೀಯ ವಿಜ್ಞಾನ ಸಂಸ್ಥೆಯ ಪ್ರೊ॥ ಸತೀಶ್ ಧಾವನ್, ಶ್ರೀ ವಾಸುದೇವ ಮೂರ್ತಿ, ಪ್ರೊ॥ ಜೆ. ಆರ್. ಲಕ್ಷ್ಮಣರಾವ್, ಶ್ರೀ ಅಮೂಲ್ಯ ರೆಡ್ಡಿ ಮುಂತಾದ ಹೆಸರಾಂತ ಬುದ್ಧಿಜೀವಿಗಳು ಭಾಗವಹಿಸಿ ಅತ್ಯಂತ ಉನ್ನತಮಟ್ಟದ ವಿಚಾರಪೂರಿತ ಚರ್ಚೆ ನಡೆಸುತ್ತಿದ್ದರು. ಬೌದ್ಧಿಕ ಜ್ಞಾನ ವರ್ಧನೆಯ ಜೊತೆಗೆ ನಮಗೆಲ್ಲ ಲಭಿಸುತ್ತಿದ್ದ ಶ್ರೀಮತಿ ಮತ್ತು ಶ್ರೀ ಸೇತುರಾಯರ ಅತಿಥಿ ಸತ್ಕಾರದ ಸವಿನೆನಪು ಎಂದಿಗೂ ಮಾಸದು.

ಸಾಮಾಜಿಕ ಕಳಕಳಿ ಶ್ರೀ ಸೇತುರಾಯರ ವಿಶಿಷ್ಟ ಲಕ್ಷಣವಾಗಿದ್ದಿತು. ಅದಕ್ಕಾಗಿ ಅವರು ಎಂಥದೇ ವೈಯಕ್ತಿಕ ಕಷ್ಟನಷ್ಟಗಳಿಗೂ ಸಿದ್ಧರಾಗಿದ್ದರು. ಅದೇ ಅವರನ್ನು ಶಾಂತಿ ಮತ್ತು ಆಫ್ರೊ – ಏಷ್ಯನ್ ಸಮೈಕ್ಯತಾ ಸಮಿತಿಗಳ ಚಟುವಟಿಕೆಗಳಲ್ಲಿ ಅವಿಶ್ರಾಂತವಾಗಿ ತೊಡಗುವಂತೆ ಪ್ರೇರಿಸಿದ್ದುದು. ಅದರ ಕಾರ್ಯ ಚಟುವಟಿಕೆಗಳ ಅಂಗವಾಗಿ ಅವರು ೧೯೫೦ರ ದಶಕದಲ್ಲೊಮ್ಮೆ ವಿಶ್ವಶಾಂತಿ ಸಮ್ಮೇಳನದಲ್ಲಿ ಭಾಗವಹಿಸಲು ಪ್ರಾಗ್‌ಗೆ ಹೋಗುವ ಮಾರ್ಗದಲ್ಲಿ ಮಾಸ್ಕೋಗೆ ಬಂದಿದ್ದಾಗ ನಮ್ಮ ಮನೆಗೂ ಭೇಟಿ ನೀಡಿ ಹಳೆಯ ನೆನಪಿಗೆ ಹೊಸ ಚೇತನ ತುಂಬಿದ್ದರು. ಬೆಂಗಳೂರಿಗೆ ಹಿಂದಿರುಗಿದ ಮೇಲೆ ತಕ್ಷಣವೇ ಕಾಗದ ಬರೆದು ನಮ್ಮ ಮನೆಯವರಿಗೆಲ್ಲ ವಂದನೆ ಸಲ್ಲಿಸಿದುದು ಅವರ ಸಜ್ಜನಿಕೆಗೆ, ವ್ಯಕ್ತಿತ್ವದ ಹಿರಿಮೆಗೆ, ಸಾಕ್ಷಿಯಾಗಿದ್ದಿತು.

ಮತ್ತೆ ೧೯೮೮ರಲ್ಲಿ ನವಕರ್ನಾಟಕ ಪ್ರಕಾಶನದವರು ಜ್ಞಾನ-ವಿಜ್ಞಾನ ಕೋಶ ಪ್ರಕಟಣೆಯ ಕಾರ್ಯ ಕೈಗೊಂಡಾಗ ಶ್ರೀ ಸೇತುರಾಯರೊಂದಿಗೆ ಪ್ರಧಾನ ಸಂಪಾದಕರಲ್ಲೊಬ್ಬನಾಗಿ ದುಡಿಯುವ ಸದವಕಾಶ ನನಗೆ ಲಭಿಸಿತು. ನಮಗೆಲ್ಲ ಸಣ್ಣಪುಟ್ಟವೆಂದು ತೋರುತ್ತಿದ್ದ ವಿಷಯಗಳಲ್ಲೂ ಸೇತುರಾಯರು ಎಷ್ಟೊಂದು ಎಚ್ಚರಿಕೆ ಕಾಳಜಿ ತೋರುತ್ತಿದ್ದುದನ್ನು ಕಂಡು ನಾವೆಲ್ಲ ಬೆರಗಾಗುತ್ತಿದ್ದೆವು. ದಿನಕ್ಕೊಮ್ಮೆ ದೂರವಾಣಿ ಕರೆ ಮಾಡುತ್ತಿದ್ದುದಲ್ಲದೆ ಹೊತ್ತುಗೊತ್ತಿನ ಹಾಗೂ ಆಯಾಸದ ಪರಿವೆ ಇಲ್ಲದೆ ನಮ್ಮ ಮನೆಗೇ ಬಂದು ವಿಷಯದ ವಿವರಣೆ ಒದಗಿಸುತ್ತಿದ್ದರು. ಜ್ಞಾನ-ವಿಜ್ಞಾನ ಕೋಶದ ಬಿಡುಗಡೆಯ ಸಮಾರಂಭದಲ್ಲಿ ತುಂಬ ಮುತುವರ್ಜಿ ವಹಿಸಿ ಖ್ಯಾತ ವಿಜ್ಞಾನಿಗಳಾದ ರೊದ್ದಮ್ ನರಸಿಂಹ ಹಾಗೂ ವಿಶ್ವೇಶ್ವರರವರು ಅದರಲ್ಲಿ ಭಾಗವಹಿಸುವಂತೆ ಏರ್ಪಡಿಸಿದ್ದರು.

ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಸಂಸ್ಥಾಪಕ ಕಾರ್ಯದರ್ಶಿಗಳಾಗಿಯೂ ಅನಂತರ ಅಧ್ಯಕ್ಷರಾಗಿಯೂ, 'ಬಾಲವಿಜ್ಞಾನ' ಪತ್ರಿಕೆಯ ಕಾರ್ಯನಿರ್ವಾಹಕ ಸಂಪಾದಕರಾಗಿಯೂ ಸಲ್ಲಿಸದ ಅನೇಕ ವರ್ಷಗಳ ಸೇವೆಯನ್ನೂ ಅನೇಕ ಗ್ರಂಥಗಳನ್ನೂ ಲೇಖನಗಳನ್ನೂ ರಚಿಸಿ ಜನಸಾಮಾನ್ಯರ ಮಧ್ಯೆ ವೈಜ್ಞಾನಿಕ ಅರಿವು ಹಾಗೂ ವೈಚಾರಿಕ ಮನೋಧರ್ಮ ಬೆಳೆಯುವಂತೆ ಎಸಗಿದ ಕಾರ್ಯವನ್ನೂ ಮನ್ನಿಸಿ ಭಾರತ ಸರ್ಕಾರವು ಅವರಿಗೆ ಅಖಿಲ ಭಾರತ ವಿಜ್ಞಾನ ಪ್ರಶಸ್ತಿ ನೀಡಿದಾಗ ಅವರನ್ನು ಅಭಿನಂದಿಸಿದ ಅವರ ಶಿಷ್ಯ ಸಮೂಹದಲ್ಲಿ ಹಾಗೂ ಅನುಯಾಯಿಗಳಲ್ಲಿ ನಾನೂ ಒಬ್ಬನಾಗಿದ್ದೆ.

ಈಚೆಗೆ ಕ್ಯಾನ್ಸರ್‌ನ ಕ್ರೂರ ಹಿಡಿತಕ್ಕೆ ಸಿಕ್ಕಿ ಶಾರೀರಕ ಬಾಧೆಗೊಳಗಾಗಿದ್ದಾಗಲೂ



*ಜ್ಞಾನವಿಜ್ಞಾನ ಕೋಶದ ಸಂಪಾದಕ*

ಸಾರ್ವಜನಿಕ ಸಭೆ ಸಮ್ಮೇಳನಗಳಲ್ಲಿ ಭಾಗವಹಿಸಿ ವಿಚಾರಪೂರಿತ ಉಪನ್ಯಾಸಗಳನ್ನು ನೀಡುತ್ತಿದ್ದರು. 'ಹೊಸತು' ಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದರು. ಅವರು ತೀರಿ ಹೋಗುವುದಕ್ಕೆ ಕೆಲವು ದಿನಗಳ ಮುನ್ನ ಶ್ರೀ ರಾಜಾರಾಮ್ ಮತ್ತು ಶ್ರೀ ಸುರೇಂದ್ರರವರ ಜೊತೆ ನಾನೂ ಅವರ ಮನೆಗೆ ಹೋಗಿ ಅವರ ಶ್ರೀಮತಿಯವರ ದಿವ್ಯ ನೆನಪಿಗೆ ಅರ್ಪಿತವಾಗಿದ್ದ 'ಶೋಧ' (ಐನ್‌ಸ್ಟೈನ್‌ರವರ ಸಹವರ್ತಿಯಾಗಿ ಖ್ಯಾತಿಗಳಿಸಿದ್ದ ಪೋಲಿಷ್ ವಿಜ್ಞಾನಿ ಲಿಯೊಪಾಲ್ಡ್ ಇನ್‌ಫೆಲ್ಡ್‌ರ 'ಕ್ವೆಸ್ಟ್' ಎಂಬ ಆತ್ಮಕಥೆಯ ಕನ್ನಡಾನುವಾದ) ಎಂಬ ಕೃತಿಯ ಕರಡು ಪ್ರತಿಯನ್ನು ತೋರಿಸಿ ಇನ್ನೆರಡು ವಾರಗಳಲ್ಲಿ ಮುದ್ರಿತ ಕೃತಿ ಹೊರಬರುವುದೆಂದು ತಿಳಿಸಿದಾಗ, ಸಂತಸದ ಜೊತೆಗೆ ತಾವು ಅಲ್ಲಿಯ ತನಕ ಉಳಿಯಲಾರೆನೇನೋ ಎಂಬ ನೋವನ್ನು ವ್ಯಕ್ತಪಡಿಸಿದ್ದರು. ಸಹಿಸಲಾಗದಂಥ ಯಾತನೆ ಅನುಭವಿಸುತ್ತಿದ್ದರೂ, ನಮ್ಮ ಮನೆಯವರೆಲ್ಲರ ಆರೋಗ್ಯದ ಬಗೆಗೆ ವಿಚಾರಿಸಿದರು. ತಾವು ಇನ್ನೆಂದಿಗೂ ಶಾಂತಿ ಸಮೈಕ್ಯತಾ ಸಂಘಟನೆಯಲ್ಲಿ ಅಧ್ಯಕ್ಷರಾಗಿ ಭಾಗವಹಿಸಲಾಗದ ವಿಷಯವನ್ನು ಪ್ರಕಟಪಡಿಸಬೇಕೆಂದು ಶ್ರೀ ಸುರೇಂದ್ರರವರಿಗೆ ಒತ್ತಿ ಒತ್ತಿ ಹೇಳಿದುದು ಅವರ ಸಾಮಾಜಿಕ ಕಳಕಳಿಗೆ ಸಾಕ್ಷಿ ಎನ್ನುವಂತಿದ್ದಿತು. ಅಂಥ ಮಹಾನ್ ವ್ಯಕ್ತಿ ಇಂದು ನಮ್ಮೊಡನಿರದಿದ್ದರೂ ಅವರ ಆದರ್ಶ ನಮಗೆಲ್ಲ ದಾರಿದೀಪವಾಗಿರಲೆಂದು ಹಾರೈಸಬಹುದಾಗಿದೆ.

*– ಕೆ. ಎಲ್. ಗೋಪಾಲಕೃಷ್ಣ ರಾವ್*

# ಹಿರಿಯ ಚೇತನಕ್ಕೆ ವಿದಾಯ

ನಮ್ಮ ರಾಜ್ಯ ಶಾಂತಿ ಸಂಘಟನೆಯ ಅಧ್ಯಕ್ಷರಾಗಿದ್ದ ಎಂ. ಎ. ಸೇತುರಾವ್ ಅವರು ಕಳೆದ ಜೂನ್ ೨೫ರಂದು ತೀರಿಕೊಂಡ ಸಂದರ್ಭದಲ್ಲಿ ಕೆಂಪು ಹೂಗಳನ್ನು ಸಮರ್ಪಿಸಿ ನಮನಗಳನ್ನು ಸಲ್ಲಿಸುವಾಗ ಒಂದು ರೀತಿಯ ಪಾಪಪ್ರಜ್ಞೆ ನನ್ನನ್ನು ಕಾಡುತ್ತಿತ್ತು. ಕಾರಣವಿಷ್ಟೆ: ೧೯೮೧ರಲ್ಲಿ ಅವರು ಶಾಂತಿ ಸಂಘಟನೆಯ ಅಧ್ಯಕ್ಷ ಸ್ಥಾನವನ್ನು ವಹಿಸಿಕೊಂಡ ದಿನಗಳಲ್ಲಿ ಚಳುವಳಿಯಲ್ಲಿದ್ದ ಕಾವು, ತೀವ್ರತೆ ಇತ್ತೀಚೆಗೆ ಮಂಕಾಗಿದೆ. ಆ ಬಗ್ಗೆ ಅವರಿಗಿದ್ದ ಆತಂಕ, ವ್ಯಾಕುಲತೆ ಈಗಲೂ ನನ್ನನ್ನು ಬಾಧಿಸುತ್ತಿವೆ.

ಎರಡು ದಶಕಗಳ ಸಹಯೋಗದಲ್ಲಿ ಅವರ ವ್ಯಕ್ತಿತ್ವದ ಹತ್ತು ಹಲವು ಮುಖಗಳ ಪರಿಚಯ ನನಗಾಗಿದೆ. ಗಂಭೀರ ಮುದ್ರೆ, ಅವಶ್ಯವಿದ್ದಾಗ ನಗು, ಇಲ್ಲಸಲ್ಲದ ಮಾತುಗಳ ಬಗ್ಗೆ ಸಿಟ್ಟು, ಚಿಕ್ಕಪುಟ್ಟ ಸಭೆಗಳಾಗಲಿ ಜಿಲ್ಲಾ ಅಥವಾ ರಾಜ್ಯ ಮಟ್ಟದ ಸಮ್ಮೇಳನಗಳಾಗಲಿ ಕ್ರಮಬದ್ಧವಾದ ತಯಾರಿ, ಆ ನಿಟ್ಟಿನಲ್ಲಿ ಅವರು ನೀಡುತ್ತಿದ್ದ ಸಲಹೆ ಸೂಚನೆಗಳು – ಇವುಗಳೆಲ್ಲವೂ ಈಗ ನನ್ನ ಪಾಲಿಗಿಲ್ಲ. ಅಂತೆಯೇ ಹಲವಾರು ಮಿತ್ರರು, ಶಿಷ್ಯವರ್ಗ, ಸಂಘ ಸಂಸ್ಥೆಗಳ ಪಾಡು.

ಪರಿಚಯವಾದ ಮೊದಮೊದಲು ನನ್ನ ಮನಸ್ಸಿನಲ್ಲಿ ಸೇತುರಾಯರು ಸಂಘಟನೆಯ ಅಧ್ಯಕ್ಷರು, ಸೆಂಟ್ರಲ್ ಕಾಲೇಜಿನಲ್ಲಿ ರಸಾಯನ ಶಾಸ್ತ್ರದ ಪ್ರೊಫೆಸರ್ ಆಗಿದ್ದವರು ಎಂಬ ಸೀಮಿತ ಅರಿವು. ಅವರ ಸಂಘಟನಾ ಸಾಮರ್ಥ್ಯ, ಬಹುಮುಖ ಪ್ರತಿಭೆ, ಶಾಂತಿ ಚಳುವಳಿಯ ಬಗ್ಗೆ ಇದ್ದ ಅಪಾರ ತಿಳುವಳಿಕೆ, ವೈಜ್ಞಾನಿಕ ಸಮಾಜವಾದದ ಆಳವಾದ ಅಧ್ಯಯನ, ಅನೇಕ ಗಣ್ಯರು ಅವರ ಬಗ್ಗೆ ತೋರುತ್ತಿದ್ದ ಪ್ರೀತಿ ಗೌರವ ಎಲ್ಲವೂ ನಂತರದ ದಿನಗಳಲ್ಲಿ ನನ್ನ ಅನುಭವಕ್ಕೆ ಬಂದು ವಿಸ್ಮಿತನಾಗಿದ್ದೆ.

ಈ ಮಾತುಗಳು ನನ್ನನ್ನು ೧೯೮೦ರ ದಶಕದಲ್ಲಿ 'ಸರ್ಕಲ್ ಫಾರ್ ದಿ ಸ್ಟಡಿ ಆಫ್ ಡಯಲೆಕ್ಟಿಕಲ್ ಮೆಟೀರಿಯಲಿಸಂ' ಎಂಬ ವೇದಿಕೆಯ ಆಶ್ರಯದಲ್ಲಿ ಜರುಗುತ್ತಿದ್ದ ಬಿರುಸಿನ ಚಟುವಟಿಕೆಯ ದಿವಸಗಳಿಗೆ ಕೊಂಡೊಯ್ಯುತ್ತವೆ. ಡಾ॥ ಜಿ. ಆರ್., ಡಾ॥ ಸಂಜಯ್ ಬಿಸ್ವಾಸ್, ಸೇತುರಾಯರು ಮತ್ತಿತರ ಸಮಾನ ಮನಸ್ಕ ಗೆಳೆಯರು ರೂಪಿಸಿದ್ದ ವೇದಿಕೆ ಅದು. ಅಲ್ಲಿನ ಸಮಕಾಲೀನ ಹಾಗೂ ಸೈದ್ಧಾಂತಿಕ ವಿಷಯಗಳ ಬಗೆಗಿನ ಚರ್ಚೆಗಳು, ಉಪನ್ಯಾಸಗಳು ನನ್ನಂಥ ಅನೇಕರನ್ನು ಚಿಂತನೆಗೆ ಹಚ್ಚಿದ್ದವು. ಈಗಲೂ ನೆನಪಿದೆ, ಅವುಗಳಲ್ಲಿ ಸೇತುರಾಯರು ಮಂಡಿಸಿದ ವಿಷಯಗಳು, ನೀಡಿದ ಉಪನ್ಯಾಸಗಳು ಪ್ರಬುದ್ಧ ಪಾಂಡಿತ್ಯಪೂರ್ಣ. ರಾಷ್ಟ್ರ ಹಾಗೂ ಜಾಗತಿಕ ಮಟ್ಟದಲ್ಲಿ ಯಾವುದೇ ಮನುಕುಲ ವಿರೋಧಿ ಘಟನೆ, ಬೆಳವಣಿಗೆಗಳು ಜರುಗಿದರೂ ಮರುಕ್ಷಣವೇ ಶಾಂತಿ ಸಂಘಟನೆಯು ಸಭೆ ಮೆರವಣಿಗೆಗಳ ಮೂಲಕ ತಡಮಾಡದೇ ಪ್ರತಿಕ್ರಿಯಿಸಬೇಕೆಂದು ಆಗ್ರಹಪಡಿಸಿ ಎಲ್ಲ ಕಾರ್ಯಕ್ರಮಗಳಲ್ಲಿಯೂ ಸಾಮಾನ್ಯ ಕಾರ್ಯಕರ್ತನಂತೆ ಭಾಗವಹಿಸುತ್ತಿದ್ದ ಸೇತುರಾಯರು ಎಲ್ಲ ಅರ್ಥದಲ್ಲಿಯೂ ಕ್ರಿಯಾಶೀಲ ಅಧ್ಯಕ್ಷರಾಗಿದ್ದವರು. ಕರಪತ್ರಗಳನ್ನು ಅವರೇ ಬರೆದುಕೊಟ್ಟ ಸಂದರ್ಭಗಳು ಅನೇಕ. ನನ್ನ ಕಾರ್ಯವಿಧಾನದಲ್ಲಿ ಲೋಪದೋಷಗಳು ಕಂಡುಬಂದಾಗ ತರಾಟೆಗೆ ತೆಗೆದುಕೊಂಡದ್ದೂ ಉಂಟು. ಬೆನ್ನು ತಟ್ಟಿಸಿಕೊಂಡಿದ್ದು ಒಮ್ಮೊಮ್ಮೆ. ಆದರೆ ಅನುಭವ ? ಅಪಾರ.

ವಿಜ್ಞಾನಿಗಳು ಸಾಮಾಜಿಕ ಆಗುಹೋಗುಗಳಿಂದ ದೂರವಿರುತ್ತಾರೆ ಎಂಬ ಮಾತೊಂದಿದೆ. ಆದರೆ ಐನ್‌ಸ್ಟೈನ್, ಜೋಲಿಯೊ ಕ್ಯೂರಿ, ಜೆ.ಡಿ. ಬರ್ನಾಲ್ ಮುಂತಾದ ಖ್ಯಾತ ವಿಜ್ಞಾನಿಗಳು ಸಾಮಾಜಿಕ ಮತ್ತು ಮಾನವೀಯ ಕಳಕಳಿಗಳಿಗೆ ಸ್ಪಂದಿಸಿ ಆ ಮಾತಿಗೆ ಅಪವಾದವೆನಿಸಿದ್ದಾರೆ. ಸೇತುರಾಯರು ಅದೇ ಹಾದಿಯಲ್ಲಿ ಹೆಜ್ಜೆ ಇಟ್ಟವರು. ರಸಾಯನಶಾಸ್ತ್ರ ಪಾಠ ಮಾಡುವ ಹೊತ್ತಿನಲ್ಲಿಯೇ ಮಾರ್ಕ್ಸ್‌ವಾದದ ಆಳವಾದ ಅಧ್ಯಯನ ಮತ್ತು ಜನಪರ ಚಳುವಳಿಗಳಲ್ಲಿ ತೊಡಗಿಕೊಂಡವರು. ರಸಾಯನಶಾಸ್ತ್ರಕ್ಕೂ ಪ್ರಗತಿಪರ ಚಿಂತನೆಗೂ ಇರುವ ಈ 'ನಿಗೂಢ ನಂಟು' ಇಂದಿಗೂ ನನ್ನ ಮಟ್ಟಿಗೆ ಒಂದು ಒಗಟಾಗಿಯೇ ಉಳಿದಿದೆ.



ಚೆಕೋಸ್ಲೋವಾಕಿಯಾದಲ್ಲಿ ೧೯೮೫ರಲ್ಲಿ ಜರುಗಿದ ವಿಶ್ವಶಾಂತಿ ಸಮ್ಮೇಳನದಲ್ಲಿ ಭಾಗವಹಿಸಿ ಬಂದ ನಂತರ ಕನ್ನಡ ಪ್ರಭ ಭಾನುವಾರದ ಪುರವಣಿಯಲ್ಲಿ ಪರಮಾಣು ಯುದ್ಧದ ಭೀಕರತೆಯ ಕುರಿತು ಅವರು ಬರೆದ ಗಂಗೆ ಹರಿದಾಳು ಹಿಮಾಲಯ ಹರಿದೀತು ಎಂಬ ಅಗ್ರ ಲೇಖನ ಕನ್ನಡದಲ್ಲಿನ ಯುದ್ಧ ವಿರೋಧಿ ಬರಹಗಳಲ್ಲಿ ಒಂದು ವಿಶಿಷ್ಟ ದಾಖಲೆ. ವೈಜ್ಞಾನಿಕ ಮನೋಧರ್ಮ, ವೈಚಾರಿಕತೆ ಮತ್ತು ಪ್ರಗತಿಪರ ಚಿಂತನೆ ಅವರ ಬದುಕಿನ ಮೂಲ ಪ್ರೇರಣೆಗಳು. ಈ ಪ್ರೇರಣೆಗಳಿಂದಲೇ ಸಾಕ್ಷರತಾ ಆಂದೋಲನ, ಪರಿಸರ ಸಂರಕ್ಷಣೆ, ಶಾಂತಿ ಚಳುವಳಿಯಂತಹ ಹಲವಾರು ಸಂಘಟನೆಗಳಲ್ಲಿ ಅವರು ಸಕ್ರಿಯರಾಗಿ ತೊಡಗಿಕೊಳ್ಳಲು ಮುಂದಾದದ್ದು.

ಅವರು ನಿಧನರಾದ ಮೂರು ದಿವಸಗಳ ಮುನ್ನ ಗೆಳೆಯರಾದ ರಾಜಾರಾಮ್ ಮತ್ತು ಗೋಪಾಲಕೃಷ್ಣ ರಾವ್ ಅವರೊಡನೆ ನೋಡಲು ಹೋಗಿದ್ದೆ. ಅದೇ ಆತ್ಮೀಯತೆ, ಅದೇ ಬೆಚ್ಚಗಿನ ಮಾತುಗಳು. "I want some human touch. ಬನ್ನಿ ಪಕ್ಕದಲ್ಲಿ ಕೂಡಿ'' ಎಂದು ಮೈದಡವಿದ್ದರು. ಆ "human touch", ಆ ಮಾನವೀಯ ಸಂಬಂಧಗಳೇ ಅವರ ವ್ಯಕ್ತಿತ್ವದ ಮೆರುಗು. ಸೇತುರಾಯರ ಬಾಳ್ವೆ ತುಂಬು ಬಾಳ್ವೆ. ಈ ಹಿರಿಯ ಜೀವಕ್ಕೆ ವಿದಾಯ ಹೇಳುವುದು ಕಷ್ಟದ ಕೆಲಸ.

- ಎಸ್. ಸುರೇಂದ್ರ

# ನಮ್ಮ ತಂದೆಯವರನ್ನು ನೆನಸಿಕೊಂಡು...

ನಮ್ಮ ತಂದೆ ಪ್ರೊ॥ ಎಂ. ಎ. ಸೇತುರಾವ್ ಅವರ ಬಗ್ಗೆ ನನ್ನ ಹಿನ್ನೆನಪುಗಳ ಸುರುಳಿಯನ್ನು ಬಿಚ್ಚುತ್ತಾ ಹೋದಾಗ, ಅವರ ಬಹುಮುಖ ವ್ಯಕ್ತಿತ್ವದ ಹಲವಾರು ಚಿತ್ರಗಳು ನೆನಪಿನ ಪರದೆಯ ಮೇಲೆ ಒಂದೊಂದಾಗಿ ಮೂಡುತ್ತವೆ.

ಒಮ್ಮೆ ಅವರು ಸ್ವಾತಂತ್ರ್ಯ ಚಳುವಳಿಯ ಹೋರಾಟಗಾರರಾಗಿ ಕಂಡುಬಂದರೆ ಮತ್ತೊಮ್ಮೆ ಕರ್ನಾಟಕದಾದ್ಯಂತ ವಿಜ್ಞಾನವನ್ನು ಜನಪ್ರಿಯಗೊಳಿಸಿದ ವಿಜ್ಞಾನ ಪ್ರಚಾರಕ ರಾಗುತ್ತಾರೆ. ಅವರು ಒಂದೆಡೆ ತಮ್ಮ ಸಹೋದ್ಯೋಗಿಗಳ ಹಕ್ಕಿಗಾಗಿ ಹೋರಾಡಿದ ನಿಸ್ವಾರ್ಥ ಅಧ್ಯಾಪಕ. ಇನ್ನೊಂದೆಡೆ, ನಾಟಕ ಹಾಗೂ ಸಂಗೀತದ ಸದಭಿರುಚಿಯಿದ್ದ ಕಲಾರಾಧಕ. ಇಂಥಹ ಧೀಮಂತ ವ್ಯಕ್ತಿಯ ಬಗ್ಗೆ ಒಂದೆರಡು ಪುಟದಲ್ಲಿ ಬರೆದು ಮುಗಿಸುವುದು ಒಂದು ಭಗೀರಥ ಪ್ರಯತ್ನವೇ.

ನನ್ನ ಬಾಲ್ಯದ ದಿನಗಳ ಹಾದಿಯಲ್ಲಿ ನಡೆದಾಗ, ನಮ್ಮ ತಂದೆ ತಾಯಿಯರಿಂದ ಕೇಳಿದ ಸ್ವಾತಂತ್ರ್ಯ ಚಳುವಳಿಯ ರೋಮಾಂಚಕಾರಿ ಕತೆಗಳು ಮೊದಲು ನೆನಪಿಗೆ ಬರುತ್ತವೆ. ಅಂದಿನ ದಿನಗಳಲ್ಲಿ ಅನೇಕ ಸ್ವಾತಂತ್ರ್ಯ ಹೋರಾಟಗಾರರು ನಮ್ಮ ಮನೆಗೆ ಆಗಿಂದಾಗ್ಗೆ ಬಂದಿರುತ್ತಿದ್ದರು. ಇವರಿಂದಲೂ ಸಹ ಸ್ವಾತಂತ್ರ್ಯ ಚಳುವಳಿಯ ಸಾಹಸಕಾರಿ ಘಟನೆಗಳ ಬಗ್ಗೆ ಮತ್ತೆ ಮತ್ತೆ ಕೇಳಿದ್ದೆವು. ಇವು ನಮ್ಮ ಬಾಲ್ಯದ ಒಂದು ಭಾಗವೇ ಆಗಿದೆ. ನಮಗೆ ಸ್ವಾತಂತ್ರ್ಯ ದೊರೆತ ನಂತರ ನಮ್ಮ ತಂದೆಯವರು ಯಾವ ಫಲಾಪೇಕ್ಷೆ ಇಟ್ಟುಕೊಳ್ಳದೆ, ರಾಜಕೀಯದಿಂದ ದೂರ ಸರಿದರು. ಆದರೆ ಅವರ ಸಮಾಜ ಸೇವೆ ಚಟುವಟಿಕೆಗಳು ಮುಂದುವರಿದಿದ್ದವು. ಒಮ್ಮೆ, ಮಿಲ್ ಕೆಲಸಗಾರರ ಮುಷ್ಕರದ ಸಮಯದಲ್ಲಿ ಪೊಲೀಸ್ ಲಾಟಿ ಚಾರ್ಜಿನಿಂದ ಒಬ್ಬ ಕೆಲಸಗಾರನ ಕಿವಿಯೇ ಹರಿದುಹೋಗಿತ್ತು. ಆತನಿಗೆ ನಮ್ಮ ಮನೆಯಲ್ಲಿಯೇ ಪ್ರಥಮ ಚಿಕಿತ್ಸೆ ನೀಡಿ ನಂತರ ಆಸ್ಪತ್ರೆಗೆ ಕರೆದೊಯ್ಯಲಾಗಿತ್ತು. ಒಂದು ಸಂದರ್ಭ ನನಗೆ ಚೆನ್ನಾಗಿ ನೆನಪಿನಲ್ಲಿದೆ. ''ಮಿಲ್ಕ್ ಕಾಲೋನಿ''ಯಲ್ಲಿ ವಾಸಿಸುತ್ತಿದ್ದ ಕೆಲಸಗಾರರಿಗೆ ಅವರುಗಳ ಮನೆ ಖಾಲಿ ಮಾಡಲು ಅತ್ಯಲ್ಪ ಕಾಲದ ನೋಟಿಸ್ ಕೊಡಲಾಗಿತ್ತು. ಅಲ್ಲಿನ ಜನ ದಿಕ್ಕೆಟ್ಟು ಕೂತಿದ್ದರು. ಆ ಸಮಯದಲ್ಲಿ ನಮ್ಮ ತಂದೆ ತಾಯಿ ಇವರ ಆಸರೆಯಾಗಿ ನಿಂತರು. ಇಂದಿನ ಸುಬ್ರಹ್ಮಣ್ಯನಗರ, ಮುಂಚೆ ಸರ್ವೋದಯ ನಗರವಾಗಿತ್ತು. ಇದು ಬೇಸಾಯ ಭೂಮಿಯಾಗಿತ್ತು. ಇದನ್ನು ಅಭಿವೃದ್ಧಿಗೊಳಿಸಿ 'ಮಿಲ್ಕ್ ಕಾಲೋನಿ'ಯ ಕೆಲಸಗಾರರಿಗಾಗಿ ಮನೆ ಕಟ್ಟಲು ಹಲವಾರು ಸೈಟುಗಳನ್ನಾಗಿ ಮಾಡಿದರು. ಆ ಸೈಟುಗಳ ಮೊತ್ತವನ್ನು ತಿಂಗಳಿಗೆ ಸುಮಾರು ರೂ. ೫ ಅಥವಾ ರೂ. ೧೦ರ ಹಾಗೆ, ಅದೂ ಕಂತುಗಳಲ್ಲಿ ತೆಗೆದುಕೊಳ್ಳಲಾಗಿತ್ತು.

ಇನ್ನು ನನ್ನ ವೈಯಕ್ತಿಕ ಹಿನ್ನೆನಪುಗಳು. ನನ್ನ ಬಾಲ್ಯದ ಮೊದಲ ೫ ವರ್ಷಗಳು ಬೆಂಗಳೂರಿನ ಶ್ರೀರಾಮಪುರದಲ್ಲಿದ್ದ ನಮ್ಮ ತಾತನ ಮನೆಯಲ್ಲಿ ಕಳೆದವು. ನನ್ನ ತಾತ ಶ್ರೀ ಶ್ರೀಕಂಠಯ್ಯನವರು ನಾನು ಹುಟ್ಟುವ ಮೊದಲೇ ತೀರಿಕೊಂಡಿದ್ದರಿಂದ ಕುಟುಂಬದ ಜವಾಬ್ದಾರಿ ನನ್ನ ತಂದೆಯವರ ಮೇಲಿತ್ತು. ಮಲ್ಲೇಶ್ವರದಲ್ಲಿರುವ 'ಕ್ಲೂನಿ ಕಾನ್ವೆಂಟ್'ನ ನರ್ಸರಿ ವಿಭಾಗದಲ್ಲಿ ಆಗ ನಾನು ವಿದ್ಯಾರ್ಥಿಯಾಗಿದ್ದೆ. ಸಂಜೆ, ಶಾಲೆಯಿಂದ ಮನೆಗೆ ಬಂದಾಗ, ಮನೆ ತುಂಬ ಜನ, ಹುಡುಗಿಯರ ಗುಂಪು ಗುಂಪೇ ಇರುತ್ತಿತ್ತು. ಶಾಸ್ತ್ರೀಯ ಸಂಗೀತ

ಅಥವಾ ಶಾಸ್ತ್ರೀಯ ನೃತ್ಯದ ಅಭ್ಯಾಸ ಸಾಂಗವಾಗಿ ನಡೆದಿರುತ್ತಿತ್ತು. ಕಾರಣ, ನನ್ನ ತಾಯಿ ಕುಂತಳ ಸೇತುರಾವ್ ಅವರು 'ಭಾರತೀಯ ಕಲಾಕ್ಷೇತ್ರ' ಎಂಬ ಸಂಘವನ್ನು ಸ್ಥಾಪಿಸಿ ಹಲವಾರು ಸಾಂಸ್ಕೃತಿಕ ಚಟುವಟಿಕೆಗಳಿಗೆ ಕಾರಣರಾಗಿದ್ದರು. ಬೆಂಗಳೂರು ಆಕಾಶವಾಣಿಯಲ್ಲಿ ನಮ್ಮ ಕಾರ್ಯಕ್ರಮಗಳು ಪದೇಪದೇ ನಡೆಯುತ್ತಿದ್ದವು. ಪ್ರತಿದಿನ, ಈ ಚಟುವಟಿಕೆಗಳಿದ್ದರೂ ಸಹ ನಾನು ನಮ್ಮ ತಂದೆ ಸೆಂಟ್ರಲ್ ಕಾಲೇಜಿನಿಂದ ಸಂಜೆ ಮನೆಗೆ ಬರುವ ವೇಳೆಗೆ ಮನೆಯಾಚೆಯ ಕಲ್ಲು ಬೆಂಚಿನ ಮೇಲೆ ನಿಂತು ಅವರಿಗಾಗಿ ಕಾಯುತ್ತಿದ್ದೆ. ಬಸ್‌ಸ್ಟಾಪ್‌ನಿಂದ ನಮ್ಮ ಮನೆ ಸುಮಾರು ೫೦ ಮೀ. ದೂರದಲ್ಲಿತ್ತು. ಅಲ್ಲಿಂದ ಇವರು ನಡೆದು ಬರುವಾಗ, ನಮ್ಮ ಅಕ್ಕಪಕ್ಕದ ಮನೆಯವರು, ಇವರ ನಡುಗೆಯಲ್ಲಿದ್ದ ಗಾಂಭೀರ್ಯವನ್ನು ಬಹುವಾಗಿ ಮೆಚ್ಚುತ್ತಿದ್ದುದು ನಾನು ಮರೆಯಲಾರೆ. ರಾತ್ರಿ ಮಲಗುವ ವೇಳೆಯಲ್ಲಿ ಹೆಚ್ಚಾಗಿ ರಷ್ಯಾದ ಜಾನಪದ ಕತೆಗಳನ್ನೂ, ಈಸೋಪನ ನೀತಿ ಕತೆಗಳನ್ನೂ ಓದಿ ಹೇಳುತ್ತಿದ್ದರು. ನಾವು ಸ್ವಲ್ಪ ದೊಡ್ಡವರಾದ ಮೇಲೆ ಷರ್ಲಾಕ್ ಹೋಮ್ಸ್‌ನ ಪತ್ತೆದಾರಿ ಕಾದಂಬರಿಗಳನ್ನು ನಮಗಾಗಿ ಓದುತ್ತಿದ್ದರು. ನಾಮ್ಮ ಬಾಲ್ಯದಿಂದಲೂ ಮನೆಯ ಕಿರಿಯವರೆಲ್ಲರಿಗೂ ಓದಿನ ಆಸಕ್ತಿ. ಎ. ಆರ್. ಕೃಷ್ಣಶಾಸ್ತ್ರಿ ಅವರ 'ಮಹಾಭಾರತ' ಮತ್ತು 'ವಾಲ್ಮೀಕಿ ರಾಮಾಯಣ' ನಮ್ಮ ಮನಸ್ಸಿನ ಮೇಲೆ ಅಗಾಧ ಪರಿಣಾಮ ಉಂಟುಮಾಡಿದ್ದವು. ಇನ್ನೂ ಹಸಿರಾಗಿ ಉಳಿದಿರುವ ನೆನಪೆಂದರೆ, ನಮ್ಮ ತಂದೆ ಮನೆಯಲ್ಲಿ ವಿದ್ಯಾರ್ಥಿಗಳ ಉತ್ತರ ಪತ್ರಿಕೆಯ ಮೌಲ್ಯಮಾಪನ ಮಾಡುತ್ತಿದ್ದ ಹಾಗೂ ಪರೀಕ್ಷೆಗೆ ಪ್ರಶ್ನೆಪತ್ರಿಕೆಯನ್ನು ಸಿದ್ಧಪಡಿಸುತ್ತಿದ್ದ ಸಂದರ್ಭ. ಆಗ ಅವರ ಕೋಣೆಯ ಸುತ್ತಮುತ್ತ 'ಕರ್ಫ್ಯೂ' ಜಾರಿಯಲ್ಲಿರುತ್ತಿತ್ತು. ಕೆಲಸವೆಲ್ಲಾ ಪೂರೈಸಿದ ನಂತರ ಬಟ್ಟೆಯ ಚೀಲಗಳಲ್ಲಿ ಉತ್ತರ ಪತ್ರಿಕೆಗಳನ್ನು ಹಾಕಿ ಅರಗಿನ ಮುದ್ರೆ ಹಾಕಿದ ನಂತರವೇ ನಮಗೆ ಒಳಗೆ ಪ್ರವೇಶ. ಯಾವ ಜವಾಬ್ದಾರಿಯನ್ನೇ ಆಗಲಿ ನಿಷ್ಠೆಯಿಂದ, ನ್ಯಾಯಯುತವಾಗಿ ನಿಸ್ವಾರ್ಥತೆಯಿಂದ ನಿರ್ವಹಿಸುತ್ತಿದ್ದುದು ಅವರ ಜೀವನದಲ್ಲಿ ಹಾಸುಹೊಕ್ಕಾಗಿತ್ತು. ನಮ್ಮ ಜೀವನದ ವಿವಿಧ ಹಂತಗಳಲ್ಲಿ ಈ ಮೌಲ್ಯಗಳು ಮಾರ್ಗದರ್ಶಿಯಾಗಿದ್ದವು.



*ನಾಟಕದಲ್ಲಿ ಪಾತ್ರ*

ಸೆಂಟ್ರಲ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಕಾಲದಲ್ಲಿ ಸಮಾನ ಮನಸ್ಕ ಸ್ನೇಹಿತರೊಡನೆ ನಮ್ಮ ತಂದೆ 'ಸ್ಟಡಿ ಸರ್ಕಲ್' ಪ್ರಾರಂಭಿಸಿದ್ದರು. ಭಾನುವಾರದ ದಿನ ತಲಾ ಒಬ್ಬೊಬ್ಬರ ಮನೆಯಲ್ಲಿ ಸೇರಿ ಜಾಗತಿಕ ವಿದ್ಯಮಾನಗಳು ಮತ್ತು ವೈಜ್ಞಾನಿಕ ವಿಚಾರಗಳ ಬಗ್ಗೆ ಗಾಢವಾದ ಚರ್ಚೆ ನಡೆಸುತ್ತಿದ್ದರು. ನನಗೆ ಜ್ಞಾಪಕವಿದ್ದಂತೆ ಈ ಗುಂಪಿನಲ್ಲಿ ಪ್ರೊ|| ಸತೀಶ್ ಧಾವನ್, ಪ್ರೊ|| ಜೆ. ಆರ್. ಲಕ್ಷ್ಮಣರಾವ್, ಪ್ರೊ|| ಎ. ಆರ್. ವಾಸುದೇವ ಮೂರ್ತಿ, ಪ್ರೊ|| ಕೆ. ಶ್ರೀನಿವಾಸನ್, ಪ್ರೊ|| ಅಮೂಲ್ಯ ರೆಡ್ಡಿ ಮತ್ತು ಪ್ರೊ|| ಶೇಷಾದ್ರಿ ಇದ್ದರು.

ಭಾನುವಾರದ ಇನ್ನೊಂದು ಮಾಮೂಲೆಂದರೆ ಚಿಕ್ಕಪೇಟೆ ಬಳೇಪೇಟೆಗೆ ಹೋಗಿ ರಿಯಾಯಿತಿಯಲ್ಲಿ ಸಿಗುತ್ತಿದ್ದ 'ಸೈನ್ಸ್ ನ್ಯೂಸ್' ಮತ್ತಿತರ ಹಳೆಯ ಪುಸ್ತಕಗಳ ಖರೀದಿ.

ಇವರ ವ್ಯಕ್ತಿತ್ವದ ಭಿನ್ನವಾದ ಒಂದು ಮುಖ್ಯ ಅಂಶವೆಂದರೆ ಇವರ ಕಲಾಭಿರುಚಿ. ಈ ವಿಷಯ ನಮ್ಮ ತಂದೆಯ ಸ್ನೇಹಿತರನೇಕರಿಗೆ ತಿಳಿದಿಲ್ಲವೆನಿಸುತ್ತದೆ. ನಾಟಕ ಹಾಗೂ ಶಾಸ್ತ್ರೀಯ ಸಂಗೀತದಲ್ಲಿ ನಮ್ಮ ತಂದೆಯವರಿಗೆ ಅಪಾರ ಒಲವು. ಇವರ ಬೆಂಬಲ, ಉತ್ತೇಜನ ನಮ್ಮ ತಾಯಿಯವರ ಅನೇಕ ಸಾಂಸ್ಕೃತಿಕ ಚಟುವಟಿಕೆಗಳಿಗೆ ಜೀವ ತುಂಬಿದ್ದವು. ಅವರಿಗೆ ಪ್ರಿಯವಾಗಿದ್ದ ಈ ಹವ್ಯಾಸ ನಾವು ತುಮಕೂರಿನಲ್ಲಿದ್ದಾಗ ಸಂಪೂರ್ಣವಾಗಿ ಅರಳಲು ಸಾಧ್ಯವಾಯಿತು. ಅಂದಿನ ತುಮಕೂರು ಸದ್ದುಗದ್ದಲವಿಲ್ಲದ ಸಣ್ಣ ಊರು. ನಮ್ಮ ಮನೆಯಿಂದ ಕೇವಲ ೧೦೦ ಮೀ. ದೂರದಲ್ಲಿದ್ದ ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜಿನಲ್ಲಿ ನಮ್ಮ ತಂದೆ ಅಧ್ಯಾಪಕರು. ಗಡಿಬಿಡಿಯಿಲ್ಲದ ದಿನಚರಿ, ಒಳ್ಳೆಯ ಹವಾಮಾನ ಹಾಗೂ ಸಾಕಷ್ಟು ಪುರುಸೊತ್ತು, ಇವರ ಈ ಹವ್ಯಾಸಕ್ಕೆ ಸಾಕಷ್ಟು ಅವಕಾಶ ಒದಗಿಸಿಕೊಟ್ಟಿದ್ದವು.

ತುಮಕೂರಿನ ಕಲಾವಿದರಿಗೆ, ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ತಮ್ಮ ತಮ್ಮ ಪ್ರತಿಭೆಯನ್ನು ಅರಳಿಸಿಕೊಳ್ಳಲು ಕಲಾ ಪ್ರದರ್ಶನ ಅವಕಾಶ ನೀಡುವ ಉದ್ದೇಶದಿಂದ ನಮ್ಮ ತಂದೆ ತಾಯಿ 'ವೀಣಾ ಕಲಾನಿಕೇತನ' ಎಂಬ ಸಂಘವನ್ನು ಸ್ಥಾಪಿಸಿದರು. ಈ ಕಲಾಸಂಘ ನೃತ್ಯ, ನಾಟಕ, ಸಂಗೀತದ ಮೂಲಕ ತುಮಕೂರಿನ ಕಲಾರಸಿಕರಿಗೆ ಸುಮಾರು ಏಳೆಂಟು ವರ್ಷಗಳ ಕಾಲ ಮುದ ನೀಡಿತು. ನಾಟಕಗಳು ಹೆಚ್ಚಾಗಿ ಶ್ರೀ ಟಿ. ಪಿ. ಕೈಲಾಸಂ, ಪರ್ವತವಾಣಿ, ದಾಶರಥಿ ದೀಕ್ಷಿತ್, ಕುವೆಂಪು ಹಾಗೂ ಎ. ಎಸ್. ಮೂರ್ತಿಯವರದ್ದಾಗಿರುತ್ತಿದ್ದವು. ಶ್ರೀ ಟಿ. ಪಿ. ಕೈಲಾಸಂ ಅವರ 'ಹೋಂರೂಲ್', 'ಬಂಡ್ವಾಳವಿಲ್ಲದ ಬಡಾಯಿ', 'ಸಾತು ತೌರ್ಮನೆ ಪಾತು ತೌರ್ಮನೆ' ನಾಟಕಗಳಲ್ಲಿ ಮುಖ್ಯಪಾತ್ರಧಾರಿಗಳಾಗಿ ನಮ್ಮ ತಂದೆ ತಾಯಿ ಭಾಗವಹಿಸಿದ್ದು ಇವತ್ತೂ ಕಣ್ಣಿಗೆ ಕಟ್ಟಿದಂತಿದೆ. ರಂಗಮಂಚದ ಮೇಲೆ ಪ್ರದರ್ಶನ ನೀಡುವ ಮೊದಲು ನಾಟಕ, ಸಂಗೀತದ ಅಭ್ಯಾಸ ನಮ್ಮ ಮನೆಯಲ್ಲಿ ತಿಂಗಳುಗಟ್ಟಲೆ ನಡೆಯುತ್ತಿತ್ತು. ವಿದ್ಯಾರ್ಥಿಗಳೂ, ಅಧ್ಯಾಪಕರೂ ಮಿಕ್ಕ ಕಲಾವಿದರೂ ತಮ್ಮ ತಮ್ಮ ಕೆಲಸ ಮುಗಿಸಿಕೊಂಡು ಸಂಜೆ ನೇರವಾಗಿ ನಮ್ಮ ಮನೆಗೆ ಬರುತ್ತಿದ್ದರು. ಎಲ್ಲರಿಗೂ ಕಾಫಿ ತಿಂಡಿಯ ಸಮಾರಾಧನೆ. ನನಗಿನ್ನೂ ೭-೮ ವರ್ಷವಿರಬೇಕು ಅಷ್ಟೆ. ಪ್ರತಿಯೊಂದು ನಾಟಕದ ಸಂಭಾಷಣೆ ನನಗೆ ಬಾಯಿಪಾಠ. ಹೀಗಾಗಿ ಎಂದಾದರೂ ನಾಟಕದ ಒಬ್ಬ ಪಾತ್ರಧಾರಿ ಬರದಿದ್ದರೆ ಅವರ ಬದಲು ನಾನು ನಿಲ್ಲುತ್ತಿದ್ದೆ. ನಿರ್ದೇಶಕರಾಗಿ ನಮ್ಮ ತಂದೆ ಎಲ್ಲರ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರು. ಇವರ ಪ್ರೋತ್ಸಾಹದಿಂದ ತುಮಕೂರಿನ ಕಾಲೇಜು ವಿದ್ಯಾರ್ಥಿನಿಯರು ಬಹುಶಃ ಮೊದಲ ಬಾರಿಗೆ ರಂಗಮಂಚದ ಮೇಲೆ ನಾಟಕ, ಸಂಗೀತ, ನೃತ್ಯ ಪ್ರದರ್ಶನ ನೀಡಿದ್ದರು. ಕಾಲೇಜಿನ ವಿದ್ಯಾರ್ಥಿಗಳಿಗೆ ನಮ್ಮ ತಂದೆಯ ಬಗ್ಗೆ ಅಪಾರ ಗೌರವ, ಪ್ರೀತಿ. ಯಾವುದೇ ಸಮಸ್ಯೆ ಇದ್ದರೂ ಅದರ ಪರಿಹಾರಕ್ಕಾಗಿ ನಮ್ಮ ತಂದೆಯವರ ಬಳಿ, ಹಿಂಜರಿಯದೆ ಹೇಳಿಕೊಳ್ಳಬಹುದೆಂಬ ಭರವಸೆ ಅವರಿಗೆ. ಹೀಗೆಂದ ಮಾತ್ರಕ್ಕೆ ತರಗತಿಯಲ್ಲಿ ಪಾಠ ಮಾಡುವ ಶಿಸ್ತು, ನಿಯಮ ಇಲ್ಲದೇ ಇರುತ್ತಿರಲಿಲ್ಲ. ರಸಾಯನ ಶಾಸ್ತ್ರದ ಜೊತೆಗಿನ ಅವರ ಹಾಸ್ಯ ಚಟಾಕಿಗಳು ಪಾಠದಲ್ಲಿ ವಿದ್ಯಾರ್ಥಿಗಳು ಹೆಚ್ಚು ಆಸಕ್ತಿಯಿಂದ ಭಾಗವಹಿಸುವಂತೆ ಮಾಡುತ್ತಿದ್ದವು. ಎಂಥೆಂತಹ ರೌಡಿ ಹುಡುಗರೂ ಇವರ ಕ್ಲಾಸಿನಲ್ಲಿ ಸಭ್ಯರು. ನಾವು ತುಮಕೂರಿನಲ್ಲಿದ್ದಾಗ ಹೆಸರಾಂತ ಕವಿಗಳಾದ ಪು. ತಿ. ನರಸಿಂಹಾಚಾರ್ ಅವರು ಮತ್ತು ಖ್ಯಾತ ನಾಟ್ಯ ಗುರುಗಳಾದ ಶ್ರೀ ಯು. ಎಸ್. ಕೃಷ್ಣರಾವ್ ಅವರು ನಮ್ಮ ಮನೆಗೆ ಅತಿಥಿಗಳಾಗಿ ಬಂದಿದ್ದರು. ಇವರ ಗೌರವಾರ್ಥ ನಮ್ಮ ಮನೆಯಲ್ಲಿಯೇ ಶಾಸ್ತ್ರೀಯ ಸಂಗೀತದ ಕಛೇರಿ. ಆಗ ಶ್ರೀ ಪು. ತಿ. ನ. ಸ್ವತಃ ''ಗೋಕುಲ ನಿರ್ಗಮನ''ದ ಒಂದು ಗೀತೆಯನ್ನು ಹಾಡಿದ್ದದ್ದು ನನ್ನ ಮಟ್ಟಿಗೆ ಒಂದು ಸವಿ ನೆನಪು.

ಒಟ್ಟಿನಲ್ಲಿ ನಮ್ಮ ತಂದೆ ಎಲೆ ಮರೆಯ ಹೂವಾಗಿ ಇರಲು ಇಚ್ಛಿಸಿದವರು. ಅವರದು ತಾವು ಮಾಡಬೇಕಾದ ಕಾರ್ಯವನ್ನು ಫಲಾಪೇಕ್ಷೆ ಇಲ್ಲದೆ ಪೂರೈಸಿ ಈ ಯೋಜಿತ ಕಾರ್ಯ ಫಲಿಸುವ ಸುಸಮಯ ಬಂದಾಗ, ಮಿಕ್ಕವರನ್ನು ವೇದಿಕೆಯ ಮೇಲೆ ಕೂಡಿಸಿ, ತಾವು ಎಲ್ಲೋ ಮರೆಯಾಗುತ್ತಿದ್ದ ಜಾಯಮಾನ. ಅವರದೊಂದು ಅನುಕರಣೀಯ ಬದುಕು. ಅವರ ಸಾನ್ನಿಧ್ಯದಲ್ಲಿ ನಾವು ಬೆಳೆದದ್ದು ನಮ್ಮ ಸೌಭಾಗ್ಯ.

– [illegible] ವೀಣಾ ರಾವ್, ಬೆಂಗಳೂರು

---

ಸೇತುರಾವ್ ಅವರ ನಿಧನದಿಂದ 'ಸಾಮಾನ್ಯರಿಗಾಗಿ ವಿಜ್ಞಾನ' ಚಳುವಳಿಯು ಮತ್ತೊಬ್ಬ ಪ್ರಮುಖ ಕಾರ್ಯಕರ್ತರನ್ನು ಕಳೆದುಕೊಂಡಂತಾಗಿದೆ. ನನ್ನ ಅವರ ಪರಿಚಯ ಮೂರು ದಶಕಗಳದ್ದು. ಪ್ರೊ|| ಎ. ಕೆ. ಎನ್. ರೆಡ್ಡಿ ಅವರ ಸಹಯೋಗದೊಂದಿಗೆ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಮಂಡಳಿ ಮತ್ತು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಎಂಬ ಎರಡು ಸಂಸ್ಥೆಗಳು ಅಸ್ತಿತ್ವಕ್ಕೆ ಬರಲು ಅವರು ಕಾರಣರಾದರು. ಜೊತೆಗೆ, ಭಾರತ ಜ್ಞಾನ ವಿಜ್ಞಾನ ಸಮಿತಿಯ ಸಂಸ್ಥಾಪಕ ಸದಸ್ಯರಲ್ಲೊಬ್ಬರಾಗಿದ್ದರು. ಜನಸಾಮಾನ್ಯರಲ್ಲಿ ವಿಜ್ಞಾನದ ಬಗ್ಗೆ ಅರಿವು ಮತ್ತು ವೈಜ್ಞಾನಿಕ ಮನೋಭಾವ ಮೂಡಿಸುವುದಷ್ಟಕ್ಕೆ ಅವರು ತಮ್ಮ ಚಟುವಟಿಕೆಗಳನ್ನು ಸೀಮಿತಗೊಳಿಸಲಿಲ್ಲ. ಶೋಷಣೆಯ ವಿರುದ್ಧದ ಹೋರಾಟದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಅಸ್ತ್ರವಾಗಬೇಕೆಂಬ ಆಶಯ ಅವರದಾಗಿತ್ತು. ಈ ಚಟುವಟಿಕೆಗಳಲ್ಲಿನ ರಾಜಕೀಯ ಅಂಶವನ್ನು ಅವರು ಮನಗಂಡಿದ್ದರು. ಮೂಢನಂಬಿಕೆ ಮತ್ತು ಹತಾಶೆಯ ಮನೋಭಾವಗಳ ವಿರುದ್ಧದ ಸಮರಕ್ಕೆ ಅವರು ನೀಡಿರುವ ಕೊಡುಗೆ ಅಪಾರ.

– ಡಾ|| ಎಂ. ಪಿ. ಪರಮೇಶ್ವರನ್, ಕೇರಳ ಶಾಸ್ತ್ರ ಸಾಹಿತ್ಯ ಪರಿಷತ್ತು



# ಮರೆಯಲಾಗದ ಭೀಷ್ಮ ಸಾಹ್ನಿ

ಭೀಷ್ಮ ಸಾಹ್ನಿ ಪಂಜಾಬಿನ ರಾವಲ್ಪಿಂಡಿಯಲ್ಲಿ ಹುಟ್ಟಿ ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿದ ವೇಳೆಗೆ ಭಾರತದಲ್ಲಿ ವಿಭಜನೆಯ ಕರಾಳ ದಿನಗಳು – ಗಾಂಧೀಜಿಯ ಕೊಲೆ – ಹೀಗೆ ರಾಜಕೀಯ ವಿಪರೀತಗಳ ನಡುವೆ ಸ್ವಾತಂತ್ರ್ಯದ ಘೋಷಣೆ – ಆಗ ಭಾರತಕ್ಕೆ ಪಾಕಿಸ್ತಾನದಿಂದ ಓಡಿಬಂದ ಬಂಧುಗಳಲ್ಲಿ ಸಾಹ್ನಿ ಬಂಧುಗಳೂ ಇದ್ದರು. ಇಂಥ ಅನುಭವಗಳ ಮಾಲೆಯನ್ನು ಬೆಳಕಿಗೊಡ್ಡಿದ ಪ್ರಸಿದ್ಧರಲ್ಲಿ ಇವರೇ ಕೊನೆಯವರೆನ್ನುವಂತೆ ತೋರುತ್ತದೆ. ಆದರೆ ಈ ಸಂದರ್ಭದ ಸಾಹಿತಿಗಳ ಸಾಲಿನಲ್ಲಿ ಭೀಷ್ಮ ಸಾಹ್ನಿ ನಿಂತರೂ ಅದ್ವಿತೀಯರು ಎನ್ನುವಂತೆ, ಅವರ 'ತಮಸ್' ಕಾದಂಬರಿಯು ಒಂದು ಐತಿಹಾಸಿಕ ದಾಖಲೆಯಂತೆ ಗಮನ ಸೆಳೆಯುತ್ತದೆ.

ಪಂಜಾಬಿ, ಹಿಂದಿ, ಹಿಂದೂಸ್ತಾನಿ, ರಷ್ಯನ್, ಇಂಗ್ಲಿಷ್ ಭಾಷೆಗಳಲ್ಲಿ ಪ್ರಭುತ್ವವನ್ನು ಪಡೆದುಕೊಂಡು ಕೆಲವೇ ಕೃತಿಗಳಾದರೂ ಇವರು ಭಾರತೀಯ ಸಾಂಸ್ಕೃತಿಕ ಸ್ಥಿತಿಗತಿಗೆ ವಿಶೇಷ ಕಾಣಿಕೆ ಸಲ್ಲಿಸಿದವರು. ಸಿನಿಮಾ ಜಗತ್ತಿನಲ್ಲಿ ವಿಶೇಷ ಸ್ಥಾನವನ್ನು ಗಳಿಸಿಕೊಂಡಿದ್ದ ಬಲರಾಜ್ ಸಾಹ್ನಿಯವರ ತಮ್ಮ. ದೆಹಲಿ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಪ್ರೊಫೆಸರಾಗಿದ್ದವರು – ರಾಷ್ಟ್ರೀಯ ಸಂಸ್ಥೆಯಾದ ಪಿಡಬ್ಲ್ಯುಎನ (ಪ್ರಾಗ್ರೆಸಿವ್ ರೈಟರ್ಸ್ ಅಸೋಸಿಯೇಷನ್) ಕ್ರಿಯಾಶೀಲ ಸದಸ್ಯರಾಗಿದ್ದವರು.

ಇವರ ಸೃಜನಶೀಲತೆಗೆ ಮಹತ್ವವನ್ನು ತಂದಿದ್ದ ವಿಚಾರವಂತಿಕೆಯ ಜೊತೆಗೆ ಶೀಲವಂತಿಗೆ ಕೂಡ ಆದರ್ಶ ಪ್ರಾಯವಾದುದು. ಕೈಫಿ ಅಜ್ಮಿ, ಫಯಾಜ್ ಅಹಮದ್ ಫಯಾಜ್, ಇಸ್ಮತ್ ಚುಗ್ತಾಯಿ, ಅಮೃತಾ ಪ್ರೀತಮ್ ಮೊದಲಾದವರ ಸಂಗಡಿಗರಾಗಿದ್ದವರು – ಅಂದರೆ ಪಿಡಬ್ಲ್ಯುಎ ಸಂಸ್ಥೆಯಲ್ಲಿ ಯೋಗ್ಯ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದವರು. ಆಫ್ರೋ – ಏಷ್ಯನ್ ರೈಟರ್ಸ್ ಸಂಸ್ಥೆಯಲ್ಲಿ ಕೂಡ ಭಿಷಮ್‌ಜೀ ನಿರಾಡಂಬರ ವ್ಯಕ್ತಿಯಾಗಿ ದುಡಿದವರು. ಭಾರತೀಯ ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕೃತರು – 'ತಮಸ್' ಕಾದಂಬರಿಗಾಗಿ. ಇವರು ರಷ್ಯನ್ ಭಾಷೆಯಿಂದ ಸುಮಾರು ೨೦೦ ಕಥೆಗಳನ್ನು ಹಿಂದಿಗೆ ಅನುವಾದಿಸಿದ್ದಾರೆ! ಮೊದಲಿಗೆ ಸಣ್ಣ ಕತೆಗಳನ್ನು ಸ್ವತಂತ್ರವಾಗಿ ರಚಿಸುತ್ತಿದ್ದವರು. ಕಾದಂಬರಿ ಪ್ರಕಾರದಲ್ಲಿ ಇವರ ಕೃತಿಗಳು ಅಮೂಲ್ಯ ಕೃತಿಗಳಾಗಿವೆ. ಇವುಗಳ ವಿಶೇಷವೆಂದರೆ ಸಾಹಿತ್ಯವು ಶುದ್ಧ ಭಾರತೀಯ ಅನುಭವವಾಗಬೇಕೆಂದೂ ಹೊಸ ರೀತಿಯ ಚಳುವಳಿಯ ಅವಶ್ಯಕತೆಯನ್ನು ಒತ್ತಿ ಹೇಳುತ್ತಿದ್ದವರೆಂದೂ ಗುರುತಿಸಬೇಕಾಗುತ್ತದೆ.

ಪಿಡಬ್ಲ್ಯೂಎದಲ್ಲಿ ಹೆಚ್ಚಾಗಿ ಕವಿಗಳು ಭಾಗಿಗಳಾಗಿದ್ದಾಗ, ಭಿಷಮ್‌ಜೀ ಅವರ ಸೇರುವಿಕೆಗೆ ಅಂದರೆ ಕಾರ್ಯ ಚಟುವಟಿಕೆಗೆ ಅನುಕೂಲವಾಗುವಂತೆ ದುಡಿಯುತ್ತಿದ್ದರು. ಅವರಿಗೆ ಯಾರೇ ಆಗಲಿ ಸಾಹಿತಿಗಳೆಂದರೆ ಬಹಳ ಗೌರವ. ನಿರಂಜನರನ್ನು ಅವರ ಮನೆಯಲ್ಲಿ ಭೇಟಿ ಮಾಡಿ ಒಂದು ಗಂಟೆಯ ಕಾಲವಿದ್ದ ನೆನಪು ನನಗಿದೆ. ಆಗ ನಿರಂಜನರಿಗೆ ಹೊರಗೆ ಬರಲು ಸಾಧ್ಯವಿರಲಿಲ್ಲ. ಮನೆಯಲ್ಲಿಯೇ ಸ್ಟ್ರೋಕ್‌ನಿಂದ ನರಳುತ್ತಿದ್ದರು. ಅಲ್ಲಿ ಸಾಹ್ನಿಯವರ ವಿನಯತೆ ಮರೆಯಲಾಗದಂಥದು. ದೆಹಲಿಯ ಇವರ ಮನೆಯಲ್ಲಿ ಪ್ರಸನ್ನ (ಈಗ ರಂಗಾಯಣದ ನಿರ್ದೇಶಕ) ಕೆಲವು ಕಾಲ ಗೆಳೆಯನಂತೆ ಇದ್ದ ನೆನಪಾಗುತ್ತಿದೆ! ಲಂಕೇಶ್‌ರಿಗೆ ಸಾಹಿತ್ಯದ ಬದ್ಧತೆಯಲ್ಲಿ ಅನುಮಾನಗಳಿದ್ದರೂ ಇಲ್ಲಿಯ ಒಕ್ಕೂಟದ ಸಂದರ್ಭದಲ್ಲಿ ಸಾಹ್ನಿಯವರನ್ನು ಕುರಿತು ತಮ್ಮ ಪತ್ರಿಕೆಯಲ್ಲಿ ಮೆಚ್ಚಿಕೆಯನ್ನು ಬರೆದುದಲ್ಲದೆ ದೂರದರ್ಶನಕ್ಕೆ ಒಂದು ಸಂವಾದವನ್ನು ನಡೆಸಿಕೊಟ್ಟುದನ್ನು ಸಾಹ್ನಿಯವರೂ ನೆನೆಯುತ್ತಿದ್ದರು. ನಿರಂಜನರು ಪಿಡಬ್ಲ್ಯೂಎ ವಾರ್ಷಿಕ ಸಮ್ಮೇಳನಗಳಲ್ಲಿ ಪಾಲುಗೊಳ್ಳಲು ನನ್ನನ್ನು ಕಳುಹಿಸುತ್ತಿದ್ದರು. ಆಗೆಲ್ಲಾ ನಾನು ಭಿಷಮ್‌ಜೀ ಸಂಗಡಿಗನಂತೆ ಇರುತ್ತಿದ್ದೆ. ಆದುದರಿಂದ ಅವರ ವಿಶ್ವಾಸದ ಹಾಳತವನ್ನು ಚೆನ್ನಾಗಿ ಬಲ್ಲೆ. ಜಬ್ಬಲ್‌ಪುರ, ದೆಹಲಿ, ಕೊಲ್ಕತ್ತ, ಭೂಪಾಲ್ – ಹೀಗೆ ನಾಲ್ಕೈದು ಬಾರಿ ನಾನು ಅವರನ್ನು ನಮ್ಮ ಎಡಪಂಥೀಯ ಸಂಸ್ಥೆಯಾದ ಪಿಡಬ್ಲ್ಯೂಎ ಸಮ್ಮೇಳನಗಳಲ್ಲಿ ಕಂಡಿದ್ದೇನೆ, ಬಳಸಿದ್ದೇನೆ, ಕರ್ನಾಟಕದಲ್ಲಿ ಒಮ್ಮೆ (ಕಪ್ಪಣ್ಣನ ನೆರವಿನಿಂದ) ಬೇಲೂರು, ಹಳೇಬೀಡು ಮುಂತಾದ ಮುಖ್ಯವಾದ ಸ್ಥಳಗಳಿಗೆ ಟ್ಯಾಕ್ಸಿಯಲ್ಲಿ ಜೊತೆಗಾರನಾಗಿ ಸಾಹ್ನಿ ದಂಪತಿಗಳನ್ನು ಅಲೆಸಿದ್ದೇನೆ. ಇಂಥ ಗೆಳೆತನದಲ್ಲಿ ಭಾಷೆಗೆ ಮೀರಿದ ಅನುಭವಗಳಿರುತ್ತವೆ. ಅದರಲ್ಲಿ ಸಾಹ್ನಿಯವರ ಹಾಸ್ಯ ಪ್ರಿಯತೆ ಮುಖ್ಯ. ಸಿಗರೇಟು ಸೇದುವ ವಿಚಾರದಲ್ಲಿ ಅವರು – ಮನಸ್ಸಿಗೆ ಚಿಂತೆ ಅಂಟಿದರೆ ಸಿಗರೇಟು ಸೇದಲು ಬೇಕಾಗುತ್ತದೆ, ಸಂತೋಷವುಂಟಾದರೆ ಸಿಗರೇಟು ದಮ್ ಎಳೆಯಬೇಕು, ವಿಚಾರ ಮಾಡಬೇಕಾದರ ಸಿಗರೇಟು ಬೇಕೇಬೇಕು – ಇದು ಯಾವುದೂ ಇಲ್ಲವಾದಾಗಲೂ ಸಿಗರೇಟು ಸೇದಬೇಕೆನ್ನಿಸುತ್ತದೆ ಎನ್ನುತ್ತಿದ್ದರು. ಇಂಥ ಮೃದುವಾದ ಹಾಸ್ಯವೆಂದರೆ ಇಂದಿಗೂ ಅವರ ನೆನಪಾಗುತ್ತದೆ. ಕೇರಳದಲ್ಲಿ ವಲ್ಲತ್ತೋಳರ ಶತಮಾನೋತ್ಸವದಲ್ಲಿ ಅವರೊಡನೆ ನಾನೂ ಇದ್ದವನು. ಆಗ ಅವರು ಅಲ್ಲಿಯ ಜನಜೀವನದಲ್ಲಿ ತೋರಿಸಿದ ಆಸಕ್ತಿಯೆಂದರೆ ಅದರ ಸೂಕ್ಷ್ಮ ಸ್ತರಗಳನ್ನು ಅರಿತುಕೊಳ್ಳುವುದಲ್ಲದೆ ಕಥಕ್ಕಳಿ ಮೊದಲಾಗಿ ಕೇರಳ ಕಲಾಮಂದಿರವನ್ನು ವಲ್ಲತ್ತೋಳರು ಕಟ್ಟಿದ್ದ ಬಗೆ, ಜನಸಾಮಾನ್ಯರು ಅವರನ್ನು ಗೌರವಿಸುತ್ತಿದ್ದ ರೀತಿನೀತಿಗಳನ್ನು ಗಮನಿಸುತ್ತಿದ್ದರು. ಅವರ ಪತ್ನಿ ಸೀತಮ್ಮನನ್ನು ನಾವೆಲ್ಲರೂ ನೋಡಲು ಹೋಗಿದ್ದೆವು. ಆಗ ಸಾಹ್ನಿ ಕಲಾಪ್ರೇಮವನ್ನು ಮನಸಾರೆ ಕೊಂಡಾಡಿದ್ದರು. ಮೋಹಿನಿ ಆಟಂ ಮತ್ತು ದುಶ್ಶಾಸನ ವಧೆಯನ್ನು ಕಥಕ್ಕಳಿಯಲ್ಲಿ ಕಂಡು ನಿಬ್ಬೆರಗಾಗಿದ್ದರು. ಇಂಥ ಸಾಹಿತಿಯು ನಿರ್ವ್ಯಾಜ ರೀತಿಯಲ್ಲಿ ಸಾಹಿತ್ಯ ಪ್ರೇಮಿ, ಕಲಾಪ್ರೇಮಿ – ಮುಖ್ಯವಾಗಿ ಜನಜೀವನದಲ್ಲಿ ಒಂದಾಗುವ ಮನೋಧರ್ಮವುಳ್ಳ ಅಪರೂಪದ ವ್ಯಕ್ತಿತ್ವ.

ಎಡಪಂಥೀಯ ಸಾಹಿತಿಯಾಗಿಯೇ ಲಂಕೇಶ್ ಮೊದಲಾಗಿ ಅನೇಕರ ಗೆಳೆತನವನ್ನು ಕಂಡುಕೊಂಡ ವಿಚಾರ ಬಂದಾಗ ನಮ್ಮ ಬರಹಗಾರರು ಆಧುನಿಕರು-ಭಿನ್ನಮತೀಯರಾದರೂ ಸಾಹ್ನಿಯವರನ್ನು ನಾಲ್ಕಾರು ಬಾರಿ ಗೌರವಿಸಿದರು. ಆದರೆ ಕಳೆದ ವರ್ಷ ಅವರು ಇಲ್ಲಿಗೆ ಬಂದಿದ್ದಾಗ ಅವರ ಹಳೆಯ ಸ್ನೇಹಿತರನ್ನು ಕಾಣಲು ಸಾಧ್ಯವಾಗಲಿಲ್ಲವಷ್ಟೆ. ತಮ್ಮ ಭಾಷಣವನ್ನು ಮುಗಿಸಿದವರು ಸಂಜೆಗೇ ದೆಹಲಿಯ ಹಾದಿಯಲ್ಲಿದ್ದರು.

ಸಾಹಿತಿಯಾಗಿ ಭಿಷಮ್‌ಜೀಯವರನ್ನು ಗುರುತಿಸಲು ಅವರ ಸಣ್ಣಕತೆಗಳು ಮೊದಲಾದುವು. ಬಹುಬೇಗನೆ ತಮಸ್ ಅನುವಾದವಾಯಿತು. ಅದಕ್ಕಿಂತಲೂ ಒಂದು ವಿಶೇಷವೆಂದರೆ ಬೆಂಗಳೂರು ರಂಗ ಕಲಾವಿದರು – ಸಮುದಾಯ ಅದರಲ್ಲಿ ಮುಖ್ಯ – ಅವರ ಖಡಾಹುವ ಕಬೀರ್ ಬಾಜಾರಮೇ ಕಾಮೆಡಿಯನ್ನು ಅವರ ಸಂದೇಶಕ್ಕಾಗಿ ಅಭಿನಯಿಸಿದ್ದಾರೆ (ಗೆಳೆಯ ಲೋಹಿತಾಶ್ವ ಮೊದಲಾದವರು). ಅವರ ಇತರ ಕೃತಿಗಳಲ್ಲಿ ಇತ್ತೀಚೆಗೆ 'ಮಾಧವಿ' ಎಂಬುದು ತುಂಬ ಯಶಸ್ವಿಯಾದುದು. (ಈ

"**ಯಾ**ಕ್ಲಾ ನಿಂಗಣ್ಣ ಆರಾಮಾಗ್ ಕುಂತ್‌ಬಿಟ್ಟೆ? ನೆನ್ನೆಯಿಂದ ಕರೀತಾ ಇದ್ರೂ ಕುಂತ್ ಕಡಿಂದ ಅಲ್ಲಾಡ್ತ ಇಲ್ವಲ್ಲ? ಏಳೆಂಟ್ ಗಾಡಿ ಇಟ್ಗೆ ಸಾಗಿಸ್ಬೇಕು. ಗಾಡಿ ಕಟ್ಬೋಲ್ವ ?"

"ಏ ನೀನೋಬ್ಬಕಣಣ್ಣ! ಕುಂತಿವ್ನಿ ಆರಾಮಾಗಿ. ಲಾಳ ಸವ್ದೋಗಿ ಎತ್‌ಗಳು ಎಜ್ಜೇನೆ ಆಕುದಿಲ್ಲಾಂದ್ರೆ!"

"ಅಂಗನ್ನು ಮತ್ತೆ, ಎತ್ಗೋಳ್ ನಡೆ ನಿದಾನ್ವಾದಾಗ್ಲೆ ಎಚ್ಚರಿಸ್ಕಬೇಕಪ್ಪ."

"ಆ ಲಾಳದ್ ಸಾಬ್ರಿಗೆ ಏಳ್ ಬಂದಿವ್ನಿ. ಅವನ್ನೆ ಕಾಯ್ತಾ ಕೂತಿವ್ನಿ!"



"ಊರ್ಗೆಲ್ಲಾ ಅವ್ನೊಬ್ನೆ ಸರ್ದಾರ್ನ? ಇನ್ನೊಬ್ಬ ಮುದ್ಕ ಇಲ್ವ, ಅವ್ನೂ ಐನಾತಿ.. ಸುಮ್ನೆ ಇಂಥ ಕೆಲ್ಸಾನೆಲ್ಲ ನಾವೇ ಮಾಡ್ಕೊಳ್ಳುದು ಸರಿ ಅನ್ನಿಸ್ತದಪ್ಪ!"

"ಅದೂ ನಿಜ್ವೆ. ನೀನೇ ಮಾಡುವಂಗಿದ್ರೆ ನಾನ್ಯಾಕೆ ಮೂರ್ದಿನ್‌ದಿಂದ ಅವನ್ನ ಕಾಯ್ತಾ ಕೂತಿರ್ಬೇಕು ? ನೀನೇ ಬಾ ಮತ್ತೆ ಲಾಳ ಒಡೀವಂತೆ..."

ಮೂರನೇ ದನಿ : "ಲೋ ಆಗೂ ಮಾತಾಡ್ರೋ. ನಮ್ ತಾತನ್ ಕಾಲ್ದಿಂದ್ಲೂ ಲಾಳ ಒಡಿಯೋರು ಅಂದ್ರೆ ಅವ್ರೇಯೆ. ಎಲ್ಲಾ ಕೆಲ್ಸಾನೂ ನಾವ್ ನಾವೇ ಮಾಡ್ಕಳ್ಳ ಕ್ಕಾಗತ್ತ. ಒಕ್ಕಲ್ತನ ಅಂದ್ರೆ ಸಣ್ಣ ಪುಟ್ಟ ಕೆಲ್ಸಕ್ಕೆ ಬೇರೆಯವ್ರೂ ಬೇಕಾಯ್ತರೆ ತಿಳ್ಕಳ್ಳಿ... !"

ಇದು ಸಾಮಾನ್ಯವಾಗಿ ಹಳ್ಳಿಗಳಲ್ಲಿ ಕೇಳಿಬರುವ ಸಂಭಾಷಣೆ ಎಂದು ಊಹಿಸಬಹುದು. ಜೊತೆಗೆ ಇಂಥ ಕಸಬುದಾರರು ರೈತರ ಬದುಕಿಗೆ ಅನಿವಾರ್ಯ ಅಗತ್ಯವೆಂಬುದನ್ನು ಸೂಚಿಸುತ್ತದೆ. ಆಧುನಿಕತೆ ಹಳ್ಳಿಗಳ ಕಡೆಗೂ ಸ್ವಲ್ಪ ಹೆಚ್ಚಾಗಿಯೇ ಹರಡುತ್ತಿರುವ ಈ ದಿನಗಳಲ್ಲಿ ರೈತರ ದೈನಂದಿನ ಬದುಕಿಗೆ ಪೂರಕವಾಗುವ ಕೆಲವು ಕಸುಬುಗಳು ಈಗಲೂ ಉಳಿದುಕೊಂಡಿವೆ ಎನ್ನಬಹುದು. ಗಾಡಿ ಎತ್ತುಗಳ ಗೊರಸುಗಳಿಗೆ ಲಾಳ ಹೊಡೆಯುವುದು ಅವುಗಳಲ್ಲೊಂದು.

ಹಿಂದೆ ಹಳ್ಳಿ ರಸ್ತೆಗಳಲ್ಲಿ ಕಿವಿಗಡಚಿಕ್ಕುವಂತೆ ಸದ್ದು ಮಾಡುತ್ತ ಹಾದು ಹೋಗುತ್ತಿದ್ದ ಮರದ ಚಕ್ರದ ಪಟ್ಟಿ ಗಾಡಿಗಳ ಸಂಖ್ಯೆ ಈಗ ಕಡಮೆಯಾಗುತ್ತಿದೆ. ಎಳೆಯುವ ಎತ್ತುಗಳಿಗೆ ಹೆಚ್ಚು ಆಯಾಸವಾಗದ, ಸದ್ದಿಲ್ಲದೆ ಸಾಗುವ ಟೈರು ಗಾಡಿಗಳು ಬಳಕೆಗೆ ಬಂದಿವೆ. ಆದರೆ ಗಾಡಿ ಎಳೆಯಲು ಎತ್ತುಗಳೇ ಬೇಕು !

ಎತ್ತುಗಳ ಗೊರಸುಗಳಿಗೆ ಒಮ್ಮೆ ಹೊಡೆಸಿದ ಲಾಳ ಕನಿಷ್ಠ ಏಳೆಂಟು ತಿಂಗಳು ಬರುತ್ತದೆ. ಎತ್ತುಗಳು ಹೆಚ್ಚು ನಡೆದಂತೆ ಲಾಳ ಸವೆಯುತ್ತದೆ. ಆಗ ಎತ್ತುಗಳ ನಡಿಗೆಯ ವೇಗ ತಗ್ಗುತ್ತದೆ. ಗಾಡಿಯ ಎತ್ತುಗಳು ಸಾಕಷ್ಟು ಭಾರ ಸಾಗಿಸಬೇಕಾಗುವುದರಿಂದ ಎತ್ತುಗಳ ಲಾಳಗಳೂ ಸವೆಯುತ್ತವೆ.

ಲಾಳ ಹೊಡೆಯಲಿರುವ ಎತ್ತನ್ನು ಹಿಂಗಾಲುಗಳಿಗೆ ಹಗ್ಗ ಹಾಕಿ ನೆಲಕ್ಕೆ ಕೆಡಹುವುದು, ಅದು ಕಾಲು ಒದರಾಡಿ ಹತ್ತಿರದಲ್ಲಿರುವವರ ಹಲ್ಲುಗಳನ್ನು ಉದುರಿಸುವ ಮೊದಲೇ ನಾಲ್ಕು ಕಾಲುಗಳನ್ನು ಹಗ್ಗದಿಂದ ಬಿಗಿಯುವುದು, ಲಾಳ ಹೊಡೆದು ಮುಗಿಯುವ ತನಕ ಅದು ಗೋಣು ಮೇಲೆತ್ತದಂತೆ ಅದುಮಿ ಹಿಡಿದುಕೊಳ್ಳುವುದು – ಇವೆಲ್ಲ ಅನುಭವದಿಂದ ಕಲಿಯುವಂಥವು. ಎತ್ತು ಆಗಾಗ ಕೊಸರಾಡಿ ಬಂಧನದಿಂದ ಬಿಡಿಸಿಕೊಳ್ಳಲು ಪ್ರಯತ್ನಿಸುವುದುಂಟು. ಗೊರಸನ್ನು ಸಮಗೊಳಿಸಲು ಅರದಿಂದ ಉಜ್ಜುವಾಗ, ಗೊರಸನ್ನು ಸಮಗೊಳಿಸಲು ಕುಡುಗೋಲಿನಿಂದ

# ಲಾಳ ಕಟ್ಟುವ ಕಾಯಕ

ಹೆರೆಯುವಾಗ, ಲಾಳದ ರಂಧ್ರಕ್ಕೆ ಮೊಳೆ ಹೊಡೆಯುವಾಗ ಕೆಲವೊಮ್ಮೆ ಸೂಕ್ಷ್ಮ ಸ್ಥಳಕ್ಕೆ ತಗುಲಿ ಎತ್ತು ನೋವಿನಿಂದ ಒದರಾಡುವುದುಂಟು. ಪ್ರಾಯಶಃ ಪ್ರಾಣಿದಯಾ ಸಂಘದವರು ಆ ದೃಶ್ಯ ನೋಡಿದರೆ, ಎತ್ತಿಗೆ ಹಿಂಸೆ ನೀಡಿದ ಕಾರಣ ಎತ್ತಿನವನನ್ನೂ, ಲಾಳದವನನ್ನೂ ಕೋರ್ಟಿಗೆಳೆಯಬಹುದು !

ಬೇರೆಬೇರೆ ಅಳತೆಗೆ ಬಗ್ಗಿಸಿ ಮೂಡಿಸಲಾದ ಕಬ್ಬಿಣದ ಲಾಳಗಳು, ಮೊಳೆಗಳು, ಸುತ್ತಿಗೆ, ಗೊರಸು ಹೆರೆಯುವ ಹರಿತವಾದ ಕುಡುಗೋಲು, ಒಂದು ಅರ, ಒಂದು ಮರದ ದಿಮ್ಮಿ – ಇವು ಅಗತ್ಯ ಸಲಕರಣೆಗಳು. ಬೇರೆ ಬೇರೆ ಅಳತೆಯ ಲಾಳ ಮತ್ತು ಮೊಳೆಗಳನ್ನು ಊರ ಕಮ್ಮಾರಶಾಲೆಯಲ್ಲಿ ಮಾಡಿಸಿಕೊಳ್ಳುತ್ತಾರೆ. ಅವರ ಚೀಲದಲ್ಲಿ ಬೇರೆ ಬೇರೆ ಅಳತೆಯ ಹಲವು ಜೊತೆ ಲಾಳಗಳಿರುತ್ತವೆ. ಎತ್ತನ್ನು ಕೆಡವಿದನಂತರ ಚೀಲದಲ್ಲಿರುವ ಲಾಳಗಳನ್ನು ಕೆಳಕ್ಕೆ ಸುರಿದು, ಗೊರಸಿನ ಅಳತೆಗೆ ತಕ್ಕ ಲಾಳಗಳನ್ನು ಒಮ್ಮೆ ಅಂದಾಜು ಮಾಡಿ ಲಾಳ ಕಟ್ಟುತ್ತಾರೆ.

ಚಿತ್ರದಲ್ಲಿ, ಲಾಳ ಹೊಡೆಯುವ ಕಾಯಕದಲ್ಲಿ ನಿರತನಾಗಿರುವ ವ್ಯಕ್ತಿ ಮಹಬೂಬ್ ಸಾಬ್. ೩೫ ಪ್ರಾಯದ ಈತ ಕಿರುಗಾವಲಿನ ಬುಡಾನ್ ಸಾಬರ ಮಗ. ಸ್ವಲ್ಪ ಅಕ್ಷರ ಕಲಿತದ್ದುಂಟು. ಮದುವೆಯಾಗಿ ಎರಡು ಮಕ್ಕಳಿವೆ. ಸಣ್ಣಪ್ರಾಯದಿಂದಲೇ ತಂದೆಯೊಂದಿಗೆ ತಿರುಗಾಡುತ್ತ ಈ ಕಾಯಕ ಕಲಿತ. ಒಂದು ಜೊತೆ ಎತ್ತಿಗೆ ಲಾಳ ಹೊಡೆದರೆ ನೂರು ರೂಪಾಯಿ ಸಿಗುತ್ತದೆ. ಕೆಲವು ದಿನ ಎಷ್ಟೋ ಹಳ್ಳಿಗಳಲ್ಲಿ ತಿರುಗಾಡಿದರೂ ಯಾರೂ ಕರೆಯುವುದಿಲ್ಲ. ಇದೇ ಕಾಯಕ ಮಾಡುವ ಇನ್ನೂ ಕೆಲವರಿದ್ದರೂ ಸಮೀಪದ ಕೆಲವು ಊರುಗಳವರು ಈತನಲ್ಲಿಗೇ ಬರುವುದುಂಟು. ಅಂತೂ ಹೇಗೋ ಬದುಕು ಸಾಗುತ್ತದೆ.

**ಕೆ. ಪಿ. ಸ್ವಾಮಿ**
ನಂ. ೧೬೭, ೧೦ನೇ ಮೈನ್, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು- ೫೬೦ ೦೫೮

---

*ಹಿಂದಿನ ಪುಟದಿಂದ....*

ಹೆಸರಿನ ಕಾದಂಬರಿಯನ್ನು ಅನುಪಮಾ ನಿರಂಜನ ಕನ್ನಡದಲ್ಲಾಗಲೇ ರಚಿಸಿದ್ದರಷ್ಟೆ. – ಇದರ ಬಗ್ಗೆ ನನ್ನಲ್ಲಿ ಅವರು ಮಾತನಾಡಿದ್ದರೂ ಕೂಡ). ಎಡಪಂಥೀಯರಾಗಿದ್ದೂ ಕನ್ನಡ ಸಾಹಿತಿಗಳ ಮೆಚ್ಚುಗೆಯನ್ನು, ತಾವು ಬದ್ಧತೆಯನ್ನು ಮರೆಮಾಚದೇ ಪಡೆದವರೆಂದರೆ ಸಾಹ್ನಿಯವರು ಮಾತ್ರವೆಂದೇ ಹೇಳಬೇಕು. ಅಂಥ ಸಜ್ಜನಿಕೆ ಅವರದು – ನಿರಾಡಂಬರದ ವ್ಯಕ್ತಿತ್ವಕ್ಕೆ ಸಾಹ್ನಿಯವರನ್ನು ಮೊದಲು ಉದಾಹರಿಸಬೇಕು. ಇಸ್ಮತ್ ಚುಗ್ತಾಯಿಯವರ 'ಗರಂ ಹವಾ' ಪ್ರಸಿದ್ಧಿಯ ಸತ್ಯು – ಅವರ ಆತ್ಮೀಯ ಗೆಳೆಯರಲ್ಲೊಬ್ಬರು. ಸತ್ಯುರವರ 'ಬಕರಿ'ಯನ್ನು ಮೆಚ್ಚಿಕೊಂಡಿದ್ದರು. ಯು. ಆರ್. ಅನಂತಮೂರ್ತಿಯವರ 'ಸಂಸ್ಕಾರ' ಕಾದಂಬರಿಯ ಇಂಗ್ಲಿಷ್ ಅನುವಾದವನ್ನು ಇಲ್ಲಸ್ಟ್ರೇಟೆಡ್ ವೀಕ್ಲಿಯಲ್ಲಿ ಸೀರಿಯಲ್ ಆಗಿ ಓದಿದ್ದು – ಇಂಥ ಸಾಹಿತಿಯನ್ನು ಹೊಂದಿರುವ ಕನ್ನಡಿಗರು ಅದೃಷ್ಟಶಾಲಿಗಳು ಎಂದು ಅಂದಿದ್ದರು. ಇಂಥ ನಿರ್ವ್ಯಾಜತೆಗೆ ಸ್ನೇಹಪರತೆಗೆ ಸಾಧುತನಕ್ಕೆ ಭಿಷಮ್‌ಜೀ ನನ್ನಂತೆ ಅನೇಕರ - ಶ್ರೀನಿವಾಸರಾಜು, ಪುಷ್ಪಾಶ್ರೀ ಮೊದಲಾದವರ ನೆನಪಿನಲ್ಲಿ ನೀಟಾಗಿ ಉಳಿದವರೆಂದರೆ ಅದು ಎಳ್ಳಷ್ಟೂ ಉತ್ಪ್ರೇಕ್ಷೆಯಲ್ಲ. ಅವರ ಎಲ್ಲಾ ಕೃತಿಗಳೂ ಕನ್ನಡಕ್ಕೆ ಅನುವಾದವಾಗಿ ಉಳಿದು ಬರಲೆಂದು ಹಾರೈಸುತ್ತೇನೆ.

(ಭಿಷಮ್‌ಜೀ ನೆನಪಿಗೆ ನನ್ನ ಕಾಣಿಕೆಯೆಂದರೆ ಅವರ 'ಸಾಹೇಬರು ಭೋಜನಕ್ಕೆ ಬಂದಾಗ' ಮತ್ತೊಂದು ಕತೆಯನ್ನು ಅನುವಾದ ಮಾಡಿದ್ದೇನೆ – ಅಷ್ಟೆ!)

ಇಂಥ ಅಪೂರ್ವ ಜೀವಕ್ಕೆ ಶಾಂತಿಯನ್ನು ಕೋರುತ್ತೇನೆ.

ಕ. ವೆಂ. ರಾಜಗೋಪಾಲ
ಎಂ. ಐ. ಜಿ. ೪೧, ೮೦ ಅಡಿ ರಸ್ತೆ, ಕೆಂಗೇರಿ ಸ್ಯಾಟಲೈಟ್ ಟೌನ್, ೧೧ನೇ ಘಟ್ಟ, ಬೆಂಗಳೂರು - ೬೦

# ಸಾಹಿತಿಯಾಗಿ ಬರಗೂರರು

ಅನಸೂಯ ಕಾಂಬಳೆ

ಬಂಡಾಯ ಸಾಹಿತ್ಯದ ರೂವಾರಿಗಳಲ್ಲೊಬ್ಬರಾದ ಬರಗೂರು ರಾಮಚಂದ್ರಪ್ಪನವರದು ಅಪೂರ್ವ ಪ್ರತಿಭೆ. ತಮ್ಮ ವಯಸ್ಸಿಗೆ ಮೀರಿದ ಸಾಧನೆಯಿಂದ, ಹೃದಯವಂತಿಕೆಯಿಂದ ಮತ್ತು ಜೀವನದ ಬಗೆಗಿರುವ ಅಪಾರ ಕಾಳಜಿಯಿಂದ ಈಗಾಗಲೇ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿದ್ದಾರೆ. ಒಬ್ಬ ಸಾಹಿತಿಯಾಗಿ, ಸಮಾಜ ಚಿಂತಕರಾಗಿ ಅವರು ಪ್ರತಿಪಾದಿಸಿದ ಜೀವನ ಮೌಲ್ಯಗಳು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹೊಸ ಪರಂಪರೆಯನ್ನೇ ಸೃಷ್ಟಿಸಿವೆ. ಯಾವೊಂದು ನಿರ್ದಿಷ್ಟ ವಾದಕ್ಕೂ ಸಿಲುಕದೆ ಪ್ರಗತಿಪರ ವಿಚಾರಧಾರೆಗಳೆಲ್ಲವನ್ನೂ ತಮ್ಮ ಪ್ರಭಾವಲಯದೊಳಗೆ ಸ್ವೀಕರಿಸಿ, ಸಮಕಾಲೀನ ತುರ್ತುಗಳಿಗೆ ಅಗತ್ಯವಾದ ಸಿದ್ಧಾಂತಗಳನ್ನು ರೂಪಿಸಿಕೊಳ್ಳುವಲ್ಲಿ ಬರಗೂರರು ತಮ್ಮದೇ ಆದ ಛಾಪನ್ನು ಒತ್ತಿದ್ದಾರೆ. ಈ ದೃಷ್ಟಿಯಿಂದ ಒಂದು ಕಡೆ ಬರಗೂರರ ಒಟ್ಟು ಬದುಕನ್ನು ಅರ್ಥಮಾಡಿಕೊಳ್ಳುವುದು, ಆ ಮೂಲಕ ಸಾಹಿತ್ಯ ಕೃತಿಗಳಲ್ಲಿ ಪ್ರತಿಪಾದಿಸಿರುವ ಜೀವನ ಮೌಲ್ಯಗಳನ್ನು ವಿಶ್ಲೇಷಿಸುವುದು ತುಂಬಾ ಅಗತ್ಯವಾಗಿದೆ.

''ಯಾವೊಬ್ಬ ಮನುಷ್ಯನ ವ್ಯಕ್ತಿತ್ವವು ಬಹುತೇಕ ಆಯಾ ಮನುಷ್ಯನ ಯಾವೊಂದು ವಾತಾವರಣದಲ್ಲಿ ಅಂದರೆ, ಸಾಮಾಜಿಕ ವ್ಯವಸ್ಥೆಯಲ್ಲಿ ಬೆಳೆಯುತ್ತಾನೋ ಅದರಿಂದ ರೂಪುಗೊಳ್ಳುತ್ತದೆ'' – ಎಂಬುದನ್ನು ಗಮನಿಸಿದರೆ ಬರಗೂರರು ಹುಟ್ಟಿ ಬೆಳೆದ ಪರಿಸರವೇ ಅವರ ಸಾಧನೆಯಲ್ಲಿ ಮಹತ್ವದ ಪಾತ್ರ ವಹಿಸಿದೆ ಎಂಬುದಕ್ಕೆ ನಿದರ್ಶನವಾಗಿದೆ. ಕಡು ಬಡತನದಲ್ಲಿ, ಬಡವರಲ್ಲಿ ಬಡವನಾಗಿ ಹುಟ್ಟಿದ ನೆನಪನ್ನು ಬರಗೂರರು ತುಂಬಾ ಹೆಮ್ಮೆಯಿಂದ ನೆನೆಯುತ್ತಾರೆಂಬುದೇ ಮಹತ್ವದ್ದು. ತಾವು ಹುಟ್ಟಿ ಬೆಳೆದ ಪರಿಸರದ ಬಗೆಗೆ, ತಮ್ಮ ಊರಿನ ಬಗೆಗೆ ಈವೊತ್ತಿಗೂ ಅವರು ಅಭಿಮಾನ ತಾಳುತ್ತಾರೆ. 'ನನ್ನೂರಿನ ಸಂವೇದನೆ'ಯಲ್ಲಿ ಬರಗೂರರೇ ವ್ಯಕ್ತಪಡಿಸಿದ ಅಭಿಪ್ರಾಯ ಹೀಗಿದೆ : ''ಊರಿನ ಬಡ ಜನರಲ್ಲಿ ಬಡವನಾಗಿ ಬೆಳೆಯುವ ಭಾಗ್ಯವನ್ನು ನನಗೆ ಕಲಿಸಿದ್ದು ನನ್ನೂರು ಬರಗೂರು. ಇದು ಇವತ್ತಿಗೂ ನನ್ನ ಜೀವನದೃಷ್ಟಿಯ ಭಾಗವಾಗಿದೆ, ಚಿಂತನೆಗಳ ಚಿಲುಮೆಯಾಗಿದೆ'' (ಬರಗೂರು ರಾಮಚಂದ್ರಪ್ಪ: ಸಂಸ್ಕೃತಿ - ಉಪಸಂಸ್ಕೃತಿ, ಪು. ೧೧೧).

ಕುವೆಂಪುರಾದಿಯಾಗಿ ಅನೇಕ ನವೋದಯ ಕಾಲದ ಕವಿಗಳು ಕನ್ನಡನಾಡಿನ ಪ್ರಕೃತಿ ಸಂಪತ್ತನ್ನು, ನೈಸರ್ಗಿಕ ಸೌಂದರ್ಯವನ್ನು ಮನಸಾರೆ ಹಾಡಿ ಹೊಗಳಿದ್ದಾರೆ. ಬರಗೂರು ಅವರನ್ನು ಸಹಜವಾಗಿ ಕಾಡಿದ್ದು ಅವರ ಪ್ರದೇಶದ ಬರಡುತನ ಮತ್ತು ಜಾಲಿಯ ಮರ. ಹೀಗಾಗಿ ಇಂಥ ಬರಡುತನದಲ್ಲೇ ಚಿಗುರನ್ನು ಬೆಳೆಸುವ, ಕಳೆದುಹೋದ ಆತ್ಮ ವಿಶ್ವಾಸವನ್ನು ಕಂಡುಕೊಳ್ಳುವ, ಕೀಳರಿಮೆಯನ್ನು ಮೀರುವ ಪ್ರಕ್ರಿಯೆಯನ್ನು ಬರಗೂರರು ಬೆಳೆಸಿಕೊಂಡರು ಎಂದು ಕಾಣುತ್ತದೆ. ಅವರು ಪಿ.ಯು.ಸಿ. ಓದುವ ತನಕ ಕಾಲಿಗೆ ಚಪ್ಪಲಿ ಹಾಕಿರಲಿಲ್ಲ ಎಂಬುದು ಬಹುಪಾಲು ಜನರ ಜೀವನ ಪರಿಸ್ಥಿತಿಯಾಗಿದ್ದರೂ, ಅಂದು ಒಂದು ಪರಿಸ್ಥಿತಿಯಿಂದ ಹುಟ್ಟಿಬಂದ ವ್ಯಕ್ತಿಯೊಬ್ಬ ಎಷ್ಟು ಎತ್ತರಕ್ಕೆ ಬೆಳೆಯಬಲ್ಲ ಎಂಬುದಕ್ಕೆ ಬರಗೂರು ರಾಮಚಂದ್ರಪ್ಪನವರು ನಿದರ್ಶನವಾಗಿದ್ದಾರೆ. ಇಂಥ ಒಂದು ಬಡತನದ ಹಿನ್ನೆಲೆಯಿಂದ ಅನುಕಂಪಗಳನ್ನು ತಾಳಲು ಅವರಿಗೆ ಸಾಧ್ಯವಾಯಿತು. ಮಾನವ ಸಹಜ ದೌರ್ಬಲ್ಯಗಳಿಗೆ ಸಡ್ಡುಹೊಡೆದು ತಮ್ಮ ನಿಶ್ಚಿತ ಸಾಧನೆಗಳ ಕಡೆಗೆ ಹೆಜ್ಜೆ ಇರಿಸಲು ಬರಗೂರರು ಹೆಣಗಾಡಿದ್ದಾರೆ.

ಇಂದು ಬಂಡಾಯ ಸಾಹಿತ್ಯ ಎಂದೊಡನೆ ಥಟ್ಟನೆ ನೆನಪಿಗೆ ಬರುವಂತಹ ಹೆಸರು ಪ್ರೊ. ಬರಗೂರರದು. ಅವರ ಬದುಕು ಅನೇಕ ಕಷ್ಟಗಳ ಮಧ್ಯ ಅರಳಿದ್ದು ನೆತ್ತರಲ್ಲಿ ನೆಂದ ಹೂವಿನಂತದ್ದು. ಅವರೇ ತಮ್ಮ 'ನೆತ್ತರಲ್ಲಿ ನೆಂದ ಹೂ' ಕವನ ಸಂಕಲನದ ಮುನ್ನುಡಿಯಲ್ಲಿ ''ಈಗ ಅರಳುತ್ತಿರುವ ಕ್ರಿಯೆಯ ಹಿಂದೆ – ಹೊರಳಿ, ನರಳಿ, ನೊಂದು ಬೆಂದ ಭಾವ ತೀವ್ರತೆ ತುಂಬಿದೆ. ನಾನು ನಿಂತ ನೆಲದ ನೋವು ನನ್ನಲ್ಲಿರುವ ಮನದ ನೋವು ನಾನು ನಿಂತಿರುವ ನೆಲದ ನೋವೇ ಆದಾಗ, ಒಳಮೂಡಿ ಹೊರ ಹೊಮ್ಮಿದ ಅನುಭವ ರೂಪವೇ ಈ 'ನೆತ್ತರಲ್ಲಿ ನೆಂದ ಹೂವು'. ಹೂವು ಮತ್ತು ನೋವು ಒಂದೇ ಆಗಿ ಅಥವಾ ಒಂದರೊಳಗೊಂದಾಗಿ ಒಡಮೂಡುವ ಒತ್ತಡದ ಫಲ ನನ್ನ ಈ ಕವನ ಸಂಕಲನ'' (೧೯೮೩). ಬಂಡಾಯ ಸಾಹಿತ್ಯ ಮತ್ತು ಸಂಘಟನೆಯೊಂದಿಗೆ ಅವರ ಬೆಳವಣಿಗೆಯನ್ನು ಗುರುತಿಸುತ್ತೇವೆ. ಬಂಡಾಯ ಚಳುವಳಿ ಮತ್ತು ಅದರ ತತ್ವ ಸಿದ್ಧಾಂತ ಅವರ ಚಿಂತನೆಯ ಫಲವಾಗಿ ಮೂಡಿಬಂದದ್ದು. ಹೀಗಾಗಿ ಬಂಡಾಯ ಚಳುವಳಿಯೊಂದಿಗೆ ಬರಗೂರರ ಬೆಳವಣಿಗೆಯಿದೆ.

ಬಂಡಾಯ ಸಾಹಿತ್ಯ ಸಂಘಟನೆ ಅಧಿಕೃತವಾಗಿ ೧೯೭೯ರ ಮಾರ್ಚ್ ೧೦ ಮತ್ತು ೧೧ರಂದು ಬೆಂಗಳೂರಿನಲ್ಲಿ ನಡೆದ ಮೊಟ್ಟಮೊದಲ ಬಂಡಾಯ ಸಮ್ಮೇಳನದೊಂದಿಗೆ ಹುಟ್ಟಿಕೊಂಡಿತು. ಕನ್ನಡದಲ್ಲಿ ಸಾಹಿತ್ಯ ಸೃಷ್ಟಿ ನವ್ಯದವರ ಗೊಂದಲಗಳಿಂದಾಗಿ ನಿಂತೇ ಹೋಯಿತು ಎನ್ನುತ್ತಿರುವಾಗಲೇ ೧೯೭೩ರಲ್ಲಿ ಬಿ. ಬಸವಲಿಂಗಪ್ಪನವರು ಹುಟ್ಟುಹಾಕಿದ 'ಬೂಸಾ ಸಾಹಿತ್ಯ' ಹೇಳಿಕೆಯಿಂದಾಗಿ ಸಾಹಿತ್ಯ ಕ್ಷೇತ್ರದಲ್ಲಿ ಹೊಸದೊಂದು ಬಿರುಗಾಳಿಯೇ ಎದ್ದಂತಾಯಿತು. ಇದಕ್ಕೂ ಮುಂಚೆ ೧೯೧೮ರಲ್ಲಿ ಮೊದಲನೆಯ ಬ್ರಾಹ್ಮಣೇತರ ಚಳುವಳಿಯಿಂದ ಪ್ರಾರಂಭಗೊಂಡಿದ್ದ ಬ್ರಾಹ್ಮಣೇತರರ ಹೋರಾಟಕ್ಕೆ ಬಸವಲಿಂಗಪ್ಪನವರ ಈ ಹೇಳಿಕೆಯಿಂದಾಗಿ ಎಚ್ಚೆತ್ತ ಪ್ರಜ್ಞಾವಂತರೆಲ್ಲ ಒಂದಾಗುವಂತಾಯಿತು. ೧೯೭೩ರಲ್ಲಿ ಆಗಸ್ಟ್ ೨೫, ೨೬ರಂದು ಮೈಸೂರಿನಲ್ಲಿ 'ಜಾತಿ ವಿನಾಶ ಸಮ್ಮೇಳನ' ನಡೆಸಿದ ತಂಡ, ಅದೇ ವರ್ಷ ಡಿಸೆಂಬರ್ ತಿಂಗಳಲ್ಲಿ ''ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟ'' ಎಂದು ರೂಪುಗೊಂಡಿತು. ಇದೇ ವೇಳೆಗೆ ದಲಿತರು ತಮ್ಮ ಪ್ರತ್ಯೇಕ ಅಸ್ತಿತ್ವಕ್ಕಾಗಿ ಅಲ್ಲಲ್ಲಿ ಬಿಡಿ ಬಿಡಿಯಾಗಿದ್ದ ಬರಹಗಾರರು ಸಾಂಸ್ಕೃತಿಕ, ಸಾಹಿತ್ಯಕ ವೇದಿಕೆಗಳಲ್ಲಿ ಒಂದಾಗುವುದಕ್ಕೆ ಅವಕಾಶ ಸಿಕ್ಕಂತಾಗಿ ಕೈಬೆರಳ ಮೇಲೆ ಎಣಿಸುವಷ್ಟು ಬರಹಗಾರರೇ ಸೇರಿಕೊಂಡು 'ದಲಿತ ಬರಹಗಾರರ ಯುವ ಸಂಘಟನೆ' ಪ್ರಾರಂಭವಾಯಿತು. ಬಸವಲಿಂಗಪ್ಪನವರ ಬೂಸಾ ಹೇಳಿಕೆಯ ಪ್ರಕರಣ ಇದಕ್ಕೆ ಪುಷ್ಟಿಯನ್ನು ಕೊಟ್ಟಿತು. ಇದೇ ವೇಳೆಗೆ ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್‌ನ ಪ್ರಭಾವದಿಂದಾಗಿ ಬಿ. ಕೃಷ್ಣಪ್ಪನವರ ಮುಖಂಡತ್ವದಲ್ಲಿ ಭದ್ರಾವತಿಯಲ್ಲಿ ೧೯೭೪ರಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಹುಟ್ಟಿಕೊಂಡಿತು. ಈ ಸಮಿತಿ ತಮ್ಮ ಜನಾಂಗದ ಬಗೆಗೆ ಒಂದೇ ರೀತಿಯಲ್ಲಿ ಚಿಂತಿಸುವ ಬರಹಗಾರರನ್ನು ಕಲೆ ಹಾಕುವ ದೃಷ್ಟಿಯಿಂದ ೧೯೭೪ರ ಡಿಸೆಂಬರ್ ೧೮, ೧೯ರಂದು ಪ್ರಥಮ ಬಾರಿಗೆ ಕರ್ನಾಟಕ ದಲಿತ ಲೇಖಕರು ಮತ್ತು ಕಲಾವಿದರ ಸಮ್ಮೇಳನವೊಂದನ್ನು ನಡೆಸಿತು. ಈ ಸಮ್ಮೇಳನದಲ್ಲಿ ಹೊಸ ಬರಹಗಾರರ ದಂಡೇ ನಿರ್ಮಾಣಗೊಂಡಿತು. ಸಂಘಟನೆಯ ಸಮ್ಮೇಳನಗಳಲ್ಲಿ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಗೋಷ್ಠಿಗಳು ನಡೆಯುತ್ತಿದ್ದವು. ಅದೇ ವೇಳೆಗೆ ೧೯೭೯ರ ಮಾರ್ಚ್ ೯ರಂದು ಧರ್ಮಸ್ಥಳದಲ್ಲಿ ನಡೆಯಲಿದ್ದ ೫೧ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ದಲಿತ ಗೋಷ್ಠಿ ನಡೆಸಬೇಕೆಂದು ದಲಿತ ಬರಹಗಾರರು ಒತ್ತಾಯಿಸಿ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಿಗೆ ಪತ್ರ ಬರೆದರು. ಅದು ತಿರಸ್ಕೃತವಾಗಿ ವಾದ - ವಿವಾದ ನಡೆದು ದಲಿತ ಮತ್ತು ಎಡಪಂಥೀಯ ವಿಚಾರವಂತ ಬರಹಗಾರರೆಲ್ಲ ಸೇರಿಕೊಂಡು ಬಂಡಾಯ ಸಂಘಟನೆಯನ್ನು ಅಸ್ತಿತ್ವಕ್ಕೆ ತಂದು ಪರಿಷತ್ತಿನ ಸಮ್ಮೇಳನಕ್ಕೆ ಪರ್ಯಾಯವಾಗಿ ೧೯೭೯ರ ಮಾರ್ಚ್ ೧೦, ೧೧ರಂದು ಬೆಂಗಳೂರಿನಲ್ಲಿ ಪರ್ಯಾಯ ಸಮ್ಮೇಳನ ನಡೆಸಿ ದಲಿತ - ಬಂಡಾಯ ಸಾಹಿತ್ಯದ ನೆಲೆಗಳನ್ನು ಗುರುತಿಸಿಕೊಂಡರು.

ಬಂಡಾಯ ಸಂಘಟನೆ ಹುಟ್ಟುವ ಪೂರ್ವದಲ್ಲೇ ಬರಗೂರರು 'ಕನಸಿನ ಕನ್ನಿಕೆ', 'ಮರಕುಟಿಗ' (೧೯೭೩) ಕವನ ಸಂಕಲನಗಳು, 'ಸುಂಟರಗಾಳಿ' (೧೯೭೪) ಕಥಾ ಸಂಕಲನ ಹಾಗೂ ಸೂತ್ರ (೧೯೭೪) ಮತ್ತು ಹುತ್ತ (೧೯೭೬) (ಇದೇ ಮುಂದೆ 'ಉಕ್ಕಿನ ಕೋಟೆ' ಎಂದಾಯಿತು) ಎಂಬೆರಡು ಕಾದಂಬರಿಗಳು ಹೀಗೆ ಹಲವಾರು ಕೃತಿಗಳನ್ನು ನೀಡುವುದರ ಮೂಲಕ ಸತ್ವಶಾಲಿ ಬರಹಗಾರರಾಗಿ ರೂಪುಗೊಂಡಿದ್ದರು. ತಮ್ಮ ಪ್ರಥಮ ಕಥಾ ಸಂಕಲನ 'ಸುಂಟರಗಾಳಿ'ಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಉತ್ತಮ ಕಥಾ ಲೇಖಕ ಪ್ರಶಸ್ತಿ (೧೯೭೫)ಯನ್ನು ಪಡೆದಿದ್ದರು. ಆಗಲೇ ಅವರು ಜಡಾವಸ್ಥೆಗೆ ತಲುಪಿದ್ದ ನವ್ಯದವರ ಮಧ್ಯದಲ್ಲಿ ಹೊಸ ಆಲೋಚನೆಗೆ ಮುಂದಾಗಿದ್ದರು. ತಮ್ಮ ದ್ವಿತೀಯ ಕೃತಿ 'ಮರಕುಟಿಗ' ಕೃತಿಯಲ್ಲಿ ''ಉದ್ದೇಶಿತ ಗುರಿಯುಳ್ಳ ಸುಸಂಬಂಧ ಜೀವನ ನಡೆಸ ಬಯಸುವ ವ್ಯಕ್ತಿಯ ಸುತ್ತ ಒಲವು ನಿಲುವುಗಳ ವೃತ್ತವೊಂದು ನಿರ್ಮಾಣವಾಗುತ್ತದೆ. ಆತ ಅದರೊಳಗೆ ಅರ್ಥ ಹುಡುಕುತ್ತ ನಿರ್ಧಾರಗಳನ್ನು ತೆಗೆದುಕೊಳ್ಳುತ್ತ, ತನ್ನ ದಾರಿಗೆ ತಾನು ಹಿಗ್ಗುತ್ತ, ಕೆಲವೊಮ್ಮೆ ಕುಗ್ಗುತ್ತ ಸಾಗುತ್ತಾನೆ. ತಾನು ನಿರ್ಮಿಸಿಕೊಂಡ ವೃತ್ತವನ್ನು ಮೀರಿ ನಗುವ ಎಳೆಯೊಂದು ಸೆಳೆದಾಗ

ಸ್ವಾಭಾವಿಕವಾಗಿ ವ್ಯಕ್ತಿ ಚಿಂತಾಮಗ್ನನಾಗುತ್ತಾನೆ... ಅಂತು ಬದುಕೆಂಬುದು ಬದಲಾಗುತ್ತ, ಹೊಸದನ್ನು ಒಳಗೊಳ್ಳುತ್ತ, ವ್ಯಕ್ತಿತ್ವವನ್ನು ಒರೆಗಲ್ಲಿಗೆ ಒಡ್ಡುತ್ತ ಸಾಗುತ್ತಿರುವಾಗ ವ್ಯಕ್ತಿ ಪರಿಪೂರ್ಣನಾಗುವುದು ಸಾಧ್ಯವಿಲ್ಲ. ನಮ್ಮ ನಂಬಿಕೆಗಳು ಭದ್ರವಾಗುವಂತೆ ಭಾಸವಾಗುವಾಗಲೇ ಕೆಲವು ಬಿರುಕುಗಳು ಕಾಣಿಸಿಕೊಳ್ಳುತ್ತವೆ. ಹೀಗಾದಾಗ ಸಂಘರ್ಷ ಸ್ಥಿತಿಗೆ ಸಿಕ್ಕಿ ಬದುಕೇ ಹೋರಾಟ, ಹೋರಾಟವೇ ಬದುಕು ಎನ್ನುತ್ತೇವೆ. ಈ ಹೋರಾಟದಲ್ಲಿ ಕಲಿಗಳಾಗುತ್ತೇವೆ. ಪ್ರತಿಭೆಯಿದ್ದಾಗ ಕವಿಗಳೂ ಆಗುತ್ತೇವೆ. ಅಭಿವ್ಯಕ್ತಿ ಅನಿವಾರ್ಯವಾಗುತ್ತದೆ'' (೧೯೭೩) ಎಂದು ಹೇಳಿದ್ದಾರೆ. ಇಲ್ಲಿ ಹಸನಾದ ಬದುಕಿಗೆ ಹಾತೊರೆಯುವ ಕವಿ ಚಿಂತಕ ಮನಸ್ಸನ್ನು ಕಾಣುತ್ತೇವೆ. ಇಂಥ ಚಲನಶೀಲ ಬರಹಗಾರರಿಗೆಲ್ಲ ಬಂಡಾಯ ಸಂಘಟನೆ ವೇದಿಕೆಯಾಯಿತು. ಅಂದು ೧೯೭೯ರ ಮಾರ್ಚ್ ೧೦ರಂದು ಪ್ರಥಮ ಸಮ್ಮೇಳನದಲ್ಲಿ ಮಾತನಾಡಿದ ಬರಗೂರರು ತಮ್ಮ ಸಂಘಟನೆಯ ಬದ್ಧತೆಗಾಗಿ ಪರಂಪರೆಯನ್ನು ಹುಡುಕುತ್ತಾ ''ಇಂದಿನ ನಮ್ಮೆಲ್ಲ ಪ್ರಗತಿಪರ ಆಲೋಚನೆಗಳಿಗೆ ಒಂದು ದೀರ್ಘ ಪರಂಪರೆ ಇದೆ ಎಂದು ಗುರುತಿಸಿಕೊಂಡಾಗಲೇ ಪ್ರಾಚೀನ ಸಾಹಿತ್ಯದ ಅಧ್ಯಯನಕ್ಕೆ ಹೊಸ ಅರ್ಥ ಬರುತ್ತದೆ'' ಎಂದು ಬರಹಗಾರರಲ್ಲಿ ಆತ್ಮಾಭಿಮಾನ ಬೆಳೆಸಿದರು.

ಅಲ್ಲದೆ ಮೊದಲ ಬಾರಿಗೆ ಸಾಹಿತ್ಯಕ್ಕೂ-ರಾಜಕಾರಣಕ್ಕೂ ಸಂಬಂಧವಿರಬೇಕೆಂದು ಪ್ರತಿಪಾದಿಸಿದವರೇ ಬರಗೂರರು. ಧಾರವಾಡ ಜಿಲ್ಲಾ ಮೊದಲನೆಯ ಬಂಡಾಯ ಸಮ್ಮೇಳನ ಉದ್ಘಾಟಿಸಿ ಮಾತನಾಡಿದ ಬರಗೂರರು ''ಸಾಹಿತಿಗೆ ರಾಜಕೀಯ ಕಾಳಜಿ ಅಗತ್ಯ ಮತ್ತು ಇಂದಿನ ಇಂಡಿಯಾದಲ್ಲಿ ಅನಿವಾರ್ಯ ಎಂದು ನಾವು ನಂಬಿದವರು. ಇಷ್ಟು ಬಲವಾಗಿ ರಾಜಕೀಯ ಮತ್ತು ಸಾಹಿತ್ಯದ ಸಂಬಂಧವನ್ನು ಕನ್ನಡ ಸಾಹಿತ್ಯದಲ್ಲಿ ಹಿಂದೆಂದೂ ಪ್ರತಿಪಾದಿಸಿರಲಿಲ್ಲವೆಂದು ಹೇಳಬಹುದು'' ಎಂದು ಪ್ರತಿಪಾದಿಸಿದರು. ಅದು ಬಂಡಾಯ ಸಂಘಟನೆಯ ಪ್ರಣಾಳಿಕೆಯಲ್ಲಿ ಈಗಾಗಲೇ ಸ್ಪಷ್ಟಪಡಿಸಲಾಗಿತ್ತು. ''ದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಸಂಬಂಧಗಳು ಪರಸ್ಪರ ಸಂಬಂಧವುಳ್ಳವು ಎಂಬ ನಿಲುವಿನಿಂದ ಹೊರಟಿದ್ದು, ಸಾಹಿತಿಗೆ ಸಾಮಾಜಿಕ ರಾಜಕೀಯ ಪ್ರಜ್ಞೆ ಇರಬೇಕೆಂಬ ಆಶಯ ಇಲ್ಲಿ ಮುಖ್ಯವಾದದ್ದು.'' ಹೀಗಾಗಿ ಅವರ ಎರಡು ಕೃತಿಗಳಾದ 'ಸಾಹಿತ್ಯ ಮತ್ತು ರಾಜಕಾರಣ' (೧೯೮೧) ಮತ್ತು 'ರಾಜಕೀಯ ಚಿಂತನೆ' ಅವರ ಸ್ಪಷ್ಟ ನಿಲುವುಗಳನ್ನು ಮತ್ತು ಬರಹಗಾರರು ನಿರ್ವಹಿಸಬೇಕಾದ ಜವಾಬ್ದಾರಿಯನ್ನು ಪ್ರತಿಪಾದಿಸುತ್ತವೆ. ವಿಶೇಷವಾಗಿ ಅವರ ಕಥೆ-ಕಾದಂಬರಿಗಳು ಆ ನೆಲೆಯಲ್ಲೇ ಮೂಡಿಬಂದಿರುವುದು ಸ್ಪಷ್ಟವಾಗಿದೆ.

ಪ್ರಗತಿಪರ ಮನೋಧರ್ಮದ ಎಲ್ಲ ಆಶಯಗಳಲ್ಲೂ ಅಂದಿನ ಸಂದರ್ಭದಲ್ಲಿ ಸಂಘಟನೆಯನ್ನು ಕಟ್ಟಬೇಕು, ಚಳವಳಿ ರೂಪಿಸಬೇಕು ಎನ್ನುವುದು ತೀವ್ರವಾಗಿತ್ತು. ಧಾರವಾಡದಲ್ಲಿ ನಡೆದ ಜಿಲ್ಲಾ ಬಂಡಾಯ ಸಾಹಿತ್ಯ ಸಮ್ಮೇಳನದ ಉದ್ಘಾಟನಾ ಸಮಾರಂಭದಲ್ಲಿ (೧೯೭೯) ಅವರು ಒತ್ತಿ ಹೇಳಿದ್ದೂ ಅದನ್ನೇ: ''ನಮ್ಮ ಮುಂದಿರುವ ಮುಖ್ಯ ಜವಾಬ್ದಾರಿ ಜನಪರ ಹೋರಾಟಗಳೊಂದಿಗೆ ಸಂಪರ್ಕ ಮತ್ತು ಬಂಡಾಯ ಸಾಹಿತ್ಯ ಸೃಷ್ಟಿ. ನಾವು ಸೃಷ್ಟಿಸಿರುವ ಸಾಹಿತ್ಯವೇ ನಮ್ಮ ಹೋರಾಟದ ಪ್ರಮುಖ ದಾಖಲೆ. ಈ ಮಾತು ಸದಾ ನಮ್ಮ ಮನಸ್ಸಿನಲ್ಲಿರಬೇಕು. ಈ ದಿಕ್ಕಿನಲ್ಲಿ ಹೆಚ್ಚೆಚ್ಚು ಕ್ರಿಯಾಶೀಲರಾಗಬೇಕು.'' ಹೀಗೆ ಬರಗೂರರು ಉದಾತ್ತ ಧ್ಯೇಯದೊಂದಿಗೆ ನಾಡಿನ ಮೂಲೆ ಮೂಲೆಗೂ ಪ್ರವಾಸ ಮಾಡುತ್ತ ಸಂಘಟನೆಯನ್ನು ಕಟ್ಟಿ ಬೆಳೆಸುತ್ತ ಹೆಚ್ಚೆಚ್ಚು ಬರಹಗಾರರನ್ನು ಕಲೆ ಹಾಕುತ್ತಾ ಬೆಳೆಸಿದರು.

ಶತಮಾನಗಳಿಂದ ನೋವುಂಡ ಜನ ತಮಗಾಗಿರುವ ನೋವನ್ನು, ಅನ್ಯಾಯವನ್ನು ''ಆಗಿದೆ'' ಎಂದು ಹೇಳಿಕೊಳ್ಳಲು ವೇದಿಕೆಯಿರಲಿಲ್ಲ. ಬಂಡಾಯ ಸಂಘಟನೆಯಿಂದಾಗಿ ಮೌನವಾಗಿದ್ದ ಜನಾಂಗಕ್ಕೆ ಮಾತು ಆಡಲು ವೇದಿಕೆ ಸಿಕ್ಕಂತಾಯಿತು. ಆ ಸಂದರ್ಭವನ್ನು ಬರಗೂರರು ಹೀಗೆ ದಾಖಲಿಸುತ್ತಾರೆ: ''ಬಂಡಾಯ ಸಾಹಿತ್ಯದ ಆಂದೋಲನ ಇಲ್ಲದೆ ಇರುತ್ತಿದ್ದರೆ ಇದರಲ್ಲಿ ಕನಿಷ್ಠ ಶೇ. ೭೫ ಭಾಗದ ಜನಕ್ಕೆ ಮುಖವೇ ಇಲ್ಲದಂಥ ಸ್ಥಿತಿ ಇರುತ್ತಿತ್ತು ಅಂತ ಅನ್ನಿಸುತ್ತದೆ. ಊಹೆ ಅಂತ ಅನ್ನಿಸಬಹುದು. ಆದ್ರೆ ಬಹುಪಾಲು ಸತ್ಯ. ಇವರು ನವ್ಯ ಸಾಹಿತ್ಯದ ಆಶಯ ಹಿಡ್ಕೊಂಡು ಬಂದಿದ್ರೆ ಇವರನ್ನು ಯಾರೂ ಗುರುತಿಸುತ್ತಾ ಇರಲಿಲ್ಲ'' ಎಂದು ಚರ್ಚೆಯಲ್ಲಿ ತರ್ಕಿಸಿದ್ದಾರೆ. ಇದೇ ಮಾತನ್ನು ಕುರಿತು ತಮ್ಮ ''ಬಂಡಾಯ ಸಾಹಿತ್ಯ ಮೀಮಾಂಸೆ'' (೧೯೯೧) ಕೃತಿಯಲ್ಲಿ ''ಬಂಡಾಯ ಸಾಹಿತ್ಯ ಚಳುವಳಿಯ ಫಲವಾಗಿ ಅನೇಕರ ಸಾಂಸ್ಕೃತಿಕ ಒಂಟಿತನ ನೀಗಿದೆ. ಈ ಚಳುವಳಿಗಿಂತ ಮುಂಚಿನ ಸಾಂಸ್ಕೃತಿಕ ವಾತಾವರಣದಲ್ಲಿ ಹೊಸದಾಗಿ ಬರೆಯುವವರಿಗೆ ಬೇಕಾದ ಉತ್ಸಾಹದ ಒತ್ತಾಸೆ ಇರಲಿಲ್ಲ. ದಲಿತರು ಮತ್ತು ಕೆಳ ಸಾಮಾಜಿಕ ಸ್ತರದಿಂದ ಬಂದವರ ಬರವಣಿಗೆ ಬೇರೆಯೇ ರೀತಿಯಲ್ಲಿ ಇರುತ್ತಿದ್ದುದರಿಂದ ಹಳೆಯ ಮಾನದಂಡ ಪ್ರಯೋಗಿಸಿ ಹೀಗಳೆಯುವುದು ಸುಲಭವಾಗಿತ್ತು. 'ಇದು ಕವಿತೆಯೇ ಅಲ್ಲ, ಇದು ಕತೆಯೇ ಅಲ್ಲ' ಎಂಬ ಟೀಕಾಸ್ತ್ರ ಸಾಮಾನ್ಯವಾಗಿತ್ತು. ಅಕ್ಷರ ಸಂಸ್ಕೃತಿಯ ಹೊಸ ಪ್ರವೇಶಕ್ಕೆ ತೊಡಗುತ್ತಿದ್ದ ಪ್ರತಿಭೆಗಳು ತಬ್ಬಿಬ್ಬಾಗುತ್ತಿದ್ದ ಸಂದರ್ಭದಲ್ಲಿ ಬಂಡಾಯ ಸಾಹಿತ್ಯ ಚಳುವಳಿ ಪ್ರಾರಂಭವಾದದ್ದರಿಂದ ಅನೇಕ ದಲಿತ ಹಾಗೂ ಕೆಳಜಾತಿ ವರ್ಗಗಳಿಂದ ಬಂದ ಬರಹಗಾರರಿಗೆ ತಾವು ಸಾಂಸ್ಕೃತಿಕ ಕ್ಷೇತ್ರದಲ್ಲಿ ಒಂಟಿಯಲ್ಲ ಎಂಬ ಧೈರ್ಯ ಬಂದಿತು. ಬರೆಯುವ ಮತ್ತು ಬರೆದದ್ದನ್ನು ಪ್ರಕಟಿಸುವ ಆತ್ಮವಿಶ್ವಾಸ ಮೂಡಿತು. ಸಾಮಾಜಿಕ ಬದಲಾವಣೆ ಬಯಸುವ ಸೃಜನಶೀಲರಿಗೆ ಧೈರ್ಯ ತುಂಬಿಕೊಂಡಿತು.... ಬಂಡಾಯ ಸಾಹಿತ್ಯ ಚಳುವಳಿಯು ಆತ್ಮಸ್ಥೈರ್ಯದ ಬೆಂಬಲಕ್ಕಿದೆಯೇ ಹೊರತು ಆತ್ಮರತಿಯ ಬೆಂಬಲಕ್ಕಲ್ಲ ಎಂದು ಹೇಳಬಯಸುತ್ತೇನೆ.'' ಅದು ತಮ್ಮ ಜವಾಬ್ದಾರಿ ಎಂದು ಬಗೆದು ಸಂಘಟನೆಯನ್ನು ಬೆಳೆಸಿದರು.

ಈ ದೇಶದಲ್ಲಿ ಬರೆಯುವವರಷ್ಟೇ ಬರಹಗಾರರೆಂದು ನಂಬಿಸಿ ಪ್ರಚಾರಪಡಿಸಿ ದುಡಿಯುವ ಮಣ್ಣಿನ ಮಕ್ಕಳಾದ ಜನಪದರ ಸಾಹಿತ್ಯವನ್ನು ಸಾಹಿತ್ಯವೆನ್ನಲೇ ಇಲ್ಲ. ಹೀಗಾಗಿ ಬರಗೂರರು ಅದಕ್ಕೊಂದು ಮಾನ್ಯತೆ ನೀಡಲು ಮುಂದಾದರು.

''ಬರೆಯದೆಯೂ 'ಬರಹಗಾರ'ನಾಗಿರಲು ಸಾಧ್ಯ; ಕವಿ, ಕಲಾವಿದನ ಮನಸ್ಸು ಇರುವವನು ನಿಜವಾದ ಮನುಷ್ಯ. ಇಂಥ ಮನುಷ್ಯನಾಗುವುದು ಮುಖ್ಯ. ಬರೆಯದೆಯೂ ಮನಸ್ಸಿನಲ್ಲಿ ಅಸಂಖ್ಯಾತ ಕನಸಿನ ಕವಿತೆಗಳನ್ನು, ಕಟುವಾಸ್ತವದ



ಕತೆ-ಕಾದಂಬರಿಗಳನ್ನು, ಬದುಕಿನ ವಿವಿಧ ನಾಟಕಗಳನ್ನು ಒಳಗೊಂಡ ಮನುಷ್ಯ ಮಹಾ ಕಲಾಕಾರನಲ್ಲವೇ ? ಇದೆಲ್ಲವನ್ನೂ ಸಾಧ್ಯವಾದರೆ ಬರೆಯುತ್ತಾನೆ, ಇಲ್ಲವಾದರೆ ಕಲಾಕಾರನ ಕರುಳು, ಕಣ್ಣುಗಳನ್ನು ಒಳಗೊಂಡು ಬದುಕುತ್ತಾನೆ. ಅಕ್ಷರದ ಬದಲು ಮಾತಿನಲ್ಲಿ ಅಭಿವ್ಯಕ್ತಿಸುತ್ತಾನೆ. ಇಂಥ ಮನುಷ್ಯ ಮೂಲ ಆಶಯದ ಸಾಹಿತ್ಯ ಸೃಷ್ಟಿ ಬಂಡಾಯ ಸಾಹಿತ್ಯ ಚಳುವಳಿಯ ತಾತ್ವಿಕ ತಿರುಳು.'' (ಬರಗೂರು ರಾಮಚಂದ್ರಪ್ಪ: ಬಂಡಾಯ ಸಾಹಿತ್ಯ ಮೀಮಾಂಸೆ)

'ಬಂಡಾಯ' ಅವರಿಗೆ ಪ್ರೀತಿಯ ಉಸಿರು. ಅವರ ಪ್ರಮುಖ ಕೃತಿಗಳಾದ 'ಬಂಡಾಯ ಸಾಹಿತ್ಯ ಚಳುವಳಿ', 'ಬಂಡಾಯ ಕಾವ್ಯ' (೧೯೯೦) ಮತ್ತು 'ಬಂಡಾಯ ಸಾಹಿತ್ಯ ಮೀಮಾಂಸೆ' (೧೯೯೧) ಕೃತಿಗಳೇ ಸಾಕ್ಷಿ. ಅಷ್ಟೇ ಅಲ್ಲ ಬಂಡಾಯ ಸಾಹಿತ್ಯದ ಧ್ಯೇಯ ಧೋರಣೆಗಳ ಪ್ರಸಾರಕ್ಕಾಗಿ ''ಬಂಡಾಯ'' ಎನ್ನುವ ಮಾಸಪತ್ರಿಕೆಯನ್ನು ತಮ್ಮ ಸ್ವಂತ ಹಣದಿಂದ ಕೆಲಕಾಲ ನಡೆಸಿ ಕಷ್ಟ ಅನುಭವಿಸಿದ್ದು (ಮಹೇಂದ್ರ ಪ್ರಸಾದ: ಮಾನವೀಯ ದನಿ – ಪುಟ ೫೫) ಉಲ್ಲೇಖನೀಯವಾಗುತ್ತದೆ. ಸಂಘಟನೆ ಬೆಳೆದಂತೆಲ್ಲಾ, ಸಾಹಿತ್ಯ ಸೃಷ್ಟಿ ವೃದ್ಧಿಯಾದಂತೆಲ್ಲಾ ಅವರು ತಮ್ಮ ವಿಚಾರಗಳನ್ನು ಹೊಸ ಬಗೆಯಲ್ಲಿ ವಿಸ್ತರಿಸುತ್ತಾ ಹೋಗಿದ್ದಾರೆ. ಸಾಹಿತ್ಯ ಪರಿಷತ್ತಿನ ವಿರುದ್ಧ ಹುಟ್ಟಿಕೊಂಡ ಈ ಸಂಘಟನೆ, ಅದು ತನ್ನ

ನಿಲುವು ಬದಲಿಸಿಕೊಂಡಾಗ ಅದರ ವೇದಿಕೆಯಲ್ಲಿ ಪಾಲ್ಗೊಳ್ಳುವ ಮುಖೇನ ಹೊಸ ಬೆಳವಣಿಗೆಗೆ ಮುಂದಾದರು. ೧೯೯೦ರ ಜೂನ್ ೩೦ ಜುಲೈ ೧ರಂದು ಪರಿಷತ್ತು ಬಂಡಾಯ ಸಾಹಿತ್ಯ ಸಮಾವೇಶವನ್ನು ನಡೆಸಿತು. ಅದನ್ನು ಉದ್ಘಾಟಿಸಿ ಮಾತನಾಡಿದ ಬರಗೂರರ ವಿಚಾರಗಳು ತುಂಬಾ ಮನನೀಯವಾಗಿವೆ. ''ಚರಿತ್ರೆಯನ್ನು ಬಂಡಾಯದ ಮನಸ್ಸು ವೈಚಾರಿಕ ನೆಲೆಯಿಂದ ನೋಡುವ ಪರಿಪಾಠ ಪರಂಪರೆಯ ಉದ್ದಕ್ಕೂ ಬಂದಿರುವಂಥದ್ದೇ. ರಾಜನನ್ನು ದೈವತ್ವದಿಂದ ಬೇರ್ಪಡಿಸಿದ್ದು ಭಕ್ತಿಪಂಥದ ಸಾಧನೆಯಾದರೆ ಬಂಡಾಯ, ಜನರನ್ನು ರಾಜ ಮತ್ತು ದೈವತ್ವಗಳೆರಡರಿಂದಲೂ ಬೇರ್ಪಡಿಸುತ್ತಿರುವ ಸಾಧನೆಯಾಗಿದೆ.'' (ಸಂ. ಜಿ. ಎಸ್. ಸಿದ್ಧಲಿಂಗಯ್ಯ: ಕನ್ನಡ ನುಡಿ, ಜುಲೈ ೧ - ೧೬ ಮತ್ತು ಆಗಸ್ಟ್ ೧-೧೬, ೧೯೯೦)

ಈ ನಡುವೆ ದಲಿತ ಬಂಡಾಯದವರಲ್ಲಿ ಬಿರುಕುಂಟಾಗಿ ಬೇರೆಯಾದದ್ದೂ ಇದೆ. ಬಂಡಾಯ ಸಂಘಟನೆಯನ್ನು ಕೆಲವು ಶಕ್ತಿಗಳು ಒಡೆಯಲು ಪ್ರಯತ್ನಿಸಿದ್ದೂ ಇದೆ. ಹೀಗಾಗಿ ಕೆಲವು ವರ್ಷ ಸಂಘಟನೆ ಕಾವು ಕಳೆದುಕೊಂಡಾಗ ಅದನ್ನು ಪುನಶ್ಚೇತನಗೊಳಿಸಲು ಪ್ರಯತ್ನಿಸಿದರು. ಅದರ ಫಲವಾಗಿ ತಮ್ಮ ತವರು ಜಿಲ್ಲೆಯಾದ ತುಮಕೂರಿನಲ್ಲಿ ೧೧ನೆಯ ರಾಜ್ಯಮಟ್ಟದ ಬಂಡಾಯ ಸಾಹಿತ್ಯ ಸಮ್ಮೇಳನ ೧೯೯೫ ಸೆಪ್ಟೆಂಬರ್ ೧೦, ೧೧ರಂದು ನಡೆಸಿದರು. ಅದನ್ನು ಪುನಶ್ಚೇತನದ ಸಮ್ಮೇಳನ ಎಂದು ಕರೆದು ''ಇಡೀ ರಾಷ್ಟ್ರದಲ್ಲಿಯೇ ಇಂದು ಕರ್ನಾಟಕದ ಬಂಡಾಯ ಸಾಹಿತ್ಯ ಸಂಘಟನೆ ವಿಶಾಲ ವ್ಯಾಪ್ತಿಯ ಏಕೈಕ ಜಾತ್ಯಾತೀತ ಹಾಗೂ ಸಾಂಸ್ಕೃತಿಕ ಸಂಘಟನೆಯಾಗಿರುವುದನ್ನು ಗುರುತಿಸುತ್ತ ಪ್ರಗತಿಪರ ಹೋರಾಟಗಳೆಲ್ಲ ನಿರೀಕ್ಷಿತ ಯಶಸ್ಸು ಪಡೆಯದಿರಲು ಪ್ರಗತಿಗಾಮಿ ಶಕ್ತಿಗಳ ಒಕ್ಕಟ್ಟು ಮತ್ತು ಪ್ರಗತಿಪರ ಶಕ್ತಿಗಳ ಬಿಕ್ಕಟ್ಟೇ ಕಾರಣ'' ಎಂದು ವಿವರಿಸಿದರು. ಹೀಗೆ ಬಂಡಾಯ ಸಂಘಟನೆಗೆ ಪ್ರಾಮಾಣಿಕವಾಗಿ ತಮ್ಮನ್ನು ತೊಡಗಿಸಿಕೊಂಡವರು, ಅದರ ಸಂಸ್ಥಾಪಕರಾಗಿ ಎರಡು ಬಾರಿ ರಾಜ್ಯ ಸಂಚಾಲಕರಾಗಿ ದುಡಿದಿದ್ದಾರೆ. ನಾಡಿನಾದ್ಯಂತ ಸಂಚರಿಸಿ ಅಪಾರ ಬಂಡಾಯ ಸಾಹಿತಿಗಳನ್ನು ಸೃಷ್ಟಿಸಿ ಒಂದು ಜನಪರ ಆಂದೋಲನವನ್ನು ಜನಪ್ರಿಯವಾಗಿಸುತ್ತ ಮುನ್ನಡೆಸುತ್ತಿದ್ದಾರೆ. ಯಾವುದೇ ಜಮೀನ್ದಾರಿ ವ್ಯವಸ್ಥೆ ಪ್ರತಿಗಾಮಿ ಪುರೋಹಿತ ಶಕ್ತಿಗಳು ಪ್ರಗತಿಪರರ ವಿರುದ್ಧ ಸಮರ ಸಾರಿದಾಗ, ಹಲ್ಲೆ ನಡೆದಾಗ – ಸಂಘಟನೆಯನ್ನು ಬೆನ್ನಿಗಿಟ್ಟುಕೊಂಡು ಪ್ರಗತಿಪರರಿಗೆ ಬೆಂಬಲಿಸಿದರು. ಪಟ್ಟಭದ್ರರನ್ನೂ ಪ್ರತಿಭಟಿಸಿದರು. ಕೆ. ಎಸ್. ಭಗವಾನ್‌ರ ''ಶಂಕರಾಚಾರ್ಯ ಮತ್ತು ಪ್ರತಿಗಾಮಿತನ'' ಕೃತಿಯನ್ನು ಕುರಿತಂತೆ ಪೊಲೀಸರು ಮೊಕದ್ದಮೆ ಹೂಡಿದಾಗ ಪ್ರಗತಿಪರ ಸಂಘಟನೆ ಮತ್ತು ವ್ಯಕ್ತಿಗಳಿಂದ ತೀವ್ರ ಪ್ರತಿಭಟನೆ ವ್ಯಕ್ತವಾಯಿತು. ಅದರಲ್ಲೂ ಬಂಡಾಯ ಸಂಘಟನೆ ಆ ಕೇಸನ್ನು ತಾನೇ ನಡೆಸುವುದಾಗಿ ಭಗವಾನರಿಗೆ ಬೆಂಬಲ ಸೂಚಿಸಿತು. ಪ್ರೊ|| ಬರಗೂರರು ''ಈ ಸಂದರ್ಭದಲ್ಲಿ ನಾನು ಮತ್ತು ಬಂಡಾಯ ಸಾಹಿತ್ಯ ಸಂಘಟನೆ ನಿಮ್ಮ ಬೆಂಬಲಕ್ಕೆ ನಿಲ್ಲುವುದು ಖಚಿತ. ಅದು ನಮ್ಮ ಕರ್ತವ್ಯ. ನಿಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವುದನ್ನು ನಾವೆಲ್ಲ ಖಂಡಿಸಲೇಬೇಕು'' (ಸಂ. ನೀಲಾ ಪಾಟೀಲ: ಸಂಕ್ರಮಣ - ಆಗಸ್ಟ್-ಸೆಪ್ಟೆಂಬರ್ ೧೯೯೫). ಈ ರೀತಿ ಬೆಂಬಲಿಸುವುದು ಸಂಘಟನೆಯ ಜವಾಬ್ದಾರಿಯೂ ಆಗಿದೆ. ತನ್ನ ಪ್ರಣಾಳಿಕೆಯಲ್ಲಿ ಸ್ಪಷ್ಟಪಡಿಸಲಾಗಿದೆ. ಆ ಹಿನ್ನೆಲೆಯಲ್ಲಿ ರಾಯಚೂರಿನ ಕುದುರೆಮೋತಿ ಮಠದವರು ಹುಸೇನಬಿ, ಪಾರ್ವತೆವ್ವ ಅವರನ್ನು ಸಾರ್ವಜನಿಕವಾಗಿ ಬೆತ್ತಲೆ ಮೆರವಣಿಗೆ ಮಾಡಿದ್ದನ್ನು, ನಾಡೇ ನಾಚಿ ತಲೆತಗ್ಗಿಸುವಂಥ ಪ್ರಕರಣವನ್ನು ಬಂಡಾಯ ಸಂಘಟನೆಯೇ ಮುಂದಾಗಿ ಪ್ರತಿಭಟಿಸಿತು. ಬೆಂಡಿಗೇರಿ ಮಲ ಪ್ರಕರಣವನ್ನು ಆಂದೋಲನ ರೂಪದಲ್ಲಿ ಪ್ರತಿಭಟಿಸಿತು. ಅದೇ ರೀತಿ ಪೋಲಂಕಿಯವರನ್ನು ಅವರ 'ಸೀತಾಯಣ' ಕೃತಿಗಾಗಿ ಪುರೋಹಿತಶಾಹಿಗಳು ಹಲ್ಲೆ ಮಾಡಿದ್ದು, ಎಚ್. ಎಸ್. ಶಿವಪ್ರಕಾಶರ 'ಮಹಾಚೈತ್ರ' ಗುಲ್ಬರ್ಗಾ ವಿಶ್ವವಿದ್ಯಾಲಯ ಪಠ್ಯ 'ಶೃಂಗಾರ ತರಂಗಿಣಿ' ಕೃತಿಗೆ ಪಟ್ಟಭದ್ರ ಶಕ್ತಿಗಳು ವಿರೋಧಿಸಿದಾಗ ಬರಗೂರರು ಮತ್ತು ಸಂಘಟನೆ ಮುಂದಾಗಿ ಪ್ರಗತಿಗಾಮಿಗಳಿಗೆ ಬೆಂಬಲಿಸಿದುದನ್ನು ಗಮನಿಸಬಹುದು.

ಹೀಗೆ ಬರಗೂರರು ಸಂಘಟನೆಯೊಂದಿಗೆ ಬೆಸುಗೆಯಾಗಿ ಬೆಳೆದುಬಂದದ್ದನ್ನು ಗುರುತಿಸುತ್ತೇವೆ. ಅವರು ಬರಹಗಾರರಾಗಿ ಮಾಡಿದ್ದೂ ಕೂಡ ಅದನ್ನೇ. ಅವರದು ಸೃಜನ ಸಾಹಿತ್ಯವಾಗಿರಲಿ ಅಥವಾ ಸೃಜನೇತರ ಸಾಹಿತ್ಯವಾಗಿರಲಿ ವೈಚಾರಿಕತೆ, ಪ್ರಗತಿಪರತೆ, ಅವರ ಬರಹದ ಮುಖ್ಯ ಕಾಳಜಿಯಾಗಿರುತ್ತದೆ.

ಬರಗೂರರು ಬರಹಗಾರರಾಗಿ ಇಪ್ಪತ್ತಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ಬರೆದಿದ್ದಾರೆ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ರಚನೆ ಕೈಗೊಂಡ ಬರಗೂರರು ನಾಟಕ ಪ್ರಕಾರದಲ್ಲಿ ಮಾತ್ರ ನಿರಾಸೆ ತಾಳಿದ್ದಾರೆನ್ನುವ ಸಂಶಯ ಕಾಡಿದರೂ ನಿರಾಸೆ ಪಡುವುದಕ್ಕೆ ಕಾರಣವೂ ಇಲ್ಲ. ಏಕೆಂದರೆ ಈ ಹಿಂದೆ ೭೦ರ ದಶಕದ ಪ್ರಾರಂಭದಲ್ಲಿ ನಾಟಕ ಬರೆದು, ಆಡಿ, ಆಡಿಸಿದ್ದಾರೆ. ಆದರೆ ಪ್ರಕಟಿಸುವ ಗೋಜಿಗೆ ಹೋಗಿಲ್ಲ. ಏಕೆಂದರೆ ರಚನೆಯ ಸಂದರ್ಭಕ್ಕೆ ಯುವಕರನ್ನು ಗಮನದಲ್ಲಿಟ್ಟುಕೊಂಡು ಬರೆದ ಅವುಗಳು ಸದ್ಯದ ಸಂದರ್ಭದಲ್ಲಿ ಪ್ರಸ್ತುತವಾಗಲಾರವೆಂದು ಪ್ರಕಟಿಸದೇ ಇದ್ದುದಾಗಿ ಅವರೇ ಹೇಳಿಕೊಂಡಿದ್ದಾರೆ.

ಕಾವ್ಯ ಸಂಕಲನ, ಕಥಾ ಸಂಕಲನ, ಕಾದಂಬರಿ, ವಿಚಾರ ಸಾಹಿತ್ಯ, ವಿಮರ್ಶೆ ಹಾಗೂ ಸಂಪಾದನೆ ಹೀಗೆ ಬರಗೂರರ ಸಾಹಿತ್ಯದ ವಿಸ್ತಾರವಿದೆ. ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಅವರ ಲೇಖನಗಳು ಪ್ರಕಟವಾಗಿವೆ.

ಬರಗೂರರು ೧೯೯೧ರಲ್ಲಿ ಪ್ರಕಟಿಸಿದ 'ಬಂಡಾಯ ಸಾಹಿತ್ಯ ಮೀಮಾಂಸೆ' ಕೃತಿಯಲ್ಲಿಯೇ 'ಪುನರ್ ಮೌಲ್ಯೀಕರಣ ಪ್ರಕ್ರಿಯೆಗೆ' ಸಂಬಂಧಿಸಿದ ಬಂಡಾಯ ಪರಂಪರೆಯ ವಿಚಾರವೂ, 'ಸಂಸ್ಕೃತಿ- ಉಪಸಂಸ್ಕೃತಿ ನೆಲೆಗೆ ಸಂಬಂಧಿಸಿದ ವಿಮರ್ಶೆಯ ಸ್ವರೂಪ' ಎಂಬ ವಿಚಾರವೂ ಅಲ್ಲಲ್ಲಿ ಪ್ರಸ್ತಾಪಗೊಂಡಿದ್ದವು. 'ಅಂತರ್ ಶಿಸ್ತೀಯ ಸಂವೇದನೆ' ಕುರಿತು ಚರ್ಚಿಸಿದ್ದರು. ತಮ್ಮ ಈ ವಿಚಾರಗಳನ್ನು ಅಕಾಡೆಮಿಯ ಅಧ್ಯಕ್ಷರಾದ ಬಳಿಕ ಆಯಾ ಪರಿಣತ ಲೇಖಕರನ್ನು ಗುರುತಿಸಿ, ಅಧ್ಯಯನ ನಡೆಯಿಸಿ 'ಅಧ್ಯಯನ ಮಾಲೆ'ಗಳಡಿ ಅವುಗಳನ್ನು ಹೊರತಂದರು. ಅವನ್ನು ಈ ರೀತಿಯಾಗಿ ದಾಖಲಿಸಬಹುದು. ಉಪ ಸಂಸ್ಕೃತಿಗಳ ಅಧ್ಯಯನ; ಅಂತರ್‌ಶಿಸ್ತೀಯ ಅಧ್ಯಯನ; ಕನ್ನಡ ಸಾಹಿತ್ಯ ಪುನರ್ ಮೌಲ್ಯೀಕರಣ; ಸಾಮಾಜಿಕ ಚಿಂತನ ಮಾಲೆ.

ಬರಗೂರರ ಇನ್ನೊಂದು ಆಸಕ್ತಿಯ ಕ್ಷೇತ್ರ ಚಲನಚಿತ್ರ ರಂಗ. ಅವರು ಐದು ಕನ್ನಡ ಚಲನಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಅವುಗಳೆಂದರೆ, ಒಂದು ಊರಿನ ಕಥೆ (೧೯೮೭), ಬೆಂಕಿ (೧೯೮೪), ಸೂರ್ಯ (೧೯೮೭), ಕೋಟೆ (೧೯೯೯) ಮತ್ತು ಕರಡಿಪುರ (೧೯೯೬). ಇವುಗಳಲ್ಲಿ ಮೊದಲಿನ ನಾಲ್ಕು ಅವರ ಪ್ರಕಟಿತ ಕಾದಂಬರಿಗಳ ಕಥಾವಸ್ತುಗಳನ್ನೊಳಗೊಂಡಿವೆ. ಇವರು ನಿರ್ದೇಶಿಸಿದ 'ಒಂದು ಊರಿನ ಕಥೆ' ಚಲನಚಿತ್ರಕ್ಕಾಗಿ ೧೯೭೮ನೇ ಸಾಲಿನ ಶ್ರೇಷ್ಠ ಕಥಾಲೇಖಕ ಹಾಗೂ ಶ್ರೇಷ್ಠ ಸಂಭಾಷಣೆ ಲೇಖಕ ರಾಜ್ಯ ಪ್ರಶಸ್ತಿ – ಎಂಬೆರಡು ಪ್ರಶಸ್ತಿಗಳನ್ನು ಪಡೆದಿದ್ದಾರೆ. ಹಾಗೆಯೇ 'ಬೆಂಕಿ' ಚಲನಚಿತ್ರಕ್ಕಾಗಿ ೧೯೮೪ನೇ ಸಾಲಿನ ಶ್ರೇಷ್ಠ ಕಥಾಲೇಖಕ, ಶ್ರೇಷ್ಠ ನಿರ್ದೇಶಕ ಪ್ರಶಸ್ತಿಗಳಲ್ಲದೆ ರಾಜ್ಯದ ವರ್ಷದ ಶ್ರೇಷ್ಠ ಚಿತ್ರವಾಗಿಯೂ ಆಯ್ಕೆಯಾಗಿ ಮೂರು ಪ್ರಶಸ್ತಿಗಳನ್ನು ಪಡೆದಿದ್ದಾರೆ. ಅಲ್ಲದೆ ಅವರ ನಿರ್ದೇಶನದ 'ಸೂರ್ಯ' ಚಲನಚಿತ್ರಕ್ಕಾಗಿ ದ್ವಿತೀಯ ಶ್ರೇಷ್ಠ ನಿರ್ದೇಶಕ ಹಾಗೂ ದ್ವಿತೀಯ ಶ್ರೇಷ್ಠ ಚಿತ್ರ ಪ್ರಶಸ್ತಿ – ಹೀಗೆ ಎರಡು ರಾಜ್ಯ ಪ್ರಶಸ್ತಿಗಳನ್ನು ಪಡೆದಿದ್ದಲ್ಲದೆ, ಈ 'ಸೂರ್ಯ' ಚಲನಚಿತ್ರವು ರಷ್ಯಾದ ಅಂತರರಾಷ್ಟ್ರೀಯ ಚಲನ ಚಿತ್ರೋತ್ಸವಕ್ಕೆ (೧೯೯೯) ಆಯ್ಕೆಯಾಗಿತ್ತು. 'ಕೋಟೆ' ಚಲನಚಿತ್ರಕ್ಕಾಗಿ ೧೯೯೯ನೇ ಸಾಲಿನ ಶ್ರೇಷ್ಠ ಗೀತ ರಚನೆಕಾರ, ರಾಜ್ಯಪ್ರಶಸ್ತಿ ಬಂದಿದೆ. – ಹೀಗೆ ಸಿನಿಮಾ ರಂಗದಲ್ಲೂ ಅವರು ಸಮರ್ಥರಾಗಿ ದುಡಿದು ಕಥೆ, ಗೀತೆ, ಸಂಭಾಷಣೆ ಹಾಗೂ ನಿರ್ದೇಶನ ಎಲ್ಲದರಲ್ಲೂ ಪ್ರಶಸ್ತಿ ಪಡೆದಿದ್ದಾರೆ. ಪ್ರಬಲ ಸಮೂಹ ಮಾಧ್ಯಮವಾದ ಚಲನಚಿತ್ರ ಶಿಕ್ಷಿತ - ಅಶಿಕ್ಷಿತ ಜನ ಸಮುದಾಯವನ್ನು ತಲುಪುವುದರಿಂದ ಅವುಗಳ ಮೂಲಕ ತಮ್ಮ ವಿಚಾರ ಹರಡಲು ಈ ಮಾಧ್ಯಮವನ್ನು ಆಯ್ಕೆ ಮಾಡಿಕೊಂಡಿದ್ದು ಉಚಿತವಾದುದಾಗಿದೆ.

ವಿಚಾರಪರತೆಗೆ ಮತ್ತು ನೇರ ನಡೆ - ನುಡಿಗೆ, ನಿರ್ಭಿಡೆಯ ಬದುಕಿಗೆ ಹೆಸರಾದ ಬರಗೂರರು ರಾಜ್ಯದ ಹಲವಾರು ಗೌರವಾನ್ವಿತ ಸ್ಥಾನಗಳನ್ನು ನಿರ್ವಹಿಸಿದ್ದಾರೆ. ಅವುಗಳಲ್ಲಿ ಬಂಡಾಯ ಸಾಹಿತ್ಯ ಸಂಘಟನೆಯ ಸ್ಥಾಪಕ ರಾಜ್ಯ ಸಂಚಾಲಕರಾಗಿ (ಎರಡು ಬಾರಿ), ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಎರಡು ಬಾರಿ ಕಾರ್ಯ ನಿರ್ವಹಿಸಿದರಲ್ಲದೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 'ಜನಪ್ರಿಯ ಪುಸ್ತಕ ಮಾಲೆ' ಆಯ್ಕೆ ಸಮಿತಿ, ಸಮಗ್ರ ಕನಕ ಸಾಹಿತ್ಯ ಸಂಪುಟ ಸಂಪಾದಕ ಸಮಿತಿ, ರಾಜ್ಯ ಮಟ್ಟದ ಪುಸ್ತಕ ಸಗಟು ಖರೀದಿ ಆಯ್ಕೆ ಸಮಿತಿ, ರಾಜ್ಯ ಚಲನಚಿತ್ರ ಆಯ್ಕೆ ಸಮಿತಿ, ಕನ್ನಡ ವಿಶ್ವವಿದ್ಯಾಲಯ ಹಂಪಿಯ ಸಿಂಡಿಕೇಟಿಗೆ – ಹೀಗೆ ಈ ಎಲ್ಲ ಗೌರವಾನ್ವಿತ ಸ್ಥಾನಗಳಿಗೆ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ಆದರೆ ಬರಗೂರರು ತಾವು ನಂಬಿದ ಮೌಲ್ಯಗಳನ್ನೂ, ತಾಳಿದ ನಿಲುವುಗಳನ್ನೂ ಬದಲಿಸಿದವರಲ್ಲ. ಆಳುವ ವರ್ಗದ ಹಿತಾಸಕ್ತಿಗಳೊಂದಿಗೆ ಎಂದೂ ರಾಜಿ ಮಾಡಿಕೊಂಡವರಲ್ಲ.

(ಆಧಾರ - ಹಲವು ಮೂಲಗಳಿಂದ)

**ಅನಸೂಯ ಕಾಂಬಳೆ**
ಸರಕಾರಿ ಮಹಿಳಾ ಪದವಿ ಮಹಾವಿದ್ಯಾಲಯ, ಜಮಖಂಡಿ
ಬಾಗಲಕೋಟೆ ಜಿಲ್ಲೆ



# ರಾಕ್ಷಸ

— ಅದೀಬ್ ಅಖ್ತರ್

ಕಥೆಗಳನ್ನು ಹಗಲಲ್ಲಿ ಬರೆದರೂ ಅವುಗಳನ್ನು ಹೆಣೆಯುವುದು ಮಾತ್ರ ಅರ್ಧ ರಾತ್ರಿಯಲ್ಲಿ, ಕತ್ತಲೆಯಲ್ಲಿ ಹಾಸಿಗೆ ಮೇಲೆ ಒದ್ದಾಡುತ್ತ.

ಇಂದು ಸಹ ಎಲ್ಲರೂ ಸುಖ ನಿದ್ರೆಯಲ್ಲಿದ್ದಾಗ, ಹೊಸದೊಂದು ಕಥೆ ಹೆಣೆಯುತ್ತಿದ್ದೆ – ಇದ್ದಕ್ಕಿದ್ದಂತೆ ಎಲ್ಲೋ ಓದಿದ ಕಥೆಯೊಂದು ನೆನಪಾಯಿತು. ರಾಕ್ಷಸನ ಕಥೆ – ಬೇಡ ಆ ಕಥೆ ಖಂಡಿತವಾಗಿಯೂ ಹೇಳುವುದಿಲ್ಲ. ಭಯವಾಗುತ್ತೆ. ಭಯಂಕರವಾದದ್ದನ್ನು ಯೋಚಿಸುತ್ತ ಮಲಗಿದರೆ ಕಿರುಚಿಕೊಂಡು ಏಳುವುದು ನನ್ನ ಅಭ್ಯಾಸ. ಅದಕ್ಕೆ ಕೆಟ್ಟದ್ದನ್ನು ಯೋಚಿಸುವುದಿಲ್ಲ. ದಿನದ ಆರಂಭವನ್ನು ಒಳ್ಳೆ ವಿಚಾರಗಳಿಂದ ಮಾಡಬೇಕಂತೆ. ಆದರೆ ನನ್ನ ಮಟ್ಟಿಗೆ ಹೇಳಬೇಕೆಂದರೆ ನಾನು ರಾತ್ರಿಯ ಆರಂಭ ಸಹ ಒಳ್ಳೆ ವಿಚಾರಗಳಿಂದ ಮಾಡಬೇಕಾಗಿದೆ.

ಕತ್ತಲೆ ಕಂಡರೆ ರಾಕ್ಷಸನಿಗೆ ಇಷ್ಟವಂತೆ. ವಿಶೇಷವಾಗಿ ಮನುಷ್ಯರ ಮನಸ್ಸುಗಳಲ್ಲಿರುವ ಕತ್ತಲೆಯೆಂದರೆ ತುಂಬಾನೇ ಇಷ್ಟವಂತೆ. ಯಾರ ಮನಸ್ಸಿನಲ್ಲಿ ಕತ್ತಲೆ ಇರುತ್ತದೆಯೋ ರಾಕ್ಷಸ ಮೆಲ್ಲನೆ ಹೋಗಿ ಅವರಲ್ಲಿ ಸೇರಿಕೊಳ್ಳುತ್ತಾನಂತೆ ಮತ್ತು ಸಮಯ ಸಿಕ್ಕಿದಾಗಲೆಲ್ಲ ಧರ್ಮದ ಹೆಸರಿನಲ್ಲಿ ರಕ್ತ ಹರಿಸಲು ಪ್ರಚೋದಿಸುತ್ತಾನಂತೆ. ನನ್ನ ಮನಸ್ಸಿನಲ್ಲಿ ಕತ್ತಲೆಯಿದ್ದರೂ ಇರಬಹುದು. ಅದರ ಬಗ್ಗೆ ನಾನು ಸ್ಪಷ್ಟವಾಗಿ ಏನೂ ಹೇಳುವುದಿಲ್ಲ. ಆದರೆ ಒಂದು ಮಾತಂತೂ ನಿಜ. ನನಗೆ ಯಾವ ಧರ್ಮದಲ್ಲೂ ನಂಬಿಕೆಯಿಲ್ಲ. ತಮ್ಮ ತಮ್ಮ ಧರ್ಮಕ್ಕಾಗಿ ಎಲ್ಲರೂ ತುಂಬಾನೇ ರಕ್ತ ಹರಿಸಿದ್ದಾರೆ. ಧರ್ಮಗಳೇ ನಮಗೆ ದಾರಿ ತಪ್ಪಿಸುತ್ತಿವೆಯೆಂದು ನನ್ನ ನಂಬಿಕೆ.

ರಾಕ್ಷಸನ ಹಿಂದೆ ರಣಹದ್ದುಗಳು ಸಹ ಇರುತ್ತವೆಯಂತೆ. (ಮತ್ತೆ ಅದೇ ಕಥೆ – ಇಂದು ರಾಕ್ಷಸನ ಭಯ ನನಗೆ ಯಾಕೆ ಕಾಡುತ್ತಿದೆಯೋ ತಿಳಿಯುತ್ತಿಲ್ಲ). ರಾಕ್ಷಸ ಹೇಳಿದಂತೆ ರಣಹದ್ದುಗಳು ಚಾಚೂ ತಪ್ಪದೆ ನಡೆದುಕೊಳ್ಳುತ್ತವೆಯಂತೆ.

ರಾಕ್ಷಸನ ಬಗ್ಗೆ ಯೋಚಿಸಬಾರದೆಂದು ದೀಪ ಬೆಳಗಿಸಿ ಪುಸ್ತಕವೊಂದನ್ನು ಎತ್ತಿಕೊಂಡೆ. ಓದಲು ಮನಸ್ಸಾಗದೆ ದೀಪ ಆರಿಸಿದೆ.

ನನ್ನೊಳಗೊಬ್ಬ ರಾಕ್ಷಸ ಇರಬಹುದೆ ? ಮತ್ತೆ ಮತ್ತೆ ಅವನದೇ ಯೋಚನೆ. ನೆಮ್ಮದಿ ಹಾಳಾಯಿತು. ಬಹಳಷ್ಟು ಹೊತ್ತು ಒದ್ದಾಡಿದ ಬಳಿಕ ನಿದ್ದೆ ಹೋದೆ.

ನಿದ್ದೆ ಹೋದ ಸ್ವಲ್ಪ ಹೊತ್ತಿನ ನಂತರ ಕಿರುಚಾಟದಿಂದ ಎಚ್ಚರವಾಯಿತು. ಕಣ್ಣು ತೆರೆದಾಗ ಧಗಧಗನೆ ಮನೆಯುರಿಯುತ್ತಿರುವುದು ಅನುಭವಕ್ಕೆ ಬಂದು ಗಲಿಬಿಲಿಗೊಂಡೆ. ನಾನು ನೋಡುತ್ತಿರುವುದು ನಿಜವೇ ಅಥವಾ ಕನಸೆ ? ಇದು ಕನಸಾಗಿರಲಿಲ್ಲ. ಕೋಣೆಯಿಂದ ಹೊರಬರುವಾಗ ಮೊನ್ನೆ ತಾನೇ ಬರೆದು ಮುಗಿಸಿದ ಹೊಸ ಕಾದಂಬರಿಯ ಹಸ್ತಪ್ರತಿ ಎತ್ತಿಕೊಳ್ಳಲು ಹೋದಾಗ ಅದು ಬೆಂಕಿಗೆ ಆಹುತಿಯಾಗಿರುವ ದೃಶ್ಯ ಎದುರಾಯಿತು. ಹಸ್ತಪ್ರತಿ ಒಂದೇ ಅಲ್ಲ, ಅದರ ಪಕ್ಕದಲ್ಲಿ ಸಾಲಾಗಿ ಜೋಡಿಸಿದ್ದ ಎಲ್ಲಾ ಧರ್ಮದ ಪವಿತ್ರ ಗ್ರಂಥಗಳನ್ನು ಬೆಂಕಿ ನುಂಗಿಹಾಕಿತ್ತು. ಬೆಂಕಿ ಬಹಳ ಕೆಟ್ಟದ್ದು. ಅದು ನುಂಗುವಾಗ ಯಾರನ್ನು ನುಂಗುತ್ತಿದ್ದೇನೆ, ಯಾಕಾಗಿ ನುಂಗುತ್ತಿದ್ದೇನೆಂದು ಯೋಚಿಸುವುದಿಲ್ಲ. ಗ್ರಂಥಗಳ ಮಾತಿರಲಿ, ಅವುಗಳೇನು ಸಿಕ್ಕೇ ಸಿಗುತ್ತವೆ. ಆದರೆ ಅವುಗಳನ್ನು ಓದುವವರೇ ಬೂದಿಯಾಗುತ್ತಿರಬಹುದೆಂದು ಯೋಚಿಸಿ ಕೋಣೆಯಿಂದ ಹೊರಬಂದು ಮಡದಿ ಮಕ್ಕಳನ್ನು ಕೂಗಿದೆ. ಯಾರೂ ಉತ್ತರಿಸಲಿಲ್ಲ. ಅವರು ಹೊರಗೆ ಓಡಿರಬಹುದೇ ಅಥವಾ ಅವರನ್ನು ಬೆಂಕಿ ನುಂಗಿಕೊಂಡಿರಬಹುದೇ ? ಈ ಪ್ರಶ್ನೆಯಿಂದ ಗರ ಬಡಿದಂತಾಯಿತು. ಬಾಗಿಲು ಕಡೆ ಓಡಿ ಅದನ್ನು ತೆರೆಯುವ ಪ್ರಯತ್ನ ಮಾಡಿದೆ. ಆದರೆ ತೆರೆಯಲು ಸಾಧ್ಯವಾಗಲಿಲ್ಲ. ಯಾರೋ ಹೊರಗಡೆ ಚಿಲಕ ಹಾಕಿದ್ದರು. ಚಿಲಕ ಹಾಕಿದವರು ಯಾರು ? ರಾಕ್ಷಸ ಕತ್ತಲೆಯಿಂದ ಹೊರಬಂದಿರಬಹುದೇ ? ಅವನೊಂದಿಗೆ ರಣಹದ್ದುಗಳು ಸಹ ಇರಬೇಕು.

ಯಾವಾಗಲೂ ಮನಸ್ಸುಗಳನ್ನು ತೆರೆದಿಟ್ಟಿರಿ, ಅಲ್ಲಿ ಕತ್ತಲೆ ಹರಡಲು ಅವಕಾಶ ಕೊಡಬೇಡಿ ಎಂದು ಯಾರೋ ಹೇಳಿದ್ದರಲ್ಲ ? ಯಾರು ಹೇಳಿದ್ದು ನೆನಪಿಗೆ

ಬರುತ್ತಿಲ್ಲ. ಕತ್ತಲೆ ಹರಡುವಂತೆ ಮಾಡಿದ್ದು ತಪ್ಪಾಯಿತು. ರಾಕ್ಷಸ ಬಂದು ಆಶ್ರಯ ತೆಗೆದುಕೊಂಡ. ಈಗ ಅವನು ಕತ್ತಲೆಯಿಂದ ಹೊರಬಂದು ಎಲ್ಲರ ಮನೆಗಳಿಗೆ ಬೆಂಕಿ ಹಾಕಿಸುತ್ತಿದ್ದಾನೆ. ಈ ಕೆಲಸ ರಾಕ್ಷಸನದಿರಬಹುದೇ ಅಥವಾ ಮನೆಗೆ ಆಕಸ್ಮಿಕವಾಗಿ ಬೆಂಕಿ ತಗಲಿರಬಹುದೇ? ಆಕಸ್ಮಿಕವಾಗಿ ಬೆಂಕಿ ತಗಲುವುದಕ್ಕೆ ಅವಕಾಶವೇ ಇರಲಿಲ್ಲ, ಏಕೆಂದರೆ ನಮ್ಮ ಮನೆಯಲ್ಲಿ ಮಲಗುವಾಗ ಒಲೆ ಆರಿಸಿ ಮಲಗುತ್ತೇನೆ.

ಹೊರಗಡೆ ಕಿರುಚಾಟದೊಂದಿಗೆ ಕೇಕೆ ಹಾಕುವುದು ಸಹ ಕೇಳಿಸಿತು. ಕಿರುಚಾಡುತ್ತಿರುವುದು ಯಾರು, ಕೇಕೆ ಹಾಕುತ್ತಿರುವವರು ಯಾರು? ಯಾಕೆ? ಅದೇ ಸಮಯದಲ್ಲಿ ನನ್ನೊಳಗಿದ್ದ ರಾಕ್ಷಸ ಮೆಲ್ಲನೆ ಹೊರ ಬಂದ. ''ಅವರು ನಿನ್ನ ಮನೆಗೆ ಬೆಂಕಿ ಹಾಕಿದ್ದರೆ, ನೀನು ಅವರ ಮನೆಗೆ....'' ಪಿಸು ಮಾತಿನಲ್ಲಿ ಹೇಳಿದ ರಾಕ್ಷಸ.

ನಾನು ಸುಟ್ಟು ಬೂದಿಯಾದರೂ ಪರವಾಗಿಲ್ಲ, ಅಂಥ ನೀಚ ಕೆಲಸ ನನ್ನಿಂದಾಗುವುದಿಲ್ಲ, ಇಲ್ಲಿಂದ ಹೊರಟು ಹೋಗು, ನನಗೆ ಏನನ್ನೂ ಉಪದೇಶಿಸ ಬೇಡ ಎಂದು ಉರಿಯುತ್ತಿರುವ ಕಿಟಕಿಯನ್ನು ಮುರಿದು ಹೊರಗೆ ಧುಮುಕಿದೆ.

ಹೊರಗಡೆ ರಾಕ್ಷಸ ನಿಂತಿದ್ದ, ಅಲ್ಲಿ ರಣಹದ್ದುಗಳು ಸಹ ಇದ್ದವು. ಅವರು ನನ್ನನ್ನು ನೋಡಲಿಲ್ಲ, ಯಾವ ಕಾರಣಕ್ಕೂ ಅವರ ಕಣ್ಣಿಗೆ ಬೀಳಬಾರದೆಂದು ಮುಂಜಾಗ್ರತೆ ವಹಿಸುತ್ತ ಒಂದು ಕಡೆ ಮರೆಯಲ್ಲಿ ಹೋಗಿ ನಿಂತುಕೊಂಡೆ. ಮನೆ ಮಂದಿಯವರ ಬಗ್ಗೆ ಯಾರನ್ನು ವಿಚಾರಿಸುವುದೆಂದು ಯೋಚಿಸುತ್ತಿರುವಾಗಲೇ ನನ್ನ ಮೈ ಅನೇಕ ಕಡೆ ಸುಟ್ಟಿರುವುದು ಗಮನಕ್ಕೆ ಬಂತು.

ಏನೇನೋ ಯೋಚಿಸುತ್ತ ಸುತ್ತ ದೃಷ್ಟಿ ಬೀರಿದೆ. ದೃಷ್ಟಿ ಹೋಗುವವರೆಗೂ ಬೆಂಕಿ ಕಾಣಿಸುತ್ತಿತ್ತು. ಅಷ್ಟರಲ್ಲೇ ಸ್ತ್ರೀಯೊಬ್ಬಳು ಕಿರುಚುತ್ತ ನನ್ನ ಕಡೆಗೆ ಬರುತ್ತಿರುವುದು ಕಂಡೆ. ಅವಳ ಮೈಮೇಲೆ ಬಟ್ಟೆಯಿರಲಿಲ್ಲ (ಧರ್ಮದ ಹೆಸರಲ್ಲಿ ಇನ್ನೊಂದು ಹಿಂಸೆ)

'ಯಾಕೆ ಓಡುತ್ತಿದ್ದೀಯಾ ನಿಲ್ಲು ನಿಲ್ಲು' ಎಂದೆ.

'ನೀನೊಬ್ಬ ಬಾಕಿ ಇದ್ದಿಯೇನು?' ಎಂದು ಹೇಳಿ ಅವಳು ಓಡುತ್ತ ಹೋಗಿ ಉರಿಯುತ್ತಿರುವ ಬೆಂಕಿಗೆ ಹಾರಿದಳು.

ಉಸಿರು ಕಟ್ಟಿದಂತಾಯಿತು. ಅವಳೊಂದಿಗೆ ಮಾತಾಡದಿದ್ದರೆ ಬಹುಶಃ ಅವಳು ಬೆಂಕಿಗೆ ಹಾರುತ್ತಿರಲಿಲ್ಲವೇನೋ! ಅನ್ಯಾಯವಾಗಿ ನನ್ನಿಂದ ಎಂಥ ಅಸಾಹುತ ಜರುಗಿ ಹೋಯಿತೆಂದು ಪಶ್ಚಾತ್ತಾಪ ಪಡುತ್ತಿರುವಾಗಲೇ ಎದುರಿನಿಂದ ವೃದ್ಧನೊಬ್ಬ ನರಳುತ್ತ ಬಂದ. ಅವನ ದೇಹದ ಅರ್ಧಕ್ಕಿಂತ ಹೆಚ್ಚಿನ ಭಾಗ ಸುಟ್ಟುಹೋಗಿತ್ತು....

ಇವನೊಂದಿಗೆ ಮಾತಾಡಬೇಕೋ ಬೇಡವೋ ಎಂದು ಜಿಜ್ಞಾಸೆಗೆ ಒಳಗಾದೆ. ಕೊನೆಗೆ ಪ್ರಶ್ನಿಸಿದೆ. 'ಯಾರು ನಿನ್ನನ್ನು ಸುಟ್ಟಿದ್ದು?'

'ನನ್ನ ಧರ್ಮ' ಎಂದು ಉತ್ತರಿಸಿ ಅವನು ಅಲ್ಲಿ ನಿಲ್ಲಲಿಲ್ಲ.

ಮುಂದಿನ ಜನ್ಮದಲ್ಲಿ ಪ್ರಾಣಿಯಾಗಿ ಹುಟ್ಟಿದರೆ ಚೆನ್ನಾಗಿರುತ್ತ ಎನ್ನಿಸಿತು.

ದೂರದಿಂದ ಹತ್ತಾರು ಮಂದಿ ಆಯುಧಗಳನ್ನು ಹಿಡಿದುಕೊಂಡು ಬರುತ್ತಿದ್ದರು.

ರಕ್ತಪಾತ ಮಾಡಲು, ಮನೆಗಳಿಗೆ ಬೆಂಕಿ ಹಾಕಲು ಯಾವ ಧರ್ಮ ಗ್ರಂಥದಲ್ಲಿ ಬರೆದಿದೆ ಹೇಳಿ ಎಂದು ಅವರನ್ನು ಕೇಳಬೇಕೆಂದಾಸೆಯಾಯಿತು. ಅವರು ಇಡೀ ಜೀವನದಲ್ಲಿ ಒಮ್ಮೆಯೂ ಧರ್ಮಗ್ರಂಥ ಮುಟ್ಟುವ ಮಾತಿರಲಿ, ಧರ್ಮ ಗ್ರಂಥದ ಮುಖವನ್ನೆ ನೋಡಿರುವುದೇ ಕಾಣೆ ಎನಿಸಿತು. ಮೌನಿಯಾದೆ.

ಧರ್ಮದ ಹೆಸರಿನಲ್ಲಿ ಮುಗ್ಧರನ್ನು ಕೊಲೆ ಮಾಡುವುದನ್ನು ನಿಲ್ಲಿಸಿ ಎಂದು ಕಿರುಚಿಕೊಳ್ಳುವ ಮನಸ್ಸಾಗಿ ಬಾಯಿ ತೆರೆಯಲಿಲ್ಲ.

ಎಲ್ಲ ಧರ್ಮದ ಮುಖಂಡರು ಕೊಲೆ, ಸುಲಿಗೆ, ಬೆಂಕಿ ಹರಡುತ್ತಿರುವುದು ಧರ್ಮಕ್ಕಾಗಿ ಅಲ್ಲ – ಕುರ್ಚಿಗಾಗಿ ಎಂದು ಮೊನ್ನೆ ತಾನೇ ಯಾರೋ ಹೇಳಿದ್ದು ನೆನಪಾಯಿತು.

'ಅವರು ನಮ್ಮವರನ್ನು ಸುಟ್ಟಿದ್ದಾರೆ, ಅವರನ್ನು ನಾವು ಸುಡಲೇಬೇಕು',

ಹತ್ತಿರದಲ್ಲಿ ಯಾರೋ ಇನ್ನೊಬ್ಬನಿಗೆ ಹೇಳುತ್ತಿದ್ದ.

ಯಾವ ಧರ್ಮಕ್ಕೂ ನಾನು ಅಂಟಿಕೊಂಡಿಲ್ಲ. ನಾನು ಯಾವ ಕಡೆಯವನು?

ಎದುರಿಂದ ಹತ್ತಾರು ಮಂದಿ ಬರುತ್ತಿದ್ದರು. ಇವರಲ್ಲಿ ಯಾರಾದರೂ ಪರಿಚಯಸ್ಥರು ಸಿಗಬಹುದೆಂದು ತುಂಬ ಆಸೆಯಿಂದ ಅವರ ಕಡೆ ನೋಡಿದೆ. ಆದರೆ ಅವರೆಲ್ಲರೂ ಮುಖವಾಡ ಧರಿಸಿಕೊಂಡಿದ್ದಾರೆ ಎಂದು ಅರಿವಿಗೆ ಬಂತು. ಅವರೆಲ್ಲರೂ ನನ್ನ ಸಮೀಪದಿಂದ ಹೊರಟುಹೋದರು. ಅವರಿಗೆ ನನ್ನ ಗುರುತು ಸಿಗಲಿಲ್ಲವೇ ಎಂದು ನನಗೆ ನಾನೇ ಕೇಳಿಕೊಳ್ಳುತ್ತಿರುವಾಗ ನಾನು ಸಹ ಮುಖವಾಡ ಧರಿಸಿಕೊಂಡಿರುವುದು ಗಮನಕ್ಕೆ ಬಂತು. ಮುಖದ ಮೇಲಿರುವ ಮುಖವಾಡವನ್ನು ಮೊದಲು ಕಳಚಿ ಬಿಸಾಕಬೇಕೆಂದು ಮುಖವಾಡ ಕಳಚಲು ಪ್ರಯತ್ನಪಟ್ಟೆ. ಆದರೆ ಎಷ್ಟೇ ಪ್ರಯತ್ನಿಸಿದರೂ ಮುಖವಾಡ ಕಳಚಲು ಸಾಧ್ಯವಾಗಲಿಲ್ಲ.

ಅಷ್ಟರಲ್ಲೆ ಒಬ್ಬ ಸಮೀಪ ಬಂದು 'ನಿನ್ನ ಹೆಸರೇನು?' ಎಂದು ಕೇಳಿದ.

'ನನಗೆ ಹೆಸರಿಲ್ಲ, ನಾನೊಬ್ಬ ಮನುಷ್ಯ' ನಿರ್ಭಯದಿಂದ ಉತ್ತರಿಸಿದೆ.

ಕೆಲ ಸಂದರ್ಭದಲ್ಲಿ ಬಹಳಷ್ಟು ಜನ ಮುಖದ ಮೇಲೆ ಮುಖವಾಡ ಧರಿಸದಿದ್ದರೂ, ಒಳ್ಳೆಯ ಹೆಸರಿಟ್ಟುಕೊಂಡಿದ್ದರು. ಮನಸ್ಸಿನಲ್ಲಿ ಮಾತ್ರ ರಾಕ್ಷಸನಿಗೆ ಆಶ್ರಯ ಕೊಟ್ಟಿರುತ್ತಾರೆ. ಇಂಥ ಜನ ಎಲ್ಲ ಧರ್ಮದಲ್ಲಿರುತ್ತಾರೆಂದು ರಾಕ್ಷಸನ ಕಥೆಯಲ್ಲಿ ಓದಿದ್ದೆ. ಹೆಸರುಗಳು ಮಾತ್ರ ಬೇರೆ ಬೇರೆ. ಆದರೆ ಬುದ್ಧಿ ಮಾತ್ರ ಒಂದೇ – ಇನ್ನೊಬ್ಬರನ್ನು ಸುಡುವುದು.

ನಾನು ಯಾವ ಪ್ರಾರ್ಥನಾ ಮಂದಿರ ಕಟ್ಟುವುದಕ್ಕೂ ಅಥವಾ ಕಟ್ಟದಿರುವುದಕ್ಕೂ ರಕ್ತ ಹರಿಸಲಾರೆ. ಅಮ್ಮ ಕಾಯಿಲೆ ಬಿದ್ದಾಗ ರಕ್ತ ಸಿಗದೆ ಎಷ್ಟೊಂದು ಸಮಸ್ಯೆಯಾಯಿತು. ಕೊನೆಗೆ ರಕ್ತ ಸಿಗದೆ ಅಮ್ಮ ಸತ್ತು ಹೋದಳು.

ಬಾಯಾರಿಕೆಯಾಯಿತು. ಎಲ್ಲಾದರೂ ನೀರು ಸಿಗಬಹುದೆಂದು ಸುತ್ತ ದೃಷ್ಟಿ ಬೀರಿದೆ. ನೀರು ಇರಲಿಲ್ಲ. ಎಲ್ಲಾ ಕಡೆ ರಕ್ತ ಹರಿಯುತ್ತಿತ್ತು.

ಹತ್ತಾರು ಹದ್ದುಗಳು ಬೊಗಸೆಯಲ್ಲಿ ರಕ್ತವನ್ನು ಎತ್ತಿಕೊಂಡು ಕುಡಿಯುತ್ತಿದ್ದವು. ಅಲ್ಲಿ ಇನ್ನಷ್ಟು ಹೊತ್ತು ನಿಂತುಕೊಂಡರೆ ಹದ್ದುಗಳು ನನ್ನ ಮೇಲೆ ಆಕ್ರಮಣ ಮಾಡಬಹುದೆಂದು ಭಯವಾಗಿ ತೋಚಿದ ದಿಕ್ಕಿನಲ್ಲಿ ಓಡಿದೆ.

'ಯಾರ ಯಾರ ಕಡೆಯವರು ಎಷ್ಟೆಷ್ಟು ಮಂದಿ ಸತ್ತಿದ್ದಾರೆ ಇಲ್ಲಿದೆ ನೋಡಿ ಪಟ್ಟಿ' ಎಂದ ಒಬ್ಬ.

'ಮನುಷ್ಯರು ಎಷ್ಟು ಜನ ಸತ್ತಿದ್ದಾರೆ ಮೊದಲು ಹೇಳಿ.... ಎಲ್ಲರೂ ಮನುಷ್ಯರೇ' ಎಂದೆ. 'ಹೋಗೋ ಹುಚ್ಚ' ನನ್ನ ಮುಖದ ಮೇಲೆ ಉಗಿದು ಉತ್ತರಿಸಿದ ಅವನು.

'ಇವನು ನಮ್ಮ ಕಡೆಯವನಲ್ಲ. ಇವನನ್ನು ಸುಡಿರಿ' ಅವನು ತನ್ನ ಜತೆಗಾರರಿಗೆ ಸೂಚಿಸಿದ.

ಅಲ್ಲಿಂದ ಓಡಿದೆ.

ಎಲ್ಲರೂ ಅವರವರ ಧರ್ಮದ ಹೆಸರಿನಲ್ಲಿ ಎಷ್ಟು ದಿನಗಳಿಂದ ಇನ್ನೊಬ್ಬರನ್ನು ಸುಡುತ್ತಿದ್ದಾರೆಂದು ತಿಳಿದುಕೊಳ್ಳಲು ದಿನಪತ್ರಿಕೆಗಾಗಿ ಹುಡುಕಾಡುತ್ತಿರುವಾಗ ಅನತಿ ದೂರದಲ್ಲಿ ದಿನಪತ್ರಿಕೆಯೊಂದು ಬಿದ್ದಿರುವುದು ಕಂಡುಬಂತು. ಓಡಿ ಅದನ್ನು ಎತ್ತಿಕೊಂಡು ಅದರ ಮೇಲೆ ದೃಷ್ಟಿ ಚೆಲ್ಲಿದೆ – ದಿನಪತ್ರಿಕೆ ಬೆಂಕಿಯಿಂದ ತುಂಬಿತ್ತು. ಅದನ್ನು ಎಸೆದು ಹಿಂತಿರುಗಿ ನೋಡಿದಾಗ ನೂರಾರು ಮಂದಿ ಅರ್ಧ ಸುಟ್ಟಿರುವ ದೇಹಗಳನ್ನು ಹೊತ್ತುಕೊಂಡು ಬರುತ್ತಿರುವುದು ಕಂಡಿತು.

ಸುಟ್ಟಿರುವ ಅವರ ದೇಹದಿಂದ ಚರ್ಮದ ವಾಸನೆ ಸಹ ಬರುತ್ತಿತ್ತು.

ಅವರಲ್ಲಿ ಒಬ್ಬ ಸ್ಮಶಾಣಕ್ಕೆ ದಾರಿ ಕೇಳಿದ.

'ಊರುಗಳೇ ಸ್ಮಶಾಣವಾಗಿವೆಯಲ್ಲ; ಸ್ಮಶಾಣಕ್ಕೆ ಯಾಕೆ ಹೋಗುತ್ತಿದ್ದೀರ ನೀವು, ಇನ್ನೂ ಜೀವಂತವಾಗಿದ್ದೀರಲ್ಲ?'

'ನಾವು ಜೀವಂತವಾಗಿದ್ದೇವೋ ಇಲ್ಲವೋ ನಮಗೆ ಗೊತ್ತಿಲ್ಲ. ಸ್ಮಶಾಣವೇ ಸುರಕ್ಷಿತವಾದ ಸ್ಥಳ. ಅದಕ್ಕೆ ಅಲ್ಲಿಗೆ ಹೋಗುತ್ತಿರುವುದು' ಎಂದ. ಅವರೆಲ್ಲರೂ ಮುಂದೆ ಹೋದರು.

ಸುರಕ್ಷಿತವಾದ ಸ್ಥಳ ಎಲ್ಲಾದರೂ ಇರಬಹುದೇ? ಎಲ್ಲಿಗೆ ಓಡುವುದು? ಎಷ್ಟು ದಿನ ಓಡುವುದು? – ಹತ್ತಾರು ಪ್ರಶ್ನೆಗಳು ಎದುರಾದವು.

ಎಲ್ಲರೂ ಬೆಂಕಿ ಹಾಕುವವರೇ ಅಲ್ಲ, ಒಂದಿಷ್ಟು ಜನವಾದರೂ ಬೆಂಕಿ ನಂದಿಸುವವರು ಇರಬಹುದು. ಅವರನ್ನು ಹುಡುಕಿ ಅವರೊಂದಿಗೆ ಸೇರಿಕೊಳ್ಳಬೇಕೆಂದು ದೂರದಲ್ಲಿ ಕಾಣುತ್ತಿರುವ ಬೆಳಕಿನ ಕಡೆ ಬಿರುಸಿನ ಹೆಜ್ಜೆಯಿಟ್ಟೆ.

**ಅದೀಬ್ ಅಖ್ತರ್**
ಕೇರಾಫ್ ಖಾನ್ ಮೊಹಮ್ಮದ್, ಬನ್ನೂರು - ೫೭೧ ೧೦೧
ಮೈಸೂರು ಜಿಲ್ಲೆ

# ಅಳಿದ ಮೇಲೆ

ಶಿವರಾಮ ಕಾರಂತರ ಒಂದು ಕಾದಂಬರಿಯ ಹೆಸರು 'ಅಳಿದ ಮೇಲೆ' ಎಂದಿದೆ. ವಾಸ್ತವವಾಗಿ ಇದು, 'ಅಳಿದ ಮೇಲೆ ಉಳಿವುದೇನು?' ಎಂಬ ಪ್ರಶ್ನೆಯ ಪೂರ್ವಾರ್ಧವಿರುವಂತೆ ತೋರುತ್ತದೆ.

ಕಾದಂಬರಿಯ ಸಾರಾಂಶ ಸ್ಥೂಲವಾಗಿ ಹೀಗಿದೆಯೆಂದು ನೆನಪು. ಕಥೆಯ ನಿರೂಪಕನೂ ಆದ ಲೇಖಕರು ಒಮ್ಮೆ ಮುಂಬಯಿಗೆ ಪ್ರಯಾಣ ಮಾಡುತ್ತಿರುವಾಗ ರೈಲಿನಲ್ಲಿ ಯಶವಂತರೆಂಬ ಹಿರಿಯರ ಪರಿಚಯವಾಗುತ್ತದೆ. ರೈಲಿನಿಂದ ಇಳಿಯುವಾಗ ಯಶವಂತರು ಮುಂಬಯಿಯಲ್ಲಿ ತಮ್ಮ ವಸತಿಯ ವಿಳಾಸ ಕೊಟ್ಟು ಆಗಾಗ ತಮ್ಮಲ್ಲಿಗೆ ಬರುತ್ತಿರುವಂತೆ ಕೋರುತ್ತಾರೆ. ಅಂತೆಯೇ ಹಲವು ಬಾರಿ ಭೇಟಿಯಾಗಿ ಪರಸ್ಪರ ಸುಖ ದುಃಖಗಳನ್ನೂ ಹಂಚಿಕೊಳ್ಳುತ್ತಾರೆ. ಇಬ್ಬರಲ್ಲಿ ಆತ್ಮೀಯತೆ ಬೆಳೆಯುತ್ತದೆ. ಕಾರಣಾಂತರಗಳಿಂದ ಒಮ್ಮೆ ಹಲವು ದಿನಗಳವರೆಗೆ ಇಬ್ಬರ ಭೇಟಿಯಾಗುವುದಿಲ್ಲ. ಮತ್ತೆ ಲೇಖಕರು ಯಶವಂತರ ಮನೆಗೆ ಹೋಗುವಷ್ಟರಲ್ಲಿ ಅವರು ಮರಣಹೊಂದಿದ್ದರು. ಸಾಯುವ ಮುನ್ನ ಅವರು ಸೂಚಿಸಿದ್ದಂತೆ, ಯಶವಂತರ ದಿನಚರಿಯ ಒಂದು ಪುಸ್ತಕ, ಕಡೆಗಾಲದಲ್ಲಿ ಅವರು ಉಳಿಸಿಹೋಗಿದ್ದ ಒಂದಷ್ಟು ಹಣ, ಅವರು ರಚಿಸಿದ್ದ ಕೆಲವು ರೇಖಾಚಿತ್ರಗಳು ಲೇಖಕರ ಕೈಸೇರಿದವು. ದಿನಚರಿಯಲ್ಲಿ ಯಶವಂತರು ಬರೆದಿದ್ದ ಟಿಪ್ಪಣಿಗಳು ಮತ್ತು ಅಂದ ಚಂದಗಳಿಲ್ಲದಿದ್ದರೂ, ಸಾಂಕೇತಿಕವಾಗಿದ್ದ ರೇಖಾಚಿತ್ರಗಳು ಕಥಾನಾಯಕನ ಜೀವನದ ಬಗೆಗೆ ಕುತೂಹಲ ಕೆರಳಿಸುತ್ತವೆ. ಇದಕ್ಕಿಂತ ಹೆಚ್ಚಾಗಿ ಯಶವಂತರು ಬಿಟ್ಟುಹೋಗಿದ್ದ ಹಣವನ್ನು ಅವರಿತ್ತ ಸೂಚನೆಗಳಿಗೆ ಅನುಸಾರವಾಗಿ ವಿತರಿಸಬೇಕೆಂಬುದು ಲೇಖಕರ ಮೇಲೆ ಕೆಲವು ಜವಾಬ್ದಾರಿಗಳನ್ನೂ ಹೊರಿಸಿತು.

ದಿನಚರಿಯಲ್ಲಿ ಒದಗಿಸಿದ್ದ ವಿಳಾಸವನ್ನು ಹಿಡಿದು ಪುಣೆಯಲ್ಲಿಯ ಒಬ್ಬ ವಯೋವೃದ್ಧ ಸಂಸ್ಕೃತ ವಿದ್ವಾಂಸರು; ದಕ್ಷಿಣ ಕನ್ನಡ ಜಿಲ್ಲೆಯ ಯಾವುದೋ ಮೂಲೆಯ ಹಳ್ಳಿಯೊಂದರಲ್ಲಿ ಇನ್ನೂ ಬದುಕಿದ್ದ – ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡ ಯಶವಂತನನ್ನು ಸಾಕಿ ಬೆಳೆಸಿದ್ದ ವಿಧವೆ – ಒಬ್ಬ ಮುದುಕಿ; ಯಶವಂತರ ಪೂರ್ವಾಶ್ರಮದ ಹೆಂಡತಿ; ಮಕ್ಕಳು; ನಡುವಯಸ್ಸಿನಲ್ಲಿ ಹೆಂಡತಿ ಮಕ್ಕಳ ನಡವಳಿಕೆಯಿಂದ ಬೇಸರಗೊಂಡ ಕಥಾ ನಾಯಕನು ಸಂಬಂಧ ಬೆಳೆಸಿಕೊಂಡಿದ್ದ ಧಾರಾಪುರದ ಸರಸಿಯೆಂಬ ಕಲಾವತಿಯ ಮಗಳು; – ಹೀಗೆ ಒಬ್ಬೊಬ್ಬರನ್ನೇ ಭೇಟಿಯಾಗಿ ಯಶವಂತರು ತಮಗೆ ವಹಿಸಿಹೋಗಿದ್ದ ಕರ್ತವ್ಯವನ್ನು ನಿರ್ವಹಿಸುತ್ತಾರೆ. ಯಶವಂತನನ್ನು ಚಿಕ್ಕಂದಿನಲ್ಲಿ ಕಾಪಾಡಿದ್ದ ಮುದುಕಿಯ ಆಸೆಯನ್ನು ಈಡೇರಿಸುವ ಸಲುವಾಗಿ ಸ್ವತಃ ದೇವರಲ್ಲಿ ನಂಬಿಕೆಯಿಲ್ಲದ ಲೇಖಕರು (ಕಾರಂತರು) ಪೂರ್ವಿಕರು ಕಟ್ಟಿಸಿದ ಒಂದು ದೇವಾಲಯವನ್ನೂ ಜೀರ್ಣೋದ್ಧಾರ ಮಾಡಿಸಿಕೊಡುತ್ತಾರೆ. ಈ ಎಲ್ಲ ಹಂತಗಳಲ್ಲಿ ಯಶವಂತರ ಜೀವಿತ ಕಾಲದಲ್ಲಿ ಅವರ ಸಂಪರ್ಕ ಹೊಂದಿದ್ದ ಒಬ್ಬೊಬ್ಬರಿಂದಲೂ, ಯಶವಂತರ ಬಗೆಗೆ ಅವರವರ ಅನಿಸಿಕೆಗಳನ್ನೂ ಸಂಗ್ರಹಿಸುತ್ತಾರೆ.

ಈಗ ಕಾದಂಬರಿಕಾರರು – ಓದುಗರು ಸಹ – ಕೇಳಬಹುದಾದ ಪ್ರಶ್ನೆ ಮತ್ತು ಕಂಡುಕೊಳ್ಳಬಹುದಾದ ಉತ್ತರಗಳನ್ನೂ ನೋಡೋಣ : ಒಬ್ಬ ವ್ಯಕ್ತಿ ಯಶವಂತನೆಂಬ ಹೆಸರಿನಲ್ಲಿ ಈ ಭೂಮಿಯ ಮೇಲೆ ಒಂದಷ್ಟು ಕಾಲ ಬದುಕಿ – ತನಗೆ ತಿಳಿದ ರೀತಿಯಲ್ಲಿ, ತನ್ನಿಂದ ಸಾಧ್ಯವಾದ ರೀತಿಯಲ್ಲಿ ಬದುಕಿ – ಒಂದು ದಿನ ಸತ್ತು ಹೋದನಷ್ಟೆ. ಆಮೇಲೆ 'ಅವನದಾಗಿ' ಉಳಿದುದೇನು ಎಂಬುದು ಆ ಪ್ರಶ್ನೆ. ಕೆಲಕೆಲವರ ಮನಸ್ಸಿನಲ್ಲಿ ಕೆಲವು ಬಗೆಯ – ಒಳ್ಳೆಯ ಅಥವಾ ಕೆಟ್ಟ ನೆನಪುಗಳು ಎಂಬುದು ಕಾದಂಬರಿಯಲ್ಲಿ ದೊರೆಯುವ ಉತ್ತರ.

ಇಹಲೋಕದ ಎಲ್ಲ ಜೀವಿಗಳ ಬಗೆಗೆ ಹೇಳಬಹುದಾದ ಇಂತಹ ನೀರಸ, ನಿರ್ಭಾವಕ ಉತ್ತರದಿಂದ ಅನೇಕರಿಗೆ ಸಮಾಧಾನವಾಗುವುದಿಲ್ಲ. ಅಂಥವರು ಕುತೂಹಲವನ್ನು ಕೆರಳಿಸುವ ಭಾವನಾತ್ಮಕ ಉತ್ತರಗಳನ್ನು ಊಹಿಸುವುದರಲ್ಲಿ ತೊಡಗುತ್ತಾರೆ. ಕವಿ ಗೋಪಾಲಕೃಷ್ಣ ಅಡಿಗರು ತಮ್ಮೊಂದು ಪ್ರಸಿದ್ಧ ಕವಿತೆಯಲ್ಲಿ (ಭೂಮಿಗೀತ) ಹೇಳುವುದು ಹೀಗೆ :

''...... ಧೂಳೂ ಧೂಳಿಗೆ ಸೇರಿ .
ಗಾಳಿ ಗಾಳಿಗೆ ಕೂಡಿ
ಬೆಂಕಿ ಬೆಂಕಿಯ ಕೂಡಿ
ಗಾಳಿಯಲ್ಲುಲುಹು, ಆಕಾಶದಲ್ಲಾಕಾಶ, ಬೆರೆತು
ಹೋದರೆ ಇದಕ್ಕೇನು ಧಾಡಿ
ಏನೋ ಉಳಿವುದು ಮತ್ತೆ....''

ಅಂದರೆ ಜೀವ ಹೋಗಿ, ಶರೀರವನ್ನು ಸುಟ್ಟು, ಮಣ್ಣು ಮಾಡಿ ಅಥವಾ ಇತರ ಪ್ರಾಣಿಗಳಿಗೆ ತಿನ್ನಲು ಬಿಟ್ಟ ಮೇಲೆಯೂ (ಪಾರಸಿಗಳಲ್ಲಿ ಶವಸಂಸ್ಕಾರವೆಂದರೆ ದಹನವೂ ಅಲ್ಲ ದಫನವೂ ಅಲ್ಲ; ಅದನ್ನು ಹದ್ದುಗಳು ತಿನ್ನಲು ಇಡುವುದಂತೆ.) ಏನೋ ಉಳಿಯುತ್ತದೆ ಎಂಬ ನಂಬಿಕೆ ಪ್ರಪಂಚದ ಬಹುತೇಕ ಮತಧರ್ಮಗಳ 'ದರ್ಶನ'ಗಳ ಭಾಗವಾಗಿದೆ. ಆದರೆ ಇದೇನು ಸುಸಂಗತವಾದ ತಿಳಿವಳಿಕೆಯಲ್ಲ. ನಿರಾಧಾರವಾದ ಇಂಥದೊಂದು ನಂಬಿಕೆಯು ಮಾನವ ಪ್ರಜ್ಞೆಯ ವಿಕಾಸದ ಯಾವುದೋ ಒಂದು ಹಂತದಲ್ಲಿ ಒಳನುಸುಳಿಕೊಂಡಿರಬೇಕೆಂಬುದೇ ನಾವು ತಿಳಿಯಬೇಕಾಗಿರುವ ಸತ್ಯ.

ಲೋಕಾಯತ ಅಥವಾ ಚಾರ್ವಾಕ ಎಂದು ಕರೆಯುವ ಪ್ರಾಚೀನ ಭಾರತೀಯ ಭೌತವಾದೀ ದರ್ಶನದ ಪ್ರಕಾರ ಜಡದಿಂದಲೇ ಜೀವ; ಅಂದರೆ ಮಣ್ಣು, ನೀರು, ಗಾಳಿ, ಬೆಳಕು, ಸ್ಥಳ (ಪೃಥ್ವಿ, ಅಪ್, ತೇಜ, ವಾಯು, ಆಕಾಶ – ಪಂಚಭೂತಗಳು) ಇತ್ಯಾದಿ 'ಭೂತ'ಗಳ (ಅಂದರೆ ಜಡವಸ್ತು, ಶಕ್ತಿಗಳ) ಸಂಘಾತದಿಂದ ಚೈತನ್ಯ ಅಥವಾ ಪ್ರಾಣದ ಆವಿರ್ಭಾವ. ಚೈತನ್ಯ ವಿಶಿಷ್ಟವಾದ ಶರೀರವೇ ಪ್ರಾಣಿ. ಪ್ರಾಣಿಗಳಿಗೆ ತಮ್ಮ ಪಂಚೇಂದ್ರಿಯಗಳ (ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ) ಮೂಲಕ ದೊರೆಯುವ ಸಂಜ್ಞೆಗಳಿಂದಲೇ ಪ್ರಜ್ಞೆಯ ವಿಕಾಸ. ಸಂಜ್ಞೆಗಳು ಪ್ರಜ್ಞೆಯಾಗಿ ಮಾರ್ಪಟ್ಟಾಗ 'ತನ್ನತನ'ದ ಅರಿವು. ತನ್ನತನವನ್ನೇ 'ಅಹಂ' ಎಂದೂ, 'ಆತ್ಮ'ವೆಂದೂ ಹೆಸರಿಸಬಹುದು. ದೇಹದಲ್ಲಿ, ದೇಹದೊಂದಿಗೆ ಹುಟ್ಟುವ 'ಅಹಂ' ಅಥವಾ ಆತ್ಮವು ಕೂಡ ದೇಹದೊಂದಿಗೇ ಲಯವಾಗುವಂತಹದು. ಆದ್ದರಿಂದ 'ಆತ್ಮ'ದ ಅಮರತ್ವ, ಮರಣೋತ್ತರ ಅಸ್ತಿತ್ವ ಮೊದಲಾದ ಪರಿಕಲ್ಪನೆಗಳೇನಿದ್ದರೂ ಕಾಲಾನಂತರದ ಕಾಲ್ಪನಿಕ ಬೆಳವಣಿಗೆ.

'ಆತ್ಮ' ಎಂಬುದಕ್ಕೆ 'ನಾನು' ಎಂಬ ಅಥವಾ 'ಒಂದು ಅಮೂರ್ತ ತತ್ತ್ವ' ಎಂಬ ಅರ್ಥವನ್ನು ಪ್ರಧಾನವಾಗಿಟ್ಟುಕೊಂಡು ಸಾವಯವ ಮನೋದೇಹಿಯಾದ ಅಸ್ತಿತ್ವವನ್ನು ಪೃಥಕ್ಕರಿಸುವ ಜಿಜ್ಞಾಸೆಯು 'ವಾಚಾರಂಭಣ' ಅಂದರೆ ಮಾತಿನ ಚಮತ್ಕಾರ ಮಾತ್ರವಾಗಿದೆ. ನನ್ನ ಕೈ, ನನ್ನ ಕಾಲು, ನನ್ನ ಕಣ್ಣು ಎಂದೆಲ್ಲ ಹೇಳುವಾಗ ಈ 'ನಾನು' ಮತ್ತು 'ನನ್ನ ಅವಯವಗಳು' ಪ್ರತ್ಯೇಕ ಅಸ್ತಿತ್ವಗಳು ಎಂಬ ಅರ್ಥ

**ಮರಣೋತ್ತರ ಅಸ್ತಿತ್ವದ ಬಗೆಗೆ ಆಧುನಿಕ ಭೌತವಾದದಲ್ಲಿ ಕೂಡ ಯಾವುದೇ ಸಮರ್ಥನೆಯಿಲ್ಲ. ಸಾವಿನಾಚೆಗಿನ ಮಾತು ಹಾಗಿರಲಿ; ಇಹಲೋಕದ ಇರುವಿಕೆಯನ್ನೇ ಗಮನವಿಟ್ಟು ನೋಡಿದರೆ ಇದು ಎಷ್ಟೊಂದು ಅಸ್ಥಿರವಾದುದೆಂಬುದು ಅರಿವಿಗೆ ಬರುತ್ತದೆ. ಶರೀರವೆನ್ನುವುದು ಸವಕಳಿ ಮತ್ತು ಪೋಷಣೆಯ ಮೂಲಕ ನಿರಂತರವಾಗಿ ಬದಲಾಗುವಂಥದು. ಭೌತ ವಿಜ್ಞಾನದ ರೀತ್ಯಾ ಯಾವುದೇ ಪರಮಾಣುವು ಸದಾಕಾಲ ಒಂದೇ ರೀತಿಯಾಗಿ ಇರುವಂಥದಲ್ಲ. ಈಗ ಅಸ್ತಿತ್ವದಲ್ಲಿರುವ ಒಂದು ಅಣುವು ನಿನ್ನೆ ಅಥವಾ ಕೆಲವು ಕ್ಷಣಗಳ ಮುಂಚೆ ಇದ್ದ ಅದೇ ಅಣುವೆಂದು ಹೇಳುವಂತಿಲ್ಲ; ನಾಳೆ ಹೀಗೆಯೇ ಇರುತ್ತದೆಂಬುದು ಕೂಡ ಅರ್ಥವಿಲ್ಲದ ಮಾತು.**

■

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**

ಹೊಳೆದರೂ ಹೊಳೆಯಬಹುದು. ಆದರೆ ಇದು ಅನುಭವ ಸಮ್ಮತವಲ್ಲ. ಮನೆಯ ಬಾಗಿಲು, ಮನೆಯ ಕಿಟಕಿ, ಮನೆಯ ಮಾಡು, ಮನೆಯ ಮಾಳಿಗೆ ಎಂದು ಹೇಳುವಾಗ ಈ ಎಲ್ಲ ಅವಯವಗಳಿಂದ ಮನೆಯನ್ನು ಪ್ರತ್ಯೇಕಿಸಿ, ಬೇರೆಯಾಗಿ ನೋಡಲು ಸಾಧ್ಯವೆ ?

ಮರಣೋತ್ತರ ಅಸ್ತಿತ್ವದ ಬಗೆಗೆ ಆಧುನಿಕ ಭೌತವಾದದಲ್ಲಿ ಕೂಡ ಯಾವುದೇ ಸಮರ್ಥನೆಯಿಲ್ಲ. ಸಾವಿನಾಚೆಗಿನ ಮಾತು ಹಾಗಿರಲಿ; ಇಹಲೋಕದ ಇರುವಿಕೆಯನ್ನೇ ಗಮನವಿಟ್ಟು ನೋಡಿದರೆ ಇದು ಎಷ್ಟೊಂದು ಅಸ್ಥಿರವಾದುದೆಂಬುದು ಅರಿವಿಗೆ ಬರುತ್ತದೆ. ಶರೀರವೆನ್ನುವುದು ಸವಕಳಿ ಮತ್ತು ಪೋಷಣೆಯ ಮೂಲಕ ನಿರಂತರವಾಗಿ ಬದಲಾಗುವಂಥದು. ಭೌತ ವಿಜ್ಞಾನದ ರೀತ್ಯಾ ಯಾವುದೇ ಪರಮಾಣುವು ಸದಾಕಾಲ ಒಂದೇ ರೀತಿಯಾಗಿ ಇರುವಂಥದಲ್ಲ. ಈಗ ಅಸ್ತಿತ್ವದಲ್ಲಿರುವ ಒಂದು ಅಣುವು ನಿನ್ನೆ ಅಥವಾ ಕೆಲವು ಕ್ಷಣಗಳ ಮುಂಚೆ ಇದ್ದ ಅದೇ ಅಣುವೆಂದು ಹೇಳುವಂತಿಲ್ಲ; ನಾಳೆ ಹೀಗೆಯೇ ಇರುತ್ತದೆಂಬುದು ಕೂಡ ಅರ್ಥವಿಲ್ಲದ ಮಾತು. ಒಂದು ಪ್ರಾಣಿಯ ಶರೀರವು ಕೆಲವು ವರ್ಷಗಳವರೆಗಾದರೂ ಒಂದೇ ರೀತಿಯಾಗಿ ಕಾಣುವುದು ಕೇವಲ ಸ್ಥೂಲ ದೃಷ್ಟಿಗೆ ಮಾತ್ರ. ಇನ್ನು ಮಿದುಳಿನ ಬಗೆಗಾದರೂ ಇವೇ ಮಾತುಗಳು ಅನ್ವಯಿಸುತ್ತವೆ. ಮಿದುಳಿನ ವರ್ತನೆ ಅಥವಾ ಪ್ರಜ್ಞೆಯಲ್ಲಿ ಒಂದು ಬಗೆಯ ಸಾತತ್ಯ ಕಂಡುಬರುವುದೇನಿದ್ದರೂ ಅಭ್ಯಾಸ ಮತ್ತು ನೆನಪುಗಳ ಮೂಲಕವಾಗಿ. ಯಾವ ಅನುಭವಗಳನ್ನು ನಾನು ನೆನಪಿಟ್ಟುಕೊಳ್ಳಬಲ್ಲೆನೋ ಅವುಗಳನ್ನು ನನ್ನ 'ನಿನ್ನೆಯ ಅನುಭವ' ಎನ್ನುತ್ತೇನೆ. ಇನ್ನು ನಾನು ಅನುಭವಿಸುತ್ತೇನೆ, ನಾನು ಚಿಂತಿಸುತ್ತೇನೆ, ನಾನು ಹೀಗೆ ವರ್ತಿಸುತ್ತೇನೆ - ಇತ್ಯಾದಿ ಹೇಳುವಾಗ ಚಿಂತನೆ, ಅನುಭವ, ವರ್ತನೆಗಳನ್ನೂ 'ನಾನು' ಎಂಬುದನ್ನೂ ಪ್ರತ್ಯೇಕಿಸಿದಂತೆ ತೋರುವುದೇನಿದ್ದರೂ ಶಾಬ್ದಿಕ ಅಭಿವ್ಯಕ್ತಿಯ ಸ್ವಭಾವದಿಂದಾಗಿ ಮಾತ್ರ. ವಾಸ್ತವವಾಗಿ ಪ್ರಜ್ಞೆಯೂ ಸೇರಿದಂತೆ ಶರೀರದಿಂದ ಪ್ರತ್ಯೇಕವಾದ 'ನಾನು' ಎಂಬುದೇನೂ ಇಲ್ಲ.

ಸಾವಿನಾಚೆಗೂ ಅಸ್ತಿತ್ವವುಂಟೆಂದು ಭಾವಿಸಿದಲ್ಲಿ ಅಸ್ತಿತ್ವದ ಅಂಶಗಳಾದ ನೆನಪುಗಳು, ವರ್ತನೆಗಳು, ಬದಲಾದ ಸನ್ನಿವೇಶದಲ್ಲೂ ಕಾಣಿಸಿಕೊಳ್ಳಬೇಕಾಗುತ್ತದೆಯಷ್ಟೆ. ಆದರೆ ಹಾಗಾಗುವುದಿಲ್ಲವೆಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ನೆನಪುಗಳು ಮತ್ತು ಅಭ್ಯಾಸಗಳು ಮಿದುಳಿನ ಸಂರಚನೆಯೊಂದಿಗೆ ಹೊಂದಿಕೊಂಡಿರುತ್ತವೆ. ಆದ್ದರಿಂದ ವ್ಯಕ್ತಿಯು ಮರಣ ಹೊಂದಿದಾಗ ಆತನ ಮಿದುಳು ವಿಘಟನೆಗೊಂಡು ಅದಕ್ಕೆ ಅಂಟಿಕೊಂಡ ನೆನಪುಗಳು, ವರ್ತನೆ, ಆಲೋಚನೆ, ಅಭ್ಯಾಸ ಇತ್ಯಾದಿಗಳನ್ನೊಳಗೊಂಡ ಪ್ರಜ್ಞೆಯು ಕೂಡ ನಾಶವಾಗುತ್ತದೆ.

ಸತ್ಯಸ್ಥಿತಿ ಹೀಗಿದ್ದರೂ ಸಹ ಮರಣೋತ್ತರ ಅಸ್ತಿತ್ವವನ್ನು ಪರಿಭಾವಿಸಲು, ಅಂಥದೊಂದು ನಂಬಿಕೆಯನ್ನು ಜನಸಮುದಾಯದಲ್ಲಿ ಬಿತ್ತಿ ಬೆಳೆಸಲು ಕಾರಣಗಳು ಏನಿರಬಹುದೆಂದು ಚಿಂತಸಬೇಕಾಗುತ್ತದೆ.

ಮೊದಲನೆಯದಾಗಿ ಅಮರತ್ವ, ಅಮೃತತ್ವ, ಮೃತ್ಯುಂಜಯತೆ ಎಂಬೆಲ್ಲ ಪರಿಕಲ್ಪನೆಗಳು ಪ್ರಚಲಿತವಾಗಲು ಸಾವಿನ ಭಯ ಮತ್ತು ಅಮರತ್ವದ ಆಸೆ ಇವುಗಳೇ ಪ್ರೇರಕವೆಂದು ತೋರುತ್ತದೆ. ಮನುಷ್ಯ ಪ್ರಜ್ಞೆಯು ಸಾವನ್ನು ಸಹಜವಾಗಿ ಒಪ್ಪಿಕೊಳ್ಳುವುದಿಲ್ಲ. ಆದ್ದರಿಂದ ಸಾವು ಜಡ ದೇಹಕ್ಕೆ; ಆತ್ಮಕ್ಕೆ ಸಾವಿಲ್ಲ, ಅದು ಶಾಶ್ವತ – ಎಂಬ ಕಲ್ಪನೆಯನ್ನು ಪ್ರಜ್ಞೆಯು ಸ್ವಾಭಾವಿಕವಾಗಿಯೇ ಅಂಗೀಕರಿಸಿತು. ಸಾವಿನೊಡನೆ ಶರೀರವು ನಾಶವಾದ ಮೇಲೆಯೂ ಸಹ ಆತ್ಮವು ಸೂಕ್ಷ್ಮರೂಪದಲ್ಲಿ ಅಸ್ತಿತ್ವದಲ್ಲಿರುವುದೆಂಬ ಕಲ್ಪನೆಯನ್ನು 'ಭಾವನಾವಾದಿ'ಗಳು (spiritualists) ಗಂಭೀರವಾಗಿಯೇ ಪರಿಗಣಿಸಿದ್ದಾರೆ. ಈ ಬಗೆಗೆ ಹಲವು ರೀತಿಯ ವ್ಯಾಖ್ಯಾನಗಳಿವೆ. ಭೌತ ದೇಹದಿಂದ ಬಿಡುಗಡೆಯಾದ ಜೀವವು 'ಪ್ರೇತ' ರೂಪ ತಾಳುವುದು; ನಾನಾ ಲೋಕಗಳಲ್ಲಿ ಸಂಚರಿಸುವುದು; ನರಕಯಾತನೆ ಅಥವಾ ಸ್ವರ್ಗಸುಖಗಳನ್ನು ಅನುಭವಿಸುವುದು; ಪುತ್ರ ಪೌತ್ರರು ಅರ್ಪಿಸುವ ಪಿಂಡ 'ತರ್ಪಣ'ಗಳನ್ನು ಸವಿಯುವುದು – ಇತ್ಯಾದಿಗಳನ್ನು ರೋಚಕವಾಗಿ ವರ್ಣಿಸುವ ಪುರಾಣ ಕತೆಗಳು ನಮ್ಮ ದೇಶದಲ್ಲಂತೂ ಹೇರಳವಾಗಿ ಲಭ್ಯವಿವೆ. ದೇಹದಿಂದ ಬಿಡುಗಡೆಯಾದ ಜೀವವು ಕೆಲವು ಕಾಲ 'ಕರ್ಮಫಲ'ಗಳನ್ನು ಅನುಭವಿಸಿ, ಆಮೇಲೆ 'ಪರಮಾತ್ಮ'ನಲ್ಲಿ ಐಕ್ಯವಾಗುವುದೆಂದು ಕೆಲವು ಶಾಸ್ತ್ರಗಳು ಹೇಳುತ್ತವೆ. ಶರೀರದಿಂದ ಹೊರಟು ಹೋದ ಜೀವವು ಕೆಲವು ದಿನಗಳವರೆಗೆ 'ಬೆಂತರ' ರೂಪದಲ್ಲಿದ್ದು, ಮುಂದೆ ತಾನು ಮಾಡಿದ ಒಳ್ಳೆಯ ಅಥವಾ ಕೆಟ್ಟ ಕರ್ಮಗಳಿಗೆ ಅನುಗುಣವಾಗಿ ಬಗೆ ಬಗೆಯ 'ಪುನರ್ಜನ್ಮ'ಗಳನ್ನು ತಳೆಯುವುದೆಂದು ಕೆಲವರು ಹೇಳುತ್ತಾರೆ. ಜೈನ ಪುರಾಣಗಳ ಅನಿವಾರ್ಯ ಭಾಗವೆನ್ನುವಂತಿರುವ 'ಭವಾವಳಿ ಕಥೆ'ಗಳು ಜನ್ಮ ಜನ್ಮಾಂತರಗಳ ವರ್ಣನೆಯನ್ನು ಅದ್ಭುತ ರಮ್ಯವಾಗಿ ನಿರೂಪಿಸುತ್ತವೆ. ಜೀವಕ್ಕೆ ಸ್ವರ್ಗ ಅಥವಾ ನರಕ ಪ್ರಾಪ್ತಿಯನ್ನು ಸಾಧ್ಯವಾಗಿಸುವ ಪರಿಸ್ಥಿತಿಯ ಬಗೆಗೆ ಕೂಡ ಮತಭೇದಗಳಿವೆ. ಒಬ್ಬ ಮನುಷ್ಯನು 'ಪೂರ್ಣಾಯಸ್ಸು' ಬದುಕಿ ವೃದ್ಧಾಪ್ಯದಿಂದಲೋ, ಕಾಯಿಲೆಯಿಂದಲೋ 'ಸಹಜ ಮರಣ' ಹೊಂದಿದ್ದರೆ,

ಅವನಿಗೆ ಶಾಸ್ತ್ರಸಮ್ಮತವಾದ ಅಂತ್ಯ ಸಂಸ್ಕಾರಗಳು ನಡೆದರೆ ಅಂಥವನ ಜೀವವು 'ಸದ್ಗತಿ' ಪಡೆಯುವುದು; ಅರೆ ಆಯಸ್ಸಿನಲ್ಲಿ ಸತ್ತರೆ, ಅಪಘಾತಕ್ಕೆ ಈಡಾದರೆ, ಆತ್ಮಹತ್ಯೆ ಮಾಡಿಕೊಂಡರೆ, ಸತ್ತವನಿಗೆ ಸೂಕ್ತವಾದ ಉತ್ತರಕ್ರಿಯಾದಿಗಳು ನಡೆಯದಿದ್ದರೆ ಅಂಥವನ ಜೀವವು 'ಪ್ರೇತ'ವಾಗುವುದಂತೆ! ಇಂಥ ಇನ್ನೂ ಎಷ್ಟೆಷ್ಟೋ ವಿಚಿತ್ರ ಕಲ್ಪನೆಗಳಿವೆ.

ಪರಾಮನಶ್ಶಾಸ್ತ್ರ (Parapsychology)ವೆಂಬ ಆಧುನಿಕ ಮನೋವಿಜ್ಞಾನ ಶಾಖೆಯಲ್ಲಿ ಸಾವಿನ ಅನಂತರದ ಅಸ್ತಿತ್ವದ ಬಗೆಗೆ ಸಂಶೋಧನೆ ಮಾಡಲಾಗುತ್ತಿದೆಯಂತೆ. 'ಟೆಲಿಪತಿ', 'ಕ್ಲಾಯರ್‌ವಾಯನ್ಸ್' ಇತ್ಯಾದಿ ಪರಿಕಲ್ಪನೆಗಳನ್ನು ಇಲ್ಲಿ ಬಳಸಲಾಗುತ್ತದೆ. ಪೂರ್ವಜನ್ಮ, ಪುನರ್ಜನ್ಮ ಕಲ್ಪನೆಗಳನ್ನು ಆಧರಿಸಿ ವಿಶೇಷ ಸಂದರ್ಭಗಳಲ್ಲಿ ಪೂರ್ವಜನ್ಮ ಸ್ಮೃತಿಯು ಗೋಚರಿಸಿದಂತೆ ನಿರೂಪಿಸುವ ವರದಿಗಳು ಬರುವುದುಂಟು. ಆದರೆ ಸದ್ಯದಲ್ಲಿ ಲಭ್ಯವಿರುವ ಸಾಮಾನ್ಯ ಜ್ಞಾನದ ದೃಷ್ಟಿಯಿಂದ ಹೇಳುವುದಾದರೆ ಮರಣೋತ್ತರ ಅಸ್ತಿತ್ವಕ್ಕಾಗಲಿ, ಪೂರ್ವಜನ್ಮ - ಪುನರ್ಜನ್ಮಗಳ ಕಲ್ಪನೆಗಳಿಗಾಗಲಿ ಯಾವುದೇ ಆಧಾರವಿಲ್ಲ.

ಮರಣೋತ್ತರ ಅಸ್ತಿತ್ವದ ನಂಬಿಕೆಯನ್ನು ಪೋಷಿಸಿ ಸುಭದ್ರಗೊಳಿಸುವಲ್ಲಿ ರಾಜ್ಯವ್ಯವಸ್ಥೆ ಮತ್ತು ಸಮಾಜ ವ್ಯವಸ್ಥೆಗಳು ಕೂಡ ಭಾಗಿಗಳಾಗಿವೆ. ರಾಜ್ಯಾಧಿಕಾರದ ಸಲುವಾಗಿ ಹೋರಾಟಗಳು ನಡೆಯುವಾಗ ಪಕ್ಷ-ಪ್ರತಿಪಕ್ಷಗಳೆರಡರಿಂದಲೂ ಹಲವರು ಪ್ರಾಣ ಕಳೆದುಕೊಳ್ಳಬೇಕಾಗುತ್ತದೆ. ರಾಜ್ಯ ಮತ್ತು ರಾಜನ ರಕ್ಷಣೆಗಾಗಿ ಯುದ್ಧದಲ್ಲಿ ಪ್ರಾಣ ಕೊಡಲು ಸೈನಿಕರು ಸಿದ್ಧರಾಗಿರಬೇಕು. ಆದರೆ ಕೇವಲ ಸಂಬಳ ಕೊಟ್ಟು ಸಾಕುವುದರಿಂದ ಸೈನಿಕರನ್ನು ಪ್ರಾಣ ತ್ಯಾಗಕ್ಕೆ ಪ್ರೇರೇಪಿಸುವುದು ಕಷ್ಟ. ಇಂತಹ ಸಂದರ್ಭಗಳಲ್ಲಿ ಉಪಯೋಗಕ್ಕೆ ಬರುತ್ತದೆ 'ವೀರಮರಣ' ಮತ್ತು 'ವೀರಸ್ವರ್ಗ'ಗಳ ಕಲ್ಪನೆ.

ಮಹಾಭಾರತದ ಉತ್ತರ ಗೋಗ್ರಹಣ ಕಾಲದಲ್ಲಿ ಕೌರವ ಸೈನ್ಯವನ್ನು ಎದುರಿಸಿ ಯುದ್ಧ ಮಾಡಲು ಬಂದಿದ್ದ ಉತ್ತರಕುಮಾರನು, ಸೇನಾ ಸಮೂಹವನ್ನು ನೋಡಿ ಕಂಗಾಲಾಗಿ, ರಥದಿಂದ ಧುಮುಕಿ ಹಿಂದಕ್ಕೆ ಓಡತೊಡಗುತ್ತಾನಷ್ಟೆ. ಆಗ ಬೃಹನ್ನಳೆಯ ವೇಷದಲ್ಲಿ ರಥವನ್ನು ನಡೆಸುತ್ತಿದ್ದ ಅರ್ಜುನನು ಅವನನ್ನು ಹಿಡಿತಂದು ಉಪದೇಶಿಸಿದ್ದು ಹೀಗೆ –

*''ಕೊಳುಗುಳದೊಳೋಡಿದೊಡೆ ಹೆಜ್ಜೆಗೆ। ಫಲ*
*ಮಹಾಪಾತಕವು ಮುಂದಣೆ*
*ಗೊಲಿದು ಹೆಜ್ಜೆಯನಿಡಲು ಹೆಜ್ಜೆಯೊಳಶ್ವ*
*ಮೇಧಫಲ.*
*ಅಳಿದನಾದೊಡೆ ದೇವಲೋಕದ / ಲಲನೆಯರು*
*ತೊತ್ತಿರುಸುರೇಂದ್ರನು*
*ನೆಲನನುಗ್ಗಡಿಸುವನು ವೀರಸ್ವರ್ಗವಹುದೆಂದ ॥''*
*(ಕೊಳುಗಳ ಯುದ್ಧ)*

ಅರ್ಜುನನ ಉಪದೇಶಕ್ಕೆ ಉತ್ತರಕುಮಾರನು ಜಗ್ಗುವುದಿಲ್ಲ. ಏಕೆಂದರೆ ಅನಿಶ್ಚಿತವಾದ 'ಸುರಸತಿಯರ ಸಂಗ' ಮತ್ತು 'ಇಂದ್ರಪದವಿ'ಗಳಿಗಿಂತ ನಿಶ್ಚಿತವಾಗಿ ನಿಲುಕಿರುವ 'ಅರಮನೆಯ ನಾರಿಯರ ಸಂಗ', ಇಲ್ಲಿನ




'ಅರಸು ಪದವಿ'ಗಳೇ ಅವನಿಗೆ ಸಾಕಂತೆ ! ಉತ್ತರಕುಮಾರನು ರಾಜ ಸಂತಾನವೇ ಆಗಿದ್ದು, ಈಗಾಗಲೇ ರಾಜಪದವಿಯನ್ನೂ, ಅರಮನೆಯ ನಾರಿಯರ ಸಂಗ ಸುಖವನ್ನೂ ಅನುಭವಿಸುತ್ತಿದ್ದುದರಿಂದ ಪ್ರಾಯಶಃ ಅವನು 'ವೀರಸ್ವರ್ಗ'ವನ್ನು ತಿರಸ್ಕರಿಸಿರಬಹುದೇನೋ! ಆದರೆ, ಹೊಟ್ಟೆಪಾಡಿಗಾಗಿ ರಾಜಸೇವೆ ಮಾಡುತ್ತಿರುವ ಸೈನಿಕರಿಂದ ಇಂಥ ಮಾತು ಬರಲಾರದು; ಅವರ ಬಾಯಲ್ಲಿ ನೀರೂರುತ್ತದೆ. ಸತ್ತಮೇಲಾದರೂ ಸುಖ ಕಾಣುವ ನಂಬಿಕೆಯಿಂದ ಪ್ರಾಣತೆತ್ತ ಅಸಂಖ್ಯಾತ ಹುಂಬರ ಕಥೆಗಳನ್ನು ನಾವು ಚರಿತ್ರೆಯಲ್ಲಿ ಓದುತ್ತೇವೆ.

ಎಲ್ಲರ ಜೀವವೂ ಸಮಾನ ಎಂಬುದು ಸರಿಯಾದ ನಿಲುವಾದರೂ ವಾಸ್ತವ ಪರಿಸ್ಥಿತಿ ಹಾಗಿಲ್ಲ. ಊಳಿಗಮಾನ್ಯ ವ್ಯವಸ್ಥೆಯಲ್ಲಿ ಸ್ವಾಮಿಯ ಜೀವಕ್ಕೆ ಭೃತ್ಯನ ಜೀವಕ್ಕಿಂತ ಬೆಲೆ ಹೆಚ್ಚು. ಆದ್ದರಿಂದ ಸ್ವಾಮಿಯ ರಕ್ಷಣೆಗಾಗಿ ಭೃತ್ಯನು ಪ್ರಾಣತ್ಯಾಗ ಮಾಡುವುದು ಅವನ ಕರ್ತವ್ಯ ಮತ್ತು ಧರ್ಮ. ಅದರಿಂದ ಅವನಿಗೆ ಸತ್ತ ಮೇಲೆ ಸದ್ಗತಿ; ಇಹಲೋಕದಲ್ಲಿ 'ಅಮರತ್ವ'. ತಾವು ಹೇಳಿದ್ದನ್ನು ಹುಂಬರು ನಂಬುತ್ತಾರೆಂದು ಖಚಿತ ಪಡಿಸಿಕೊಂಡಿರುವ ಮತಧಾರ್ಮಿಕ ರಾಜಕೀಯ ನಾಯಕರು ಬೇಗನೆ ದೈವಸಾನ್ನಿಧ್ಯ ಪಡೆಯುವ ಸಲುವಾಗಿ 'ಜಿಹಾದ್'ಗೆ ಸಿದ್ಧವಾಗುವಂತೆ ಯುವಕರಿಗೆ (ತಮ್ಮ ಮಕ್ಕಳು, ಮೊಮ್ಮಕ್ಕಳನ್ನು ಹೊರತುಪಡಿಸಿ) ಬೋಧಿಸುತ್ತಾರೆ.

ಅಮರತ್ವದ ಮತ್ತು ಭಗವತ್ ಸಾನ್ನಿಧ್ಯ ಪ್ರಾಪ್ತಿಯ ಪರಿಕಲ್ಪನೆಗಳನ್ನು ನಿರಂತರವಾಗಿ ಪ್ರಚಾರಮಾಡಿ ಅದ್ಭುತ ಯಶಸ್ಸನ್ನು ಪಡೆದದ್ದು ಭಕ್ತಿಪಂಥ(ಗಳು). ''ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ?'' ಎಂಬ ಭೌತವಾದಿಗಳ ನಿಷ್ಠುರ ಸತ್ಯವನ್ನಾಗಲಿ, ವೈದಿಕ ಕರ್ಮಕಾಂಡಗಳ ಕಷ್ಟನಷ್ಟಗಳನ್ನಾಗಲಿ, ಉಪನಿಷತ್ತುಗಳ ಪ್ರಖರ ಪಾಂಡಿತ್ಯವನ್ನಾಗಲಿ ಅರಗಿಸಿಕೊಳ್ಳಲಾರದೆ ಎದೆಗೆಟ್ಟಿದ್ದ ಜನತೆಗೆ ಭಾವನಾಮಯ, ರಮ್ಯತೆಯ ಭಕ್ತಿಪಂಥದ ಸೆಳೆತ ಆಪ್ಯಾಯಮಾನವಾಯಿತು.

''ಎಂಥ ದುರಾಚಾರಿಯೇ ಆಗಿರಲಿ ಆತ ನನ್ನನ್ನು ಅನನ್ಯ ಭಾವದಿಂದ ಭಜಿಸುತ್ತಿದ್ದರೆ ಅವನ ಯೋಗಕ್ಷೇಮವನ್ನು ನಾನೇ ನೋಡಿಕೊಳ್ಳುತ್ತೇನೆ'' ಎಂದು ಸಾಕ್ಷಾತ್ ಭಗವಂತನೇ ಭಗವದ್ಗೀತೆಯಲ್ಲಿ ಅಪ್ಪಣೆ ಕೊಡಿಸಿದ್ದಾನೆ. ಬದುಕಿನ ಕಷ್ಟನಷ್ಟಗಳಲ್ಲಿ, ಪರಿಸರದ ಕ್ರೌರ್ಯ, ಹಿಂಸಾಚಾರ, ತಾರತಮ್ಯಗಳಲ್ಲಿ ನೊಂದು ಬೆಂದವರನ್ನು ಸಾಂತ್ವನಗೊಳಿಸಲು ಇನ್ನೇನು ಬೇಕು ? ಜನರು ಗುಂಪು ಗುಂಪಾಗಿ ಭಕ್ತಿಮಾರ್ಗಕ್ಕೆ ಶರಣು ಹೋದರು. ಭಕ್ತಿಸಿದ್ಧಾಂತದ ಪ್ರಭಾವವನ್ನು ತೋರಿಸಲು ಒಂದು ಉದಾಹರಣೆ ಸಾಕು; ಸಾಸಿವೆ ಕಾಳು ಕೊಡಲು ಸಾವಿಲ್ಲದ ಮನೆ ಸಿಗಲಾರದೆಂಬ ನಿದರ್ಶನದ ಮೂಲಕ, ಕಿಸಾಗೋತಮಿಗೆ ಸಾವಿನ ವ್ಯಾಪಕತೆಯನ್ನೂ, ಅನಿವಾರ್ಯತೆಯನ್ನೂ ಮನವರಿಕೆ ಮಾಡಿಕೊಟ್ಟ ಬೌದ್ಧಮತವನ್ನು ಭರತಖಂಡದಿಂದ ಉಚ್ಚಾಟಿಸುವ ಸಲುವಾಗಿ, ಅದ್ವೈತ ಜ್ಞಾನ ಪ್ರತಿಪಾದಕರಾದ ಆದಿ ಶಂಕರಾಚಾರ್ಯರು ಕೂಡ, ಜನ ಸಮುದಾಯವನ್ನು ಆಕರ್ಷಿಸಲು ಭಕ್ತಿಸ್ತೋತ್ರಗಳನ್ನು ರಚಿಸಬೇಕಾಯಿತು !

ಮನೋದೇಹಿಯಾದ ಮಾನವನಲ್ಲಿ ಶರೀರ ಮತ್ತು ಆತ್ಮಗಳನ್ನು ಪೃಥಕ್ಕರಿಸಿದ್ದರಿಂದ ಉಂಟಾದ ಪರಿಣಾಮಗಳನ್ನು ಗಮನಿಸಬೇಕು. ಆತ್ಮ ಶಬ್ದಕ್ಕೆ ತಾನು (Self) ಮತ್ತು ಅಮೂರ್ತ, ಚಿರಂತನ ತತ್ವ (Soul, Spirit) ಎಂಬ ಎರಡೂ ಅರ್ಥಗಳುಂಟೆಂದು ಹೇಳಲಾಯಿತಷ್ಟೆ. ಆಧ್ಯಾತ್ಮವಾದಿಗಳ ದೃಷ್ಟಿಯಲ್ಲಿ ಶರೀರಕ್ಕಿಂತ ಆತ್ಮವೇ ಪ್ರಧಾನ. ಆದ್ದರಿಂದ ದೇಹ ಮತ್ತು ಮನಸ್ಸಿನ ಒಟ್ಟು ಆರೋಗ್ಯ, ಸುಖ, ಹಿತಗಳಿಗೆ ಕಾರಣವಾದ ಸಾಮಾಜಿಕ ಸಂಬಂಧಗಳಿಗಿಂತ ಸ್ವಂತಹಿತ, ಆತ್ಮೋದ್ಧಾರಗಳೇ ಮುಖ್ಯವೆಂದಾಯಿತು. ''ಯಾರು ಹಿತವರು ನಿನಗೆ ಈ ಮೂವರೊಳಗೆ : ನಾರಿಯೊ, ಧಾರಿಣಿಯೊ, ಬಹುಧನದ ಸಿರಿಯೊ ?'' ಎಂದು ಪ್ರಶ್ನಿಸುತ್ತಾರೆ ಹರಿದಾಸರು. ಒಟ್ಟಿನ ಮೇಲೆ, ನಶ್ವರವಾದ ದೇಹವನ್ನೂ ಅದರಿಂದ ಒದಗಿಬರುವ ಸಾಮಾಜಿಕ ಸಂಬಂಧ, ಸಾಂಘಿಕ ಜೀವನಗಳನ್ನೂ ಅಲಕ್ಷಿಸಿ ಶಾಶ್ವತವಾದ ಆತ್ಮೋದ್ಧಾರಕ್ಕೆ ಯತ್ನಿಸುವುದೇ ಶ್ರೇಯಸ್ಕರವೆಂಬುದು ಮರಣೋತ್ತರ ಅಸ್ತಿತ್ವವೆಂಬ ಪರಿಕಲ್ಪನೆಯ ಪರಿಣಾಮವಾಯಿತು.

ಮರಣೋತ್ತರ ಅಸ್ತಿತ್ವವು ಕೇವಲ ಕಾಲ್ಪನಿಕ ಹಾಗೂ ಒಂದು ಭ್ರಮೆಯಾದರೂ ಇದರಿಂದ ವ್ಯಕ್ತಿಯ ಬದುಕಿಗಾಗಲಿ, ಸಮುದಾಯ ಜೀವನಕ್ಕಾಗಲಿ ಏನಾದರೂ ಒಳ್ಳೆಯದು ಆಗುವಂತಿದ್ದರೆ ಅದನ್ನು ಸ್ವೀಕರಿಸಬಹುದಾಗಿತ್ತೇನೋ ! ಆದರೆ ಇಂತಹ ಭ್ರಮೆಗಳಿಂದ ವ್ಯಕ್ತಿಗೂ, ಸಮಾಜಕ್ಕೂ ಉಂಟಾಗುವ ಹಾನಿಯೇ ಹೆಚ್ಚು. ಆದ್ದರಿಂದ ಇಂತಹ ಎಲ್ಲ ಭ್ರಮೆಗಳನ್ನು ಸಾರಾಸಗಟಾಗಿ ತಿರಸ್ಕರಿಸುವುದೇ ಮೇಲೆನಿಸುತ್ತದೆ.

**ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ತಿರುವು, ಕೆ. ಆರ್. ರಸ್ತೆ
ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

# ನಾಗರಿಕ ದಲಿತ
## ಒಂದು ಮೇಲು ಸ್ತರದ ಸ್ವರೂಪ

ಎನ್. ಆರ್. ಗುರುನಾಥ

'ನಗರ'ವು ಆಧುನಿಕ ಸಂಸ್ಕೃತಿಯ ಪ್ರತೀಕ. ಹಾಗೆಯೇ ನಗರವಾಸಿಯು ಸಹಜವಾಗಿಯೇ 'ನಾಗರಿಕ' ಎನಿಸಿಕೊಳ್ಳುತ್ತಾನೆ. ಆದ್ದರಿಂದ ಸ್ಥಾಪಿತ ಸಂಸ್ಕೃತಿಯ ಹಿಡಿತಕ್ಕೆ ಸಿಲುಕಿದ ದಲಿತ ಜನಾಂಗವು ನಗರ ಜೀವನದಲ್ಲಿ ಸ್ವಲ್ಪಮಟ್ಟಿಗಾದರೂ ನಾಗರಿಕತೆಗೆ ಒಳಗಾಗುವುದು ಸಹಜ. ಗ್ರಾಮೀಣ ದಲಿತನಿಗೂ, ನಾಗರಿಕ ದಲಿತನಿಗೂ ಮೂಲಭೂತ ಸ್ವರೂಪಗಳಲ್ಲಿ ಗಣನೀಯ ವ್ಯತ್ಯಾಸಗಳು ಕಂಡುಬರುವುದಿಲ್ಲ. ಆದರೂ ಮೇಲುಸ್ತರದಲ್ಲಿ ಕೆಲವು ವ್ಯತ್ಯಾಸಗಳು ಇವೆ. ನಾಗರಿಕ ದಲಿತನ ಬದುಕು ಗ್ರಾಮೀಣ ದಲಿತನದಕ್ಕಿಂತ ಸ್ವಲ್ಪಮಟ್ಟಿಗೆ ಸುಧಾರಿಸಿದಂತೆ ಕಂಡುಬರುವುದುಂಟು. ವಿಸ್ತೃತವಾದ ಜನಸಮುದಾಯದಲ್ಲಿ ಅಸ್ಪೃಶ್ಯತೆ ಅಷ್ಟಾಗಿ ಕಂಡುಬಾರದಿರುವುದೂ ಹಾಗೂ ಸಾರ್ವಜನಿಕವಾದ ನಾಗರಿಕ ಸವಲತ್ತುಗಳು ಅಲ್ಪಸ್ವಲ್ಪ ಲಭ್ಯವಾಗುವುದೂ ಇದಕ್ಕೆ ಮುಖ್ಯ ಕಾರಣ ಎನ್ನಬಹುದು. ಅಂದಮಾತ್ರಕ್ಕೆ ನಗರದ ದಲಿತನ ಸಾಮಾಜಿಕ ಬದುಕು ಪೂರ್ಣ ಪ್ರಮಾಣದಲ್ಲಿ ಸುಧಾರಣೆಯಾಗಿದೆ; ಅಸ್ಪೃಶ್ಯತೆ ಸಂಪೂರ್ಣ ನಾಶವಾಗಿದೆ ಎನ್ನಲಾಗುವುದಿಲ್ಲ.

ನಗರಗಳಲ್ಲೂ ಕೂಡ ಹಳ್ಳಿಗಾಡುಗಳಲ್ಲಿದ್ದಂತೆ ದಲಿತಕೇರಿಗಳು ಪ್ರತ್ಯೇಕವಾಗಿಯೇ ಇರುವುದು ವಿಶೇಷವೇನಲ್ಲ. 'ಮಾದಿಗರ ಹಟ್ಟಿ', 'ಹರಿಜನ ಕೇರಿ', 'ಹೊಲೆಗೇರಿ' ಮೊದಲಾದವುಗಳು ಈಗ 'ಏಕೆ ಕಾಲೋನಿ', 'ಗಾಂಧೀನಗರ', 'ನೆಹರು ನಗರ', 'ಅಂಬೇಡ್ಕರ್ ಕಾಲೋನಿ' ಎಂಬಂಥ ಹೊಸ ಹೆಸರುಗಳನ್ನು ಪಡೆದುಕೊಂಡು ತಮ್ಮ ಯಥಾ ಸ್ವರೂಪಗಳನ್ನು ಉಳಿಸಿಕೊಂಡಿವೆ!

ಗ್ರಾಮೀಣ ಪ್ರದೇಶಗಳಲ್ಲಿ ದಲಿತರ ವಾಸಸ್ಥಾನಗಳು ಹುಲ್ಲು ಗರಿಗಳ 'ಗುಡಿಸಲು'ಗಳಾದರೆ ನಗರದ ದಲಿತರ ವಾಸದ ನೆಲೆಗಳೂ ಕೂಡಾ ಸಣ್ಣ ಪುಟ್ಟ ಗೋಡೆ, ಗರಿ, ಸಿನಿಮಾ ಬ್ಯಾನರು, ಪ್ಲಾಸ್ಟಿಕ್ ಶೀಟು, ಹರಕು ಮುರುಕು ತಗಡುಗಳ 'ಜೋಪಡಿ'ಗಳು. ಇವುಗಳ ಮಧ್ಯದ ಇಕ್ಕಟ್ಟಾದ ಕಾಲುದಾರಿಗಳೇ ಕೊಳಕು ಕೊಚ್ಚೆಯ ಚರಂಡಿಗಳು. ಮಕ್ಕಳು ಮರಿಗಳು ನಾಯಿ ಹಂದಿಗಳೊಂದಿಗೆ ಕೂಡಿ ಆಡುತ್ತವೆ! ಪೌರ-ಕಾರ್ಮಿಕರೂ, ಚಮ್ಮಾರರೂ, ಕೂಲಿಕಾರರೂ, ಹಮಾಲರೂ, ಬೆರಳೆಣಿಕೆಯಷ್ಟು ಸರಕಾರಿ ನೌಕರರೂ ವಾಸಿಸುವ ಈ ಕೇರಿಗಳಲ್ಲಿ ಕುಡಿತ ಮತ್ತು ಸಿನಿಮಾ ಕ್ರೇಜಿಗೆ ಒಳಗಾದವರೂ ಬಡ್ಡಿ-ಸಾಲಗಳಿಗೆ ಸಿಲುಕಿ ಜೀವನಪರ್ಯಂತ ಏಲಿ ಏಲಿ ಒದ್ದಾಡುವವರೂ ಹೆಚ್ಚು. ಈ ಮಧ್ಯೆ 'ಚೀಟಿ' ವ್ಯವಹಾರಗಳು ಬೇರೆ! ಸರಕಾರದ ಕಾಳಜಿ ಹಾಗೂ ಚುನಾವಣಾ ಸಮಯದ ಭರವಸೆಗಳು ಎಷ್ಟರಮಟ್ಟಿಗೆ ಮಣ್ಣುಮುಕ್ಕಿ ಹೋಗುತ್ತವೆ ಎಂಬುದನ್ನಿಲ್ಲಿ ನೋಡಬಹುದು. ಇಲ್ಲಿ 'ಸುಧಾರಣೆ' ಎಂಬುದಕ್ಕೆ ಅರ್ಥವೇ ಇರುವುದಿಲ್ಲ. ಶುಚಿತ್ವ ಆರೋಗ್ಯಕರ ವಾತಾವರಣ ಕನಸಿನ ಮಾತು. ಬಾಲವಾಡಿ-ನರ್ಸರಿ ಶಾಲೆಗಳೂ ಕೂಡಾ ಹಂದಿ ನಾಯಿಗಳ ಗೂಡುಗಳಂತೆಯೇ! ಕಾಲ, ಸರಕಾರ, ಅಧಿಕಾರಿಗಳು ಬದಲಾದರೂ ದಲಿತ ಕೇರಿಗಳ ಸ್ವರೂಪದಲ್ಲಿ ಮಾತ್ರ ಯಾವುದೇ ತರಹದ ವ್ಯತ್ಯಾಸವೂ ಕಂಡುಬರುವುದಿಲ್ಲ.

ಇಂತಹ ಅವಲಕ್ಷಣಗಳ ಮಧ್ಯೆಯೂ ನಗರದ ದಲಿತನಿಗೆ ಅಲ್ಪಸ್ವಲ್ಪವಾದರೂ ನಾಗರಿಕತೆಯ ಆಕರ್ಷಕ ಗಾಳಿ ತಟ್ಟದೆ ಇರಲಾರದು. ಹಳ್ಳಿಗಾಡುಗಳಿಗಿಂತ ನಗರಗಳಲ್ಲಿ ಅಕ್ಷರ ಕಲಿಕೆಯ ಅವಕಾಶ-ಅನುಕೂಲಗಳು ಹೆಚ್ಚು. ಆದರೂ ತಲೆತಲಾಂತರದ ದಾರಿದ್ರ್ಯದ ನಿಮಿತ್ತ ಪೂರ್ಣಪ್ರಮಾಣದ ಅಥವಾ ಅಲ್ಪ ಪ್ರಮಾಣದ ವಿದ್ಯೆಯೂ ದಲಿತ ಮಕ್ಕಳಿಗೆ ದಕ್ಕದಂತಾಗುತ್ತದೆ. ಅಕ್ಷರಕ್ಕಿಂತ ಸದ್ಯದ ಹೊಟ್ಟೆಪಾಡನ್ನು ನೋಡಿಕೊಳ್ಳುವುದೇ ತೀರ ಅನಿವಾರ್ಯವಾಗುತ್ತದೆ. ಹೀಗಾಗಿ ವರ್ಕ್‌ಶಾಪ್, ಸಣ್ಣ ಪುಟ್ಟ ಕಾರ್ಖಾನೆ, ಅಂಗಡಿ ಮುಂಗಟ್ಟುಗಳನ್ನು ಉದ್ಯೋಗವಾಗಿ ನೋಡಿಕೊಳ್ಳಬೇಕಾಗುತ್ತದೆ! ಹೀಗಾಗಿ ಸರಕಾರಿ ಮೀಸಲಾತಿ ಸವಲತ್ತುಗಳೂ ದಕ್ಕುವುದಿಲ್ಲ.

ನಗರದ ಜನಸಂದಣಿಯಲ್ಲಿ ಯಾವುದೇ ವ್ಯಕ್ತಿಯ ಜಾತಿಯನ್ನು ಗುರುತಿಸುವುದು ಕಷ್ಟ. ನಗರದ ದಲಿತನೂ ಕೂಡಾ ಎಲ್ಲರಂತೆ ಪೋಷಾಕು ಧರಿಸಬಹುದು; ನಡೆನುಡಿಯಲ್ಲಿ ಸಂಸ್ಕೃತಿಯನ್ನು ವ್ಯಕ್ತಪಡಿಸಬಹುದು. ಹೀಗಾಗಿ ತನ್ನ ಕೇರಿಯ ಆಚೆಯ ರಸ್ತೆಗೆ ಇಳಿದನೆಂದರೆ ಯಾರೂ ಇವನನ್ನು ಗುರುತಿಸಲಾರರು! ಹೊರನೋಟಕ್ಕೆ ಎಲ್ಲರ ಸ್ವರೂಪವೂ ಒಂದೇ! ಮೇಲು ಜಾತಿಯವನು ಯಾರೋ? ಕೆಳಜಾತಿಯವನು ಯಾರೋ? ಇದನ್ನೇ ನಾಗರಿಕತೆ ಎನ್ನಬೇಕೇನೋ!

ಹಳ್ಳಿಗಾಡುಗಳಲ್ಲಿ ಉಳಿದುಕೊಂಡಿರುವ ನೇರ ಅಸ್ಪೃಶ್ಯತಾಚರಣೆ ನಗರಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಹೊರನೋಟಕ್ಕೆ ಎಲ್ಲರಂತೆಯೇ ಕಾಣುವ ದಲಿತ ವ್ಯಕ್ತಿಯು ಸಹಜವಾಗಿಯೇ ಸಾರ್ವಜನಿಕ ಮನರಂಜನಾ ಕೇಂದ್ರ, ಹೋಟೆಲ್, ಅಂಗಡಿ, ವಾಹನ ಮೊದಲಾದವುಗಳಿಗೆ ಯಾವುದೇ ಅಡ್ಡಿ ಆತಂಕವಿಲ್ಲದೆ ಪ್ರವೇಶಾವಕಾಶ ಪಡೆಯಬಹುದು. ಹೀಗಾಗಿ ನಗರದ ಮೇಲ್ವರ್ಗಗಳಲ್ಲಿ ವೈಯಕ್ತಿಕವಾದ ಜಾತೀಯ ಮನೋಭಾವ ತುಂಬಿ ತುಳುಕುತ್ತಿದ್ದರೂ ನಾಗರಿಕತೆಯ ಬಾಹ್ಯ ಸ್ವರೂಪದಿಂದ ಒಂದಿಷ್ಟು ಮಾನವತ್ವದ ನೆರಳು ಗೋಚರಿಸಬಹುದು! ಹೀಗಾಗಿ ನಾಗರಿಕ ದಲಿತ ತನ್ನ ನಗರದ ಬದುಕಿನಲ್ಲಿ ಸ್ವಲ್ಪಮಟ್ಟಿಗಾದರೂ ವೈಯಕ್ತಿಕ ನೆಮ್ಮದಿಯನ್ನು ಕಂಡುಕೊಂಡಿದ್ದಾನೆ. ಆದ್ದರಿಂದ ನಗರಗಳಲ್ಲಿ ಅಸ್ಪೃಶ್ಯತೆ ವಿರಳ ಎಂಬಂತೆ ತೋರುವುದು ಸಹಜವೇ! ಗ್ರಾಮೀಣ ದಲಿತನೂ ಕೂಡ ನಗರಕ್ಕೆ ಬಂದಾಗ ಅಲ್ಲಿಯ ವಾತಾವರಣದಲ್ಲಿ ಹಾಯಾಗಿ ಉಸಿರಾಡಬಹುದಾಗಿದೆ. ಇದು ಕೆಲವು ಸಂಪ್ರದಾಯಸ್ಥರ ಕಣ್ಣಿಗೆ 'ಕಾಲ ಕೆಟ್ಟು ಗಬ್ಬೆದ್ದು ಹೋಗಿದೆ' ಎಂಬಂತೆ ಕಾಣಬಹುದು! ಎಲ್ಲಿ ನಾಗರಿಕತೆ ಇದೆಯೋ ಅಲ್ಲಿ ಸ್ಥಾಪಿತ ಸಂಸ್ಕೃತಿಯ ಬಿಗಿ ಇರುವುದಿಲ್ಲ. ಆದ್ದರಿಂದಲೇ 'ನಾಗರಿಕತೆಯಿಂದ ಧರ್ಮ-ಸಂಸ್ಕೃತಿ ನಾಶವಾಗುತ್ತಿದೆ' ಎಂಬ ಹುಯಿಲು ಸನಾತನಿಗಳಿಂದ ಎದ್ದಿರಬಹುದು.

ನಗರಗಳಲ್ಲಿ ಜಾತೀಯತೆ - ಅಸ್ಪೃಶ್ಯತೆ ಬಾಹ್ಯ ನೋಟಕ್ಕೆ ಕಂಡುಬಾರದಿದ್ದರೂ ಅದು ಸಂಪೂರ್ಣವಾಗಿ ನಾಶವಾಗಿದೆ ಎನ್ನಲಾಗುವುದಿಲ್ಲ. ಜಾತೀವಾದಿ ಮನಸ್ಸುಗಳು ಸಮುದ್ರದ ತಳದಲ್ಲೂ ಹಿಮಾಲಯದ ತುದಿಯಲ್ಲೂ ಒಂದೇ ರೀತಿ! ಜಾತೀಯತೆ-ಅಸ್ಪೃಶ್ಯತೆ ಎಂಬುದು ಹಾಸಿಗೆಯಲ್ಲಿ ಸೇರಿಕೊಂಡ ವಿಷಜಂತುಗಳಂತೆ ಎಲ್ಲೆಲ್ಲೂ ಉಸಿರಾಡುತ್ತವೆ. ವೈಯಕ್ತಿಕ ನಡೆವಳಿಕೆಗಳಲ್ಲಿ, ಕೌಟುಂಬಿಕ ಸ್ತರಗಳಲ್ಲಿ ಪೂರ್ಣ ಪ್ರಮಾಣದ ಜಾತೀಯತೆ - ಅಸ್ಪೃಶ್ಯತಾ ಮನೋಭಾವಗಳು ಹಸಿ ಹಸಿಯಾಗಿ ವ್ಯಕ್ತವಾಗುವುದುಂಟು! ಈ ದೇಶದಲ್ಲಿ ನಾಗರಿಕತೆ ಹಾಗೂ ಧಾರ್ಮಿಕತೆ ಎರಡು ಹಳಿಗಳ ಹಾಗೆ! ಇವು ಎಲ್ಲೂ ಯಾವಾಗಲೂ ಒಂದುಗೂಡುವುದಿಲ್ಲ.

ನಗರಗಳಲ್ಲಿ ಸೇವೆ ಸಲ್ಲಿಸಬೇಕಾದ ದಲಿತ ಸರಕಾರೀ ನೌಕರರ ಪಾಡು ಏನೆಂಬುದು ಅನುಭವಿಸಿದವರಿಗೆ ಮಾತ್ರ ಗೊತ್ತಾಗುವಂಥದ್ದು. ಸ್ಪೃಶ್ಯ ನೌಕರರಿಗಂತೂ ಬಾಡಿಗೆ ಮನೆ ಸಿಗುವಲ್ಲಿ ಯಾವುದೇ ಬಗೆಯ ತೊಂದರೆ ಎದುರಾಗುವುದಿಲ್ಲ. ಅದೇ ಒಬ್ಬ ದಲಿತ ನೌಕರನಿಗೆ ಬಾಡಿಗೆ ಮನೆ ದೊರಕುವುದು ತುಂಬಾ ದುಸ್ತರ. ದಲಿತ ಕೇರಿಗಳಲ್ಲಿ ಸರಿಯಾದ ವಸತಿ ಸೌಕರ್ಯ ಇರುವುದಿಲ್ಲ. ಒಂದರೊಳಗೊಂದು ಸಿಕ್ಕಿಕೊಂಡೋ ಒತ್ತಿಕೊಂಡೋ ಇರುವ ಮನೆ ಎಂಬ ಜೋಪಡಿಗಳಲ್ಲಿ ಹಾಯಾಗಿ ಕಾಲು ಚಾಚುವುದಕ್ಕೂ ಸ್ಥಳಾವಕಾಶವಿರುವುದಿಲ್ಲವೆಂದ ಮೇಲೆ ಮನೆಗಳನ್ನು ಬಾಡಿಗೆಗೆ ನೀಡುವ ಮಾತೆಲ್ಲಿಯದು! ಅನಿವಾರ್ಯವಾಗಿ ಸವರ್ಣೀಯರ ಮನೆಗಳನ್ನೇ ಹಿಡಿಯಲೆತ್ನಿಸಬೇಕು! "ಎಲ್ಲರ ಹಾಗೆ ನಾವೂ ಮನುಷ್ಯರೇ, ಎಲ್ಲರಂತೆ ನಾವೂ ಬದುಕುತ್ತೇವೆ; ನಾವು ಹೆಸರಿಗೆ ಹೀನ ಜಾತಿಯವರಾದರೂ ಯಾರಿಗೇನೂ ತೊಂದರೆಯನ್ನುಂಟುಮಾಡುವುದಿಲ್ಲ. ಇದು ಇಪ್ಪತ್ತೊಂದನೆಯ ಶತಮಾನ; ವೈಜ್ಞಾನಿಕ ಯುಗ; ಜಾಗತೀಕರಣದ ಆಶಯದಿಂದಾಗಿ ಜಗತ್ತೇ ಒಂದು ಕುಟುಂಬವಾಗುತ್ತಿದೆ. ಹೀಗಿರುವಾಗ ಕ್ಷುಲ್ಲಕವಾದ ಜಾತಿ ವಿಷಯಕ್ಕೆ ಅಂಜಬಾರದು. ಕಾನೂನು ದೃಷ್ಟಿಯಲ್ಲಿ ಅಸ್ಪೃಶ್ಯತಾಚರಣೆ ಅಪರಾಧ" – ಎಂಬಂಥ ವಿಚಾರ ಸರಣಿಯಲ್ಲಿ ಸವರ್ಣೀಯ ಪ್ರದೇಶದಲ್ಲಿಯ ಬಾಡಿಗೆ ಮನೆಗಾಗಿ ವಿಚಾರಿಸಿದರೆ, ಕೆಲವು ಮಾಲೀಕರು ಅಸ್ಪೃಶ್ಯರಿಗೆ ಮನೆ ಕೊಡುವುದಿಲ್ಲ ಎಂದು ಬಿಡುತ್ತಾರೆ! ಮತ್ತೆ ಕೆಲವರು ಯಾವುದೋ ಸಬೂಬು ಹೇಳಿ ಜಾರಿಕೊಳ್ಳುತ್ತಾರೆ. ಈ ಜಾರಿಕೆ ಅಥವಾ ನಿರಾಕರಣೆಯ ಸ್ವರೂಪ ವೈವಿಧ್ಯಮಯವಾದುದು. ಸೀಮಿತ ಸರಕಾರ ನಿವಾಸದಲ್ಲೂ ಅವಕಾಶ ದೊರಕದೇ ಹೋದಾಗ ನೌಕರನು ಅನುಭವಿಸುವ

ಪರಿಪಾಟಲು ವಿವರಣೆಗೆ ನಿಲುಕುವುದಿಲ್ಲ. ಕಡೆಗೆ ಸವರ್ಣೀಯರ ಮನೆ ಹಿಡಿಯಲು ದಲಿತ ನೌಕರ ಯಾವುದಾದರೊಂದು ಮೇಲು ಜಾತಿಯ ಹೆಸರನ್ನು ಹೇಳಿಕೊಳ್ಳುವುದು ಅನಿವಾರ್ಯವಾಗುತ್ತದೆ! ಯಾರ ಹಣೆಯ ಮೇಲೂ ಜಾತಿಯನ್ನು ನಮೂದಿಸಿರುವುದಿಲ್ಲ; ಜಾತಿಗೆ ತಕ್ಕ ಮೈಬಣ್ಣ ಕಂಡುಬರುವುದಿಲ್ಲ. ಹೀಗಾಗಿ ಬಾಡಿಗೆ ನೀಡಿದ ಮನೆಯ ಮಾಲೀಕನಿಗೂ ಒಳಗೊಳಗೇ ಅನುಮಾನ ಇದ್ದೇ ಇರುತ್ತದೆ. ಹಾಗೆಯೇ ಮನೆಗೆ ಸೇರಿಕೊಂಡ ದಲಿತನಿಗೂ ನೆಮ್ಮದಿ ಎಂಬುದಿರುವುದಿಲ್ಲ. ಯಾವ ಕ್ಷಣದಲ್ಲಿ ಜಾತಿ ವಿಷಯ ಬಯಲಾಗುವುದೋ ?! ಯಾವ ರೀತಿ ಮನೆ ಖಾಲಿ ಮಾಡಿಸುವರೋ ?!




ಕೆಲವು ನಾಗರಿಕ ದಲಿತರು ಆದಷ್ಟು ಮಟ್ಟಿಗೆ ಜಾತಿಯ ಹೆಸರನ್ನು ಮುಚ್ಚಿಟ್ಟುಕೊಳ್ಳುವುದೂ ಉಂಟು! ಜಾತೀಯತೆಯ ಕ್ರೂರ ವ್ಯವಸ್ಥೆಯಲ್ಲಿ ಅದು ಅನಿವಾರ್ಯವೂ ಹೌದು! ಕೆಲವು ಸ್ಥಳೀಯ ದಲಿತರಿಗೆ ಜಾತಿಯ ಹೆಸರನ್ನು ಮರೆಮಾಚಿಕೊಳ್ಳುವ ಅಗತ್ಯತೆ ಇರದಿದ್ದರೂ ಬಾಹ್ಯ ಸಮಾಜದಲ್ಲಿ 'ಅಸ್ಪೃಶ್ಯ' ಎನಿಸಿಕೊಳ್ಳಲು ಯಾರಿಗೆ ತಾನೆ ಇಷ್ಟವಾದೀತು! ಇಂಥ ಕಾರಣಗಳಿಂದ ಈ ಕುರಿತ ಅವರ ನಡೆವಳಿಕೆಗಳು ತುಂಬಾ ಅಸಂಬದ್ಧವಾಗಿಯೂ ಹಾಸ್ಯಾಸ್ಪದ ವಾಗಿಯೂ ಕಾಣುತ್ತವೆ!

ಮೇಲುಜಾತಿಯವರಂತೆ ನಡೆದುಕೊಳ್ಳಲೆತ್ನಿಸುವ ವೈಟ್‌ಕಾಲರ್ ದಲಿತರು ಅಪ್ಪಿತಪ್ಪಿಯೂ ತಮ್ಮಲ್ಲಿ ಜಾತಿಗೆ ತಕ್ಕನಾದ ಸ್ವಭಾವ-ನಡೆವಳಿಕೆಗಳು ವ್ಯಕ್ತವಾಗದಂತೆ ಎಚ್ಚರ ವಹಿಸುತ್ತಾರೆ. ಕೆಲವರು ತಮ್ಮಲ್ಲಿ ರೂಢಿಯಿಲ್ಲದ ಸವರ್ಣೀಯರ ಹಬ್ಬ-ಹರಿದಿನಗಳನ್ನು ಆಚರಿಸಲೆತ್ನಿಸುತ್ತಾರೆ! ಆಗಾಗ ದೇವಾಲಯಗಳಿಗೆ ಹೋಗಿಬರುತ್ತಾರೆ! ಧರ್ಮಸ್ಥಳ-ಮಂತ್ರಾಲಯ ಮೊದಲಾದವುಗಳಿಗೆ ಹೋಗಿಬಂದು ಅಕ್ಕಪಕ್ಕದವರಿಗೆಲ್ಲಾ ಪ್ರಸಾದ ಹಂಚುತ್ತಾರೆ! ಸಂದರ್ಭಕ್ಕೆ ತಕ್ಕಂತೆ ಸೀಮಂತ ಕಾರ್ಯ, ಶನಿಪುರಾಣ, ಬರ್ತ್‌ಡೇ ಮೊದಲಾದವುಗಳನ್ನು ಆಡಂಬರವಾಗಿ ಆಚರಿಸುತ್ತಾರೆ. ಗೃಹಪ್ರವೇಶ ಸಂದರ್ಭಗಳಲ್ಲಿ ಸತ್ಯನಾರಾಯಣ ಪೂಜೆ ಖಾತರಿ! ಪುಟ್ಟ ಮಕ್ಕಳ ಬಾಯಿಂದ ಯಾವಾಗ ಜಾತಿ ಬಹಿರಂಗವಾದೀತೋ ಎಂಬ ಅಳುಕಿನಿಂದ ಅವರನ್ನು ಬೇರೆ ಮಕ್ಕಳೊಂದಿಗೆ ಬೆರೆಯುವುದನ್ನೂ ನಿಯಂತ್ರಿಸುತ್ತಾರೆ! ತಮಗೆ ಬದುಕನ್ನು ಕೊಟ್ಟ ಡಾ|| ಅಂಬೇಡ್ಕರರ ಭಾವಚಿತ್ರವನ್ನು ಗೋಡೆಗೆ ಅಂಟಿಸಿಕೊಳ್ಳಲೂ ಅಂಜಿಕೆ! ಸಾಂಪ್ರದಾಯಿಕ ಸಂದರ್ಭಗಳಲ್ಲಿ ಸವರ್ಣೀಯ ಗೆಳೆಯರನ್ನೂ ಸಹೋದ್ಯೋಗಿಗಳನ್ನೂ ಮನೆಗೆ ಆಹ್ವಾನಿಸಿ, ಜಾತಿ ಗೊತ್ತಾಗದ ರೀತಿಯಲ್ಲಿ ನಡೆದುಕೊಳ್ಳುವ ಪರಿ ನಿಜಕ್ಕೂ ತಮಗೆ ತಾವೇ ವಿಧಿಸಿಕೊಂಡ ಶಿಕ್ಷೆಯೇ ಸರಿ! ಸವರ್ಣೀಯರಂತೆ ಕಾಣಿಸಿಕೊಳ್ಳುವುದೇ ಒಂದು ಫ್ಯಾಷನ್ ಎಂಬಂತಾದಾಗ ಹಣೆ ತುಂಬಾ ವಿಭೂತಿ - ಭಂಡಾರ ಹಚ್ಚಿಕೊಳ್ಳುವುದು ತೀರಾ ಸಾಮಾನ್ಯವಾದ ಸಂಗತಿ.

ದಲಿತರೆಲ್ಲರೂ ಹೆಂಡ ಕುಡುಕರಲ್ಲ; ಮಾಂಸಾಹಾರಿಗಳಲ್ಲ. ದಲಿತರಲ್ಲದವರಲ್ಲೂ ಕುಡುಕರು, ಮಾಂಸಾಹಾರಿಗಳು ತುಂಬಿದ್ದಾರೆ. ದಲಿತರಲ್ಲೂ ಕೆಲವರಂತೂ ಮಾಂಸಾಹಾರವಿಲ್ಲದೆ ಬದುಕೇ ಸಾಧ್ಯವಿಲ್ಲ ಎನ್ನುವವರೂ ಇದ್ದಾರೆ! ಅಂತಹವರೂ ಕೂಡಾ ಮಾಂಸದ ಅಂಗಡಿಗೆ ಹೋದಾಗ ಅಕ್ಕಪಕ್ಕದ ಮನೆಯವರಾರಾದರೂ ನೋಡಿಯಾರೆಂಬ ಭಯ ಅನುಭವಿಸುತ್ತಾರೆ! ಇಂತಹ ಸಂದರ್ಭಗಳನ್ನು ಹೇಗಾದರೂ ನಿಭಾಯಿಸಬಹುದು. ಆದರೆ ಮನೆಯೊಳಗಿನಿಂದ ಹೊರಹೊಮ್ಮುವ ಮಸಾಲೆ-ಮಾಂಸದ ಘಮವನ್ನು ನಿಯಂತ್ರಿಸುವುದೂ ಊಟದ ನಂತರದ ಮೂಳೆ ಎಲುಬುಗಳನ್ನು ಗತಿ ಕಾಣಿಸುವುದೂ ಹೇಗೆ ?!

ಜಾತಿಯ ವಿಷಯದಲ್ಲಿ ಅತಿ ಸೂಕ್ಷ್ಮಗ್ರಾಹಿಗಳಾದ ಕೆಲವು ಸವರ್ಣೀಯರು ಪಕ್ಕದ ಮನೆಯವನು ದಲಿತನೆಂದು ತಿಳಿದುಬಿಟ್ಟರೆ ನಂತರದ ಕಥೆಯೇ ಬೇರೆ! ಸುಳ್ಳು ಹೇಳಿ ಮನೆ ಪಡೆದ ದಲಿತನನ್ನು ನಿರ್ದಾಕ್ಷಿಣ್ಯವಾಗಿ ಹೊರದಬ್ಬುತ್ತಾರೆ! ಇಲ್ಲವೆ ಕಾನೂನುಗಳಿಗೆ ಹೆದರಿ ಮನೆಯನ್ನು ಖಾಲಿ ಮಾಡಿಸಲು ತರಹೇವಾರಿ ಸಬೂಬುಗಳನ್ನು ಮುಂದಿಡುತ್ತಾರೆ! ಇಲ್ಲವೆ ಇದ್ದಕ್ಕಿದ್ದಂತೆ ಅಡ್ವಾನ್ಸು ಬಾಡಿಗೆ ಮೊತ್ತವನ್ನು ಮಿತಿಮೀರಿ ಏರಿಸಿಬಿಡುತ್ತಾರೆ! ಮನೆಯ ಮಾಲೀಕರು ನೆರೆಮನೆಯವರೇ ಆಗಿದ್ದರೆ ಅಮಾನುಷವಾದ ಕಿರಿಕಿರಿಯೇ ಸರಿ. ಮುಂದೆ ಅಕ್ಕಪಕ್ಕದವರೂ ಒಡನಾಟವನ್ನು ನಿಲ್ಲಿಸಿಬಿಡುತ್ತಾರೆ! ಸಾರ್ವಜನಿಕ ನಲ್ಲಿಯಲ್ಲಿ ನೀರು ತುಂಬಿಸಿಕೊಳ್ಳುವಾಗ ನಲ್ಲಿಯ ಮೂತಿಯನ್ನು ತೊಳೆಯುತ್ತಾರೆ! ಹಿಂದೆ ಮುಂದೆ ಚುಚ್ಚು ಮಾತುಗಳನ್ನಾಡುತ್ತಾರೆ! ಸ್ವಾಭಿಮಾನಿ ದಲಿತನ ಪಾಲಿಗೆ ಇದಕ್ಕಿಂತ ಅವಮಾನಕರ ಸಂಗತಿ ಬೇರಾವುದೂ ಇರಲಾರದು. ಇಂತಹ ಸಂದರ್ಭಗಳಲ್ಲಿ ಸವರ್ಣೀಯ ಮನಸುಗಳು ತಮ್ಮಷ್ಟಕ್ಕೆ ತಾವು ಇರುವುದಿಲ್ಲ; ಇವರಷ್ಟಕ್ಕೆ ಇವರು ಇರಲೂ ಬಿಡುವುದಿಲ್ಲ.

ಇದಕ್ಕೆಲ್ಲ ಅಪವಾದ ಎಂಬಂತೆ ಕೆಲವರು ಅಸ್ಪೃಶ್ಯರಿಗೆ ಮನೆ ಬಾಡಿಗೆಗೆ ಕೊಡುತ್ತಾರೆ. ನಮಗೆ ಜಾತಿ ಮುಖ್ಯವಲ್ಲ ಮನುಷ್ಯತ್ವ ಮುಖ್ಯ ಅಂದುಕೊಂಡು ಸ್ನೇಹ ಒಡನಾಟ ಬೆಳೆಸಿಕೊಳ್ಳುತ್ತಾರೆ. ಬಂಧುಗಳಂತೆಯೇ ಮನೆಗೂ ಆಹ್ವಾನಿಸಿ ಪ್ರೀತಿ-ವಿಶ್ವಾಸ ವ್ಯಕ್ತಪಡಿಸುತ್ತಾರೆ. ಕೆಳಜಾತಿಯಾದರೇನು, ಅವರೂ ನಮ್ಮಂತೆಯೇ ಮನುಷ್ಯರೇ ಅಲ್ಲವೇ ? ಎನ್ನುತ್ತಾರೆ. ಇಂತಹ ಮನುಷ್ಯರನ್ನೂ ನಾವು ನಗರಗಳಲ್ಲಿ ಕಾಣಬಹುದು. ಇದೇ ನಿಜವಾದ ನಾಗರಿಕತೆಯ ಹಾಗೂ ಮಾನವೀಯ ಲಕ್ಷಣ! ಇಂಥವರಿಗೂ ಗ್ರಾಮಕ್ಕಿಂತ ನಗರದಲ್ಲಿ ಹೀಗೆ ನಡೆದುಕೊಳ್ಳುವುದು ಸುಲಭ.

ಸಾಮಾನ್ಯವಾಗಿ ನಗರದ ಜನರೆಲ್ಲಾ ಉಡುಪು - ತೊಡಪುಗಳಲ್ಲಿ ಒಂದೇ ತರಹ ಕಾಣುವುದರಿಂದ ವ್ಯಕ್ತಿತ್ವದ ಆಕರ್ಷಣೆಯಿಂದ ಏರ್ಪಡುವ ಪ್ರೇಮ-ಸಂಬಂಧಗಳೂ ಸಾಮಾನ್ಯವೇ. ಜಾತಿಯ ಸಂಗತಿ ಬಯಲಾದರೆ ಅಂತಹ ಸಂಬಂಧಗಳು ಮುರಿದು ಬೀಳುವುದೂ ಸಾಮಾನ್ಯವೇ! ಸವರ್ಣೀಯನಂತೆ ತೋರಿಸಿಕೊಂಡ ಅಸ್ಪೃಶ್ಯನು ಶಿರ್ಶಿಯ ಮಾರಮ್ಮನನ್ನು ವಿವಾಹವಾದದ್ದು, ನಂತರ ಅವನು ಅಸಲಿ ಮಾದಿಗ ಎಂಬುದನ್ನು ತಿಳಿದ ಅವಳು ಅವನನ್ನು ಅಟ್ಟಿಸಿಕೊಂಡು ಹೋಗಿ ಕಡಿದು ಹಾಕಿರುವುದೊಂದು ಪೌರಾಣಿಕ ಸಂಗತಿ. ಅಂತಹ ಘಟನೆಗಳು ಈಗ ನಡೆಯದಿದ್ದರೂ ನಿರೀಕ್ಷೆಗೆ ಮೀರಿದ ತಿರುವುಗಳು ಉಂಟಾಗುವುದೇನೂ ಅಪರೂಪವಲ್ಲ. ಇವುಗಳಿಗೂ ಅಪವಾದವೆಂಬಂತೆ ನಡೆದ ಅಂತರಜಾತೀಯ ವಿವಾಹಗಳು ಯಶಸ್ವಿಯಾಗಿರುವ ಹಲವಾರು ಉದಾಹರಣೆಗಳನ್ನು ನಗರಗಳಲ್ಲಿ ಕಾಣಬಹುದು. ಇಂತಹ ಉದಾಹರಣೆಗಳು ನಗರದ ನಾಗರಿಕತೆಯಿಂದ ಮಾತ್ರ ಸಾಧ್ಯ!

ಕಛೇರಿ, ವಿದ್ಯಾಕೇಂದ್ರ, ಕಾರ್ಖಾನೆ ಮೊದಲಾದ ಸ್ಥಳಗಳಲ್ಲಿಯ ದಲಿತರ ಸ್ಥಿತಿಯು ಕತ್ತಿಯ ಅಲಗಿನ ಮೇಲೆ ನಡೆದಂತೆ! ಜಾತಿವಾದಿಗಳು ಇತ್ತ ನೇರವಾಗಿ ಅಸ್ಪೃಶ್ಯತೆಯನ್ನೂ ಆಚರಿಸಲಾಗದೆ, ಅತ್ತ ವಿಶ್ವಮಾನವತ್ವವನ್ನೂ ವ್ಯಕ್ತಪಡಿಸಲಾಗದೆ ತಮ್ಮದೇ ಆದ ಗೊಂದಲದ ಸ್ಥಿತಿಯಲ್ಲಿ ಕೊತಕೊತನೆ ಕುದಿಯುವುದೂ ಉಂಟು! ಇಂತಹ ಅತ್ಯಂತ ಸೂಕ್ಷ್ಮ ಸನ್ನಿವೇಶಗಳಲ್ಲಿ 'ಇದು ಜಾತೀಯತೆ', 'ಇದು ಜಾತೀಯತೆ ಅಲ್ಲ' ಎಂಬುದನ್ನು ಗೆರೆ ಎಳೆದು ಸ್ಪಷ್ಟೀಕರಿಸುವುದು ಅಸಾಧ್ಯ. 'ಮೇಲು ಜಾತಿಯ ಅಧಿಕಾರಿ; ಕೆಳಜಾತಿಯ ಜವಾನ' ಎಂಬಂಥ ಸಂದರ್ಭ ವಿಶೇಷವಾದುದಲ್ಲ! ಆದೇ 'ಕೆಳ ಜಾತಿಯ ಅಧಿಕಾರಿ, ಮೇಲುಜಾತಿಯ ಜವಾನ' ಎಂಬಂಥ ಸನ್ನಿವೇಶ ಮಾತ್ರ ಚಿಂತಾಜನಕವಾದುದು! ಇಂತಹ ಸನ್ನಿವೇಶಗಳಲ್ಲಿ ಕೆಳಜಾತಿ ಅಧಿಕಾರಿಯ ಚಡಪಡಿಕೆ ಮುಜುಗರದ ಅನುಭವವೇ ಬೇರೆ! ಇದು ಸವರ್ಣೀಯರಿಗೆ ಸುಲಭವಾಗಿ ಅರ್ಥವಾಗುವಂಥ ಸಂಗತಿಯಲ್ಲ. ನಗರದ ಒಡಲಲ್ಲಿ ಅಡಗಿರುವ ಇಂತಹ ವೈಪರೀತ್ಯಗಳಿಗೆ ಲೆಕ್ಕವಿಲ್ಲ.

ವೈಟ್ ಕಾಲರ್ ದಲಿತರು ಜಾತೀಯತೆಯ ಅಥವಾ ಅಸ್ಪೃಶ್ಯತೆಯ ಇಕ್ಕಟ್ಟಿನಿಂದ ಹೇಗೋ ದೂರ ಉಳಿದುಬಿಡುತ್ತಾರೆ; ಕುಂಬಾರಹುಳುವಿನಂತೆ ಯಾವುದನ್ನೂ ಮೈಗೆ ಸೋಕಿಸಿಕೊಳ್ಳದೆ ನಾಗರಿಕತೆಯ ಯಥಾ ಸ್ವರೂಪವನ್ನು ರಕ್ಷಿಸಿಕೊಳ್ಳುತ್ತಾರೆ. ಇಂತಹ ಸಂಸ್ಕೃತಿಯಿಂದ ದೂರವಿರುವ ನಗರದ ಇನ್ನಿತರ ದಲಿತರು ಸಂಘಟನೆಗಳ ಮರೆ ಹೋಗುತ್ತಾರೆ ಅಥವಾ ಸಂಘಟನೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಾರೆ. ಪ್ರಸ್ತುತ ಕಾಲಮಾನದಲ್ಲಿ ಸಂಘಟನಾ ಶಕ್ತಿಯು ತೀರಾ ಮಹತ್ತರವಾದುದು. ಈ ಶಕ್ತಿಯಿಂದಾಗಿ ದೌರ್ಜನ್ಯ, ಹಲ್ಲೆ, ಅತ್ಯಾಚಾರ, ಶೋಷಣೆ, ಅಸ್ಪೃಶ್ಯತೆ, ಬಹಿಷ್ಕಾರ, ಅವಮಾನ, ಅವಹೇಳನ ಮೊದಲಾದಂಥ ಅಮಾನವೀಯ ಪ್ರಕರಣಗಳು ಬಯಲಿಗೆ ಬರುತ್ತವೆ; ಸರಕಾರದ ಗಮನ ಸೆಳೆಯುತ್ತವೆ! ಹೀಗಾಗಿ ನಾಗರಿಕ - ಗ್ರಾಮೀಣ, ಅಕ್ಷರಸ್ಥ-ಅನಕ್ಷರಸ್ಥ ಸಮುದಾಯವು ರಕ್ಷಣೆಯ ಅವಕಾಶವನ್ನು ಪಡೆದುಕೊಳ್ಳುತ್ತವೆ! ನಾಡಿನ ಯಾವುದೇ ಮೂಲೆಯ ಹಳ್ಳಿಗಾಡಿನಲ್ಲಿ ನಡೆಯುವ ಅಮಾನವೀಯ ಪ್ರಕರಣವನ್ನಾದರೂ ಗಮನಿಸಿ, ನ್ಯಾಯಕ್ಕಾಗಿ ನ್ಯಾಯವಾದ ಪ್ರತಿಭಟನೆ ನಡೆಸುವ ದಲಿತರ ಸಾಮಾಜಿಕ ಕಳಕಳಿಯನ್ನು ಪ್ರಶ್ನಿಸುವ ಧೈರ್ಯ ಯಾರಿಗೂ ಇರುವುದಿಲ್ಲ. ಪ್ರಸ್ತುತ

ವಿದ್ಯಮಾನಗಳಿಗೆ ಸರಿಯಾಗಿ ಅವರು ಆಗಾಗ ಚಿಂತನ ಸಭೆಗಳನ್ನು ಏರ್ಪಡಿಸಿಕೊಂಡು ಸದ್ಯದ ಸಮಸ್ಯೆಗಳ ಬಗ್ಗೆ ಚರ್ಚಿಸುತ್ತಾರೆ; ಸವಾಲುಗಳ ಬಗ್ಗೆ ನಿರ್ಣಯಗಳನ್ನು ಕೈಗೊಳ್ಳುತ್ತಾರೆ. ಈ ಬಗೆಯ ನಾಗರಿಕ ದಲಿತರ ವ್ಯವಸ್ಥಿತ ಸಂಘಟಿತ ಹೋರಾಟಗಳಿಂದ ಅಮಾಯಕ ಗ್ರಾಮೀಣ ದಲಿತರ ಬದುಕು ಕೂಡ ಒಂದು ಮಟ್ಟದ ನೆಮ್ಮದಿಯನ್ನು ಪಡೆದುಕೊಳ್ಳಲು ಸಾಧ್ಯವಾಗಿದೆ.

ಕೆಲವೊಮ್ಮೆ ವೈಟ್ ಕಾಲರ್ ದಲಿತರು, ಸವರ್ಣೀಯ ಸಮುದಾಯಕ್ಕೆ ಸ್ವಲ್ಪ ಹತ್ತಿರದವರಾಗಿಯೂ ಆತ್ಮೀಯರಂತೆಯೂ ಗೋಚರಿಸುತ್ತಾರೆ! ಏಕೆಂದರೆ ಅವರು ಯಾವುದೇ ಸಾಮಾಜಿಕ ವೈಪರೀತ್ಯಗಳಿಗೂ ತಲೆಕೆಡಿಸಿಕೊಳ್ಳುವುದಿಲ್ಲ; ಯಾವುದೇ ಬದಲಾವಣೆಗಳಿಗೂ ಸ್ಪಂದಿಸುವುದಿಲ್ಲ; ಸಂಘಟಿತರಂತೆ ಹೋರಾಟ, ಪ್ರತಿಭಟನೆ, ಮುಷ್ಕರ, ಧರಣಿ, ಘೇರಾವ್, ಮೊದಲಾದವುಗಳಲ್ಲಿ ಭಾಗವಹಿಸುವುದಿಲ್ಲ. ದಲಿತರಿಗೂ ತಮಗೂ ಯಾವುದೇ ಸಂಬಂಧ ಇಲ್ಲವೆಂಬಂತೆ ತಮ್ಮದೇ ಆದ ನಿರ್ಲಿಪ್ತ ಸ್ಥಿತಿಯಲ್ಲಿದ್ದುಬಿಡುತ್ತಾರೆ. ಆದರೂ ಅವರಿಗೆ ಯಥಾರೀತಿ ಸರಕಾರಿ ಸವಲತ್ತುಗಳು ತಲುಪದೇ ಇರುವುದಿಲ್ಲ. ಇಂತಹ ದಲಿತರು ಅತ್ತ ಸವರ್ಣೀಯರಿಗೂ ಹೊಂದದೆ ಇತ್ತ ದಲಿತರಿಗೂ ಸೇರಿಕೆಯಾಗದೆ ಎಡಬಿಡಂಗಿಗಳಾಗಿ ತೆರೆಯ ಮರೆಯಲ್ಲೇ ಇದ್ದುಬಿಡುತ್ತಾರೆ!

ನಗರಗಳ ಇನ್ನೂ ಕೆಲವು ದಲಿತರು ಸಂಘಟನೆಗಳನ್ನು ತಮ್ಮ ಜೀವನೋಪಾಯಕ್ಕೊಂದು ದಾರಿಯನ್ನಾಗಿ ಮಾಡಿಕೊಂಡಿರುವುದೂ ಉಂಟು. ಕೆಲವರು ಇದನ್ನೊಂದು ಶೋಕಿ ಎಂದೂ ಭಾವಿಸುತ್ತಾರೆ! ಮತ್ತೆ ಕೆಲವರು ತಮ್ಮ ಅವ್ಯವಹಾರಗಳಿಗೆ ರಕ್ಷಾಕವಚ ಅಂದುಕೊಂಡಿದ್ದಾರೆ! ದುರಂತವೆಂದರೆ ಕೆಲವು ಭ್ರಷ್ಟ ದಲಿತ ಅಧಿಕಾರಿಗಳು ತಮ್ಮ ರಕ್ಷಣೆಗಾಗಿ ದಲಿತ ಸಂಘಟಕರನ್ನು ಓಲೈಸುವುದೂ, ಕೆಲವು ಸಂಘಟಕರು ಅಂತಹ ಅಧಿಕಾರಿಗಳ ಜುಟ್ಟು ಹಿಡಿಯುವುದೂ ಸಾಮಾನ್ಯವಾದ ಸಂಗತಿಯೇ! ಇಂತಹ ಆರೋಪ-ಆಕ್ಷೇಪಣೆಗಳು ಆಗಾಗ ಸಂಘಟನ ವಲಯಗಳಲ್ಲೇ ವ್ಯಕ್ತವಾಗುವುದುಂಟು!

ಸಾಮಾಜಿಕ ಕಳಕಳಿಯಿರುವ ಕೆಲವು ನಾಗರಿಕ ದಲಿತರು ಇನ್ನಿತರ ದಲಿತ ಸಮುದಾಯಗಳ ಮೇಲಿನ ಜವಾಬ್ದಾರಿಯನ್ನು ಹೊತ್ತು ಸಂಘಟನಾ ಶಕ್ತಿಯನ್ನು ಉಳಿಸಿ-ಬೆಳೆಸುವ ಪ್ರಾಮಾಣಿಕ ಪ್ರಯತ್ನದಲ್ಲಿ ತೊಡಗಿದ್ದಾರೆ. ಇಂಥವರಲ್ಲಿ ನಾಗರಿಕ ದಲಿತ- ಗ್ರಾಮೀಣ ದಲಿತ; ಇವನು ಎಡಗೈ-ಅವನು ಬಲಗೈ ಎಂಬಂಥ ಯಾವುದೇ ಬಗೆಯ ತರತಮ ಭಾವನೆ ಕಂಡುಬರುವುದಿಲ್ಲ. ಆದರೂ ಇತ್ತೀಚೆಗೆ ಕೆಲವು ದಲಿತ ಸಂಘಟನೆಗಳಲ್ಲಿ 'ಹೊಲೆಯ'- 'ಮಾದಿಗ' ಎಂಬ ಎರಡು ಗುಂಪುಗಳು ಕಂಡುಬರುತ್ತಿವೆ! ಈ ಅಪಾಯಕಾರೀ ಧೋರಣೆಯೇ ಕರ್ನಾಟಕ ದಲಿತ ಸಂಘರ್ಷ ಸಮಿತಿ ಇಬ್ಭಾಗವಾಗಲು ಒಂದು ಕಾರಣ ಎಂಬುದರಲ್ಲಿ ಅನುಮಾನವಿಲ್ಲ.

ಇನ್ನೂ ಕೆಲವು ನಾಗರಿಕ ದಲಿತರು 'ಬಹುಸಂಖ್ಯಾತ ಮಾದಿಗರಿಗೆ ಮೀಸಲಾತಿಯಲ್ಲಿ ವಂಚನೆಯಾಗುತ್ತಿದೆ; ಜನಸಂಖ್ಯಾಧಾರಿತ ಒಳ ಮೀಸಲಾತಿ ಜಾರಿಗೆ ಬಂದರೆ ಯಾರಿಗೂ ಅನ್ಯಾಯವಾಗುವುದಿಲ್ಲ' ಎಂಬ ಹೋರಾಟ ಆರಂಭಿಸಿದ್ದಾರೆ. ದಲಿತ ಸಂಘಟನೆಗಳ ಬೇಡಿಕೆ, ಘೋಷಣೆ ಮತ್ತಿತರ ಪ್ರತಿಭಟನಾ ನುಡಿಗಳು ನಗರಗಳ ಗೋಡೆಗಳ ಮೇಲೆ ಆಗಾಗ ರಾರಾಜಿಸುತ್ತವೆ; ಸನಾತನವಾದಿಗಳ ಹಾಗೂ ದಲಿತ ವಿರೋಧಿಗಳ ಕಣ್ಣು ಕುಕ್ಕುತ್ತವೆ. ಇದೆಲ್ಲಾ ನಾಗರಿಕ ದಲಿತನ ಸಾಮಾಜಿಕ ಕಳಕಳಿಯೂ ಹೌದು; ಚಟುವಟಿಕೆಯ ಸಂಕೇತವೂ ಹೌದು! ಗ್ರಾಮೀಣ ದಲಿತರಂತೆ ಸರಗ, ಬಲಿ, ಮಾದಿಗತನ, ವಕ್ಕಲು, ಊರ ಮುಂದಿನ ಕಸ ಗುಡಿಸುವುದು, ಹುರುಮೆ, ತಮಟೆ ಬಡಿಯುವುದು, ಸತ್ತ ದನ ಹೊತ್ತು ಚರ್ಮ ಸುಲಿದು ಮೆಟ್ಟು ಹೊಲಿಯುವುದು ಮುಂತಾದ ಅವಮಾನಕರ ಪ್ರವೃತ್ತಿಗಳನ್ನು ನಿರ್ವಹಿಸದ ನಾಗರಿಕ ದಲಿತರು ಕರಿಯಮ್ಮ, ಕಾಳಮ್ಮ, ದುರುಗಮ್ಮ, ಮಾರಮ್ಮ ಮೊದಲಾದ ಹಬ್ಬ ಪರಿಷೆಗಳನ್ನು ತಪ್ಪದೆ ಆಚರಿಸುತ್ತಾರೆ! ಇದು ಹಟ್ಟಿಯ ವ್ಯಾಪ್ತಿಗೆ ಸೀಮಿತವಾಗಿರುವುದರಿಂದ ಕುರಿ-ಕೋಳಿಗಳ ಬಲಿಯೂ ನಡೆಯಬಹುದು. ಆದರೆ ದಲಿತರ ಸಾಂಸ್ಕೃತಿಕ ಸಂಕೇತಗಳಾದ ತಮಟೆ, ಹುರುಮೆ, ಕಹಳೆ ಮೊದಲಾದವುಗಳು ಕಣ್ಮರೆಯಾಗುತ್ತಿವೆ. ನಾಗರಿಕ ದಲಿತನ ದೃಷ್ಟಿಯಲ್ಲಿ ಅವುಗಳೆಲ್ಲ ''ಕೀಳು ಜಾತಿಯ ಅವಲಕ್ಷಣಗಳು; ಅನಿಷ್ಟಗಳು!'' ಜಾನಪದ ಅಭಿಮಾನಿಗಳ ಪ್ರಕಾರ ಇದು ದಲಿತ ಕಲೆ-ಸಂಸ್ಕೃತಿಗಳು ನಶಿಸುತ್ತಿರುವುದರ ಸೂಚನೆ!

ಕೆಲವು ನಗರದ ದಲಿತರಂತೂ ತಮ್ಮ ಪೂರ್ವಿಕರ ಹಾಗೂ ಗ್ರಾಮೀಣ ದಲಿತರ ಸ್ಥಿತಿ-ಗತಿ ಸಂಸ್ಕೃತಿಯ ಬಗ್ಗೆ ಕನಸು ಮನಸಿನಲ್ಲಿಯೂ ಯೋಚಿಸುವುದಿಲ್ಲ. ಈ ಮನೋಭಾವವು ಒಂದು ಬಗೆಯ ಸಾಂಸ್ಕೃತಿಕ ಸುಧಾರಣೆ ಎನ್ನಬಹುದೆ?! ಇಂಥವರು ಪೌರಕಾರ್ಮಿಕರಿಂದಲೂ, ಚಮ್ಮಾರರಿಂದಲೂ ಬಹು ದೂರವೇ. ಸ್ವಜಾತಿಯವರೇ ಆದ ಇವರನ್ನು ಯಾವುದೇ ಸಂದರ್ಭದಲ್ಲೂ ಯಾವುದೇ ಕಾರಣಕ್ಕೂ ಸಮೀಪಿಸುವುದಿಲ್ಲ! ಸಂಪರ್ಕಿಸುವುದಿಲ್ಲ! ಗ್ರಾಮೀಣ ಪ್ರದೇಶಗಳ ದಲಿತರು ಈ ದೇಶದ ಉನ್ನತ ವರ್ಗದ ನ್ಯಾಯ ನೀತಿ ಧರ್ಮಗಳಿಗೆ ಸಿಲುಕಿ ಊರ ಮುಂದಲ ಕಸ ಗುಡಿಸಿದರೆ, ನಗರಗಳ ದಲಿತರು ಹೊಟ್ಟೆ ಪಾಡಿಗಾಗಿ ಸಫಾಯಿ ಕರ್ಮಚಾರಿಗಳಾಗಿದ್ದಾರೆ! ಈ ವೃತ್ತಿಯು ನಗರಸಭೆ-ಮುನಿಸಿಪಾಲಿಟಿಗಳು ಅಸ್ತಿತ್ವಕ್ಕೆ ಬಂದಾಗಿನಿಂದ ಆರಂಭವಾಯಿತಂತೆ. ಈ ವೃತ್ತಿಯಲ್ಲಿ ಮೀಸಲಾತಿಯ ಮಾತೇ ಇಲ್ಲ! ಯಾವುದೇ ಪೈಪೋಟಿಯೂ ಇಲ್ಲ! ಶೇಕಡ ನೂರರಷ್ಟು ಸ್ಥಾನಗಳು ದಲಿತರಿಗೇ ಮೀಸಲು! ಈ ಬಗ್ಗೆ ಯಾರೂ ಪ್ರಶ್ನಿಸಿದಂತೆ ಕಾಣುವುದಿಲ್ಲ! ಹಳ್ಳಿಯಿಂದ ದಿಳ್ಳಿಯವರೆಗೂ 'ಕೀಳು' ವೃತ್ತಿಗಳೇನಿದ್ದರೂ ದಲಿತರಿಗೇ ಮೀಸಲು! ಇದು ಗ್ರಾಮೀಣ ಹಾಗೂ ನಗರದ ದಲಿತರೆಲ್ಲರ 'ಹಣೆಬರಹ!'

ಕುಂದುಕೊರತೆಗಳ ಬಗ್ಗೆ ನಾಗರಿಕ ದಲಿತರು ಸಾಮೂಹಿಕ ದನಿ ಎತ್ತುತ್ತಾರೆ. ಸರಕಾರದ ಹಾಗೂ ಶಿಷ್ಟ ಸಮಾಜದ ಗಮನ ಸೆಳೆಯುತ್ತಾರೆ. ಇವರ ಈ ಜಾಗೃತ ಮನೋಭಾವವು ಸಮಗ್ರ ಶೋಷಿತ ಜನ ಸಮುದಾಯದ ಪರ ಎಂಬುದು ಮುಖ್ಯವಾಗುತ್ತದೆ. ಇದು ಗ್ರಾಮೀಣ ದಲಿತರಿಗೆ ಸರಿಯಾಗಿ ಅರ್ಥವಾಗದೇ ಇರಬಹುದು. ಆದರೂ ಸಮಗ್ರ ಸಮಾಜದ ಆರೋಗ್ಯಕರ ಆಶಯವನ್ನು ಹೊಂದಿರುವ ಈ ನಾಗರಿಕ ದಲಿತ ಯಾರ ಮೆಚ್ಚುಗೆಯನ್ನೂ ಯಾವುದೇ ಪ್ರಶಸ್ತಿಯನ್ನೂ ನಿರೀಕ್ಷಿಸುವುದಿಲ್ಲ. ಹೀಗೆಯೇ ರಾಜಕೀಯದ ಏರುಪೇರುಗಳನ್ನೂ ಸಾಮಾಜಿಕ ತರತಮಗಳನ್ನೂ ಗ್ರಹಿಸಿ, ಸೂಕ್ತವಾದ ರೀತಿಯಲ್ಲಿ ಸಂಘಟನಾತ್ಮಕ ಹೋರಾಟ ನಡೆಸುವ ಸಂಸ್ಕಾರ ಸಿದ್ಧಿಸಿರುವುದು ನಾಗರಿಕತೆಯ ವೈಶಾಲ್ಯದಿಂದಲೇ ಎನ್ನಬಹುದು. ಇದರೊಂದಿಗೆ ಮೇಲುಸ್ತರದ ಮಾಧ್ಯಮಗಳ ಲಭ್ಯತೆ- ನೆರೆಹೊರೆಯ ಪ್ರಜ್ಞಾಪೂರ್ವಕ ವಿಚಾರಗಳೂ ಪೂರಕ ಅಂಶಗಳೇ!

ನವಸಾಕ್ಷರಿಯಾದ ಇಪ್ಪತ್ತೊಂದನೇ ಶತಮಾನದ ನಾಗರಿಕ ದಲಿತನು ಇತಿಹಾಸ-ಸಮಾಜದ ಸ್ವರೂಪಗಳನ್ನು ಗ್ರಹಿಸಿರುವುದರಿಂದ ವರ್ತಮಾನದಲ್ಲಿ ನೆಟ್ಟಗೆ ನಿಂತು, ಭೂತ ಭವಿಷ್ಯತ್ತುಗಳ ಬ್ಯಾಲೆನ್ಸ್ ಮಾಡುತ್ತಿದ್ದಾನೆ. ಒಮ್ಮೆಗೇ ಮೇಲು ಜಾತಿಯ ಪ್ರತಿಸ್ಪರ್ಧಿಯಾಗಿಯೂ ಸಹವರ್ತಿಯಾಗಿಯೂ ಮುನ್ನಡೆಯುವ ಸಾಮರ್ಥ್ಯವನ್ನು ಪಡೆಯಲೆತ್ನಿಸುತ್ತಿದ್ದಾನೆ. ಈ ದೇಶದ ಮುಖ್ಯ ವಾಹಿನಿಯ ಕಲೆ, ಸಾಹಿತ್ಯ, ವ್ಯಾಪಾರ-ವಹಿವಾಟು, ರಾಜಕೀಯ, ಸಮಾಜ ಮೊದಲಾದ ಕ್ಷೇತ್ರಗಳನ್ನೂ ಅರ್ಥೈಸಿಕೊಳ್ಳಲೆತ್ನಿಸುತ್ತಾನೆ. ಸನಾತನ ಧರ್ಮ- ಪುರೋಹಿತಶಾಹಿಯ ಕ್ರೌರ್ಯ-ನಯ ವಂಚನೆಗಳನ್ನು ಯಾವತ್ತೋ ತುಚ್ಛೀಕರಿಸಿದ್ದಾನೆ. ಹಾಗೆಯೇ 'ಮನು' ಮನಸ್ಸುಗಳ ಮಧ್ಯೆ ತನ್ನದೇ ಆದ ಬದುಕನ್ನು ರೂಪಿಸಿಕೊಳ್ಳುತ್ತಿದ್ದಾನೆ.

ಅದೇ ಗ್ರಾಮೀಣ ದಲಿತ ಈಗಲೂ ಕೂಡ ಭೌತಿಕವಾಗಿ ತಲೆಯೆತ್ತಿ ನಡೆಯುತ್ತಿಲ್ಲ. ದನಿ ಎತ್ತಿ ನುಡಿಯುತ್ತಿಲ್ಲ. ಏಕೆಂದರೆ ಅವನದು ಸೀಮಿತವಾದ ಪ್ರಪಂಚ. ಇಂತಹ ವಿಷಯದಲ್ಲಿ ನಾಗರಿಕ ದಲಿತ ಮಾತ್ರ ಸ್ವಲ್ಪ ಮುಂದಿದ್ದಾನೆ ಎನ್ನಬಹುದು. ನಗರದ ಲಕ್ಷಣಗಳಿಂದಾಗಿ ಗುಂಪಿನಲ್ಲಿ ಗೋವಿಂದ ಎಂಬಂತೆ ಹೇಗೋ ಬದುಕುತ್ತಿದ್ದಾನೆ. ಆದರೂ ಶಿಷ್ಟ ಸಮಾಜವು ಇವನನ್ನು ಅಡುಗೆಯ ಮನೆಯವರೆಗೂ ಇನ್ನೂ ಕರೆದು ಸತ್ಕರಿಸುವುದಿಲ್ಲ. ಸ್ವಜಾತಿಯ ವ್ಯಕ್ತಿಯಂತೆ ಮನಃಪೂರ್ವಕ ಗೌರವ ನೀಡುವುದಿಲ್ಲ. ನಗರದ ಸಮಾನತೆ ಎಂಬುದು ಹೋಟಲಿನ ಕುರ್ಚಿ, ಮೇಜುಗಳಿಗೆ, ಟಿಕೆಟ್ ಪಡೆಯುವ ಸಾರ್ವಜನಿಕ ಸ್ಥಳಗಳಿಗೆ ಮಾತ್ರ ಸೀಮಿತ! ಇಷ್ಟನ್ನೇ ಸಹಿಸಲಾಗದ ಕೆಲವು ಮನಸುಗಳು 'ಕಾಲ ಕೆಟ್ಟು ಹೋಯ್ತು' ಎಂದೆಲ್ಲಾ ಬಡಬಡಿಸುತ್ತವೆ.

ಹೀಗಾಗಿ ವೈಚಾರಿಕತೆ, ವೈಜ್ಞಾನಿಕತೆ, ನಾಗರಿಕತೆಗಳು ಎಷ್ಟೇ ಬೆಳೆದರೂ ಜಾತೀಯತೆ ಎಂಬ ಅನಾಗರಿಕತೆ ಮಾತ್ರ ಅಳಿಯುತ್ತಿಲ್ಲ! ಈ ದೇಶದ ನಾಗರಿಕತೆಯು ಅನಾಗರಿಕತೆಯ ತಳಹದಿಯ ಮೇಲೆ ಬೆಳೆಯುತ್ತಿದೆಯೇನೋ ಎಂಬ ಅನುಮಾನ ಮೂಡುತ್ತದೆ. ಮೇಲು ನೋಟಕ್ಕೆ ಸುರಕ್ಷಿತನಂತೆ ಕಾಣುವ ನಾಗರಿಕ ದಲಿತನ ಬದುಕು ಗ್ರಾಮೀಣ ದಲಿತನ ಅಮಾಯಕ ಸ್ಥಿತಿಗಿಂತ ವಾಸ್ತವದಲ್ಲಿ ಉತ್ತಮ ಎಂದೇನೂ ಅನ್ನಿಸುವುದಿಲ್ಲ ಎನಬಹುದೇ?

**ಎಸ್. ಆರ್. ಗುರುನಾಥ**
೨ನೇ ತಿರುವು, ದರ್ಜಿ ಕಾಲೋನಿ, ಗೋಪಾಲಪುರ ರಸ್ತೆ
ಚಿತ್ರದುರ್ಗ-೫೭೭ ೫೦೧



# ಮದ್ಯಪಾನ ಒಂದು ವಿಚಾರ

**ಮ**ದ್ಯವನ್ನು ಎರಡು ಕಾರಣದಿಂದ ಸೇವಿಸುವುದು ಕಂಡುಬಂದಿದೆ. ಸೌಖ್ಯದಿಂದಿದ್ದ ಕೆಲವರು ಮೋಜಿನಿಂದ ಸೇವಿಸಿದರೆ, ಕೆಲವರು ದುಃಖ ಮರೆಯಲು ಬೇಸರಿಕೆಯಿಂದ ಮದ್ಯಪಾನಿಗಳಾಗುತ್ತಾರೆ. ಹಿಂದಿನ ಕಾಲದಲ್ಲಿ ಸೋಮರಸವೆಂಬ ಮದ್ಯವನ್ನು ಕುಡಿಯುತ್ತಿದ್ದರು. ರಾಜರು ಸಂತೋಷದಿಂದ ಔತಣಕೂಟದಲ್ಲಿ ಹಾಗೂ ಮೋಜಿನಲ್ಲಿ ಸೇವಿಸಿದರೆ, ಚಾಂಡಾಲರು ಕುಡಿದು ಕ್ರೌರ್ಯವನ್ನು ಮೆರೆದರು. ಈಗ ಮೈಮುರಿದು ದುಡಿಯುವವರು ಆಯಾಸದಿಂದ ಮುಕ್ತರಾಗಲು ಮದ್ಯಕ್ಕೆ ಶರಣಾಗುತ್ತಾರೆ. ಮದ್ಯಪಾನದಿಂದ ಸಂಸಾರವನ್ನು ಹಾಗೂ ಆಸ್ತಿ-ಪಾಸ್ತಿಗಳನ್ನು ಹಾಳು ಮಾಡಿಕೊಂಡು ಭಿಕಾರಿಗಳಾದವರೂ ಇದ್ದಾರೆ. ಪ್ರಾಣಕ್ಕೆ ಎರವಾದವರೂ ಬಹಳ ಜನ. ಇತ್ತೀಚೆಗೆ ಕೆಲ ವರ್ಷಗಳ ಹಿಂದೆ ಕುಡಿದವರಿಗೆ ಪ್ರತಿಷ್ಠಿತರು ತಂಬಿಗೆಯಲ್ಲಿ ನೀರು ಕೊಡುತ್ತಿರಲಿಲ್ಲ. ಹೆಂಡದ ಅಂಗಡಿಗಳು ಊರು ಬಿಟ್ಟು ಬಹುದೂರವಿರುತ್ತಿದ್ದವು. ಆದರೆ ಈಗ ಕುಡಿತವು ಪ್ರತಿಷ್ಠಿತರ ಚಟವಾಗಿ ಪರಿಣಮಿಸಿದೆ.

ಮದ್ಯ ಸೇವನೆಯನ್ನು ಕ್ರಮವರಿತು ಔಷಧಿ ಪ್ರಯೋಗ ಮಾಡಿದರೆ ಅದು ಅಮೃತವೆ. ಆದ್ದರಿಂದಲೇ ಬಾಣಂತಿಯರಿಗೆ ಅತೀ ಹಗುರವಾದ ಪ್ರಮಾಣದಲ್ಲಿ ಮದ್ಯ ಸೇವನೆಯನ್ನು ಈಗಲೂ ಮಾಡಿಸುತ್ತಾರೆ. ತಿಳುವಳಿಕೆಯಿಲ್ಲದೆ ಅಮಿತವಾಗಿ ಮದ್ಯವನ್ನು ಸೇವಿಸಿದರೆ ವಿಷಪ್ರಾಶನ ಮಾಡಿದಂತೆಯೇ ಸರಿ. ಸಮಯಕ್ಕೆ ಸರಿಯಾಗಿ ಯೋಗ್ಯ ಪ್ರಮಾಣದಲ್ಲಿ ಯಾವನು ಆಹಾರ ಸೇವಿಸುವನೋ ಆ ಭೋಜನವು ಅಮೃತಪಾನವಾಗುವುದು. ಅದೇ ಅನ್ನವನ್ನು ಅಕಾಲದಲ್ಲಿ ದೇಹಧರ್ಮವರಿಯದೇ ಮನಸ್ಸಿಗೆ ಸೇವಿಸಿದರೆ ಅನೇಕ ರೋಗಗಳುತ್ಪನ್ನವಾಗುವುವು.

ಸಮಯವರಿತು, ಕ್ರಮವರಿತು, ಮದ್ಯ ಸೇವಿಸಿದರೆ ಫಲ. ರಾತ್ರಿ ಒಂದು ಪ್ರಹರವಾದ ನಂತರ, ಭೋಜನಕ್ಕೆ ಪೂರ್ವ ಮಿತ ಪ್ರಮಾಣ ಮದ್ಯವನ್ನು ಸೇವಿಸಿ ಉತ್ತಮಾಹಾರ, ಪೌಷ್ಟಿಕ ಆಹಾರ ನಿಷೇವಣೆ ಮಾಡಲು ಆ ಮದ್ಯವು ಅಮೃತೋಪಾದಿಯಲ್ಲಿ ಗುಣಕಾರಿಯಾಗಿ ಕೆಲಸ ಮಾಡುತ್ತದೆ. ಕ್ಷುಧೆಯನ್ನು ಅತಿಶಯವಾಗಿ ಉಂಟುಮಾಡುವುದು ಮತ್ತು ರೋಗವು ಹತ್ತಿರಕ್ಕೆ ಬಾರದಂತೆ ಕಾಪಾಡುವುದು. ಪ್ರಸನ್ನಚಿತ್ತನಾಗಿ ಹೀಗೆ ಮಿತವಾಗಿ ಸೇವಿಸುವುದರಿಂದ ಮದ್ಯವು ಏನೇನು ಉತ್ತಮ ಗುಣಗಳನ್ನು ಉಂಟುಮಾಡುವುದೆಂದು ಆಯುರ್ವೇದದಲ್ಲಿ ಹೇಳಲಾಗಿದೆ. ಆ ಗುಣಗಳು ಯಾವುವೆಂದರೆ,

''ಮದ್ಯಂ ಸಾಧಾರಣಂ ಸೂಕ್ಷ್ಮಂ ಸಾರಕಂ ದಾಹಕಂ ಲಘು ॥
ಸುಸ್ವಾದುತಿಕ್ತಂ ಚ ರಸೇ ಪಾಕೇಽಽಮ್ಲಂ ಚ ಲಘುಸ್ಸ್ರುತಮ್ ॥
ಅಗ್ನಿ ದೀಪ್ತಿಕರಂ ರುಚ್ಯಂ ಹೃದ್ಯಂ ಚೋಷ್ಣಂ ಕಷಾಯಕಮ್ ॥
ತೀಕ್ಷ್ಣಂ ವಿಕಾಸಿ ಚ ಮತಂ ಮೂತ್ರಲಂ ತುಷ್ಟಿಕೃನ್ಮತಮ್ ॥
ಮಲೋತ್ಸರ್ಗಕರಂ ನಾಡೀ ವಸ್ತಿ ಶುದ್ಧಿ ಕರಂ ಮತಮ್॥

ಇತ್ಯಾದಿ.

**ಅರ್ಥ :**

ಸಾಧಾರಣವಾಗಿ ಮದ್ಯವು ಸೂಕ್ಷ್ಮವಾದದ್ದು, ಸ್ವಲ್ಪ ಸ್ವಲ್ಪ ಭೇದಿಕಾರಕ, ದಾಹಜನಕ, ಕಟು ಸ್ವಾದಿಷ್ಟ, ಕಹಿ, ರಸದಲ್ಲಿಯೂ ಪಾಕದಲ್ಲಿಯೂ ಹುಳಿ, ಲಘು, ಅಗ್ನಿ ದೀಪನಕಾರಿ, ರುಚಿಕಾರಕ, ಹೃದಯಕ್ಕೆ ಹಿತಕಾರಿ, ಉಷ್ಣ ಒಗರು, ತೀಕ್ಷ್ಣ, ವಿಕಾಸಿ ಮೂತ್ರಜನಕ, ತುಷ್ಟಿಪ್ರದ ಬಲವರ್ಧಕ, ಪುಷ್ಟಿಕಾರಕ, ಸ್ವರವನ್ನು ಶುದ್ಧಿಗೊಳಿಸುವುದು, ಪ್ರಭೆಯನ್ನು ಉತ್ಪತ್ತಿ ಮಾಡುವುದು, ಆರೋಗ್ಯವನ್ನುಂಟು ಮಾಡುವುದು, ವರ್ಣವನ್ನು ಸುಂದರಗೊಳಿಸುವುದು, ಆದರೂ ರಕ್ತವನ್ನು ದೂಷಿತವನ್ನಾಗಿ ಮಾಡುವುದು. ಅನಾಹ, ಕಫ, ವಾತ, ಶೂಲನಾಶಕವಾದದ್ದು, ವಿಷದಿಂದ ವಿಹ್ವಲನಾದವನಿಗೂ, ಶೋಕ ತಪ್ತನಿಗೂ, ಮಂದಾಗ್ನಿಯುಳ್ಳವನಿಗೂ ಹಿತಕಾರಕವಾದದ್ದು.

ಮದ್ಯವನ್ನು ಔಷಧಿ ಪ್ರಯೋಗದಿಂದ, ರೋಗನಾಶಕಾರ್ಥವಾಗಿ, ಮಾತ್ರಾನುಸಾರವಾಗಿ ಯಾವಾಗಲಾದರೂ ಸೇವಿಸಿದರೆ ಕೇಡೇನೂ ಆಗಲಾರದು. ಅದನ್ನು ಬಿಟ್ಟು ದಿನಂಪ್ರತಿ ಇದನ್ನೇ ಕುಡಿಯಲು ಅಪೇಕ್ಷಿಸುವವನಲ್ಲಿ ದುಷ್ಟ ಸ್ವಭಾವವೂ, ಹೆಚ್ಚು ಹೆಚ್ಚು ಸೇವಿಸಬೇಕೆಂಬ ದುರ್ಗುಣವೂ ಹೆಚ್ಚಿ ಅವನ ಸರ್ವಸ್ವವನ್ನೂ ನಾಶಗೊಳಿಸುವುದಲ್ಲದೆ ಸಿಕ್ಕಿದ ಹಾಗೆ ಹರಟುವಿಕೆ, ಸ್ಮರಣಶಕ್ತಿ ನಷ್ಟವಾಗುವಿಕೆ, ಧ್ವನಿ ಮತ್ತು ಶರೀರದ ಚೇಷ್ಟೆಗಳು, ವಿಕ್ಷಿಪ್ತನಂತೆ ಯದ್ವಾ ತದ್ವಾ ಆಗುವಿಕೆ, ಅಶ್ಲೀಲ ಬೈಗುಳವನ್ನು ಬೊಗಳುವಿಕೆ, ಪ್ರಾಣಿಗಳಂತೆ ಎಲ್ಲಿಯಾದರು ಜೋಲಿ ಹೊಡೆಯುತ್ತಾ ಅಡ್ಡಾಡುವಿಕೆ, ಹಂದಿಯಂತೆ ಗಟಾರದಲ್ಲಿ ಕೂಡ ತಿರುಗುವಿಕೆ ಅಥವಾ ಬಿದ್ದಿರುವಿಕೆ, ಬಟ್ಟೆಗಳ ಮೇಲೆ ಲಕ್ಷ್ಯವಿಲ್ಲದೆ ಅಸ್ತವ್ಯಸ್ತವಾಗಿ ಮರ್ಯಾದೆ ಕೆಟ್ಟು ವರ್ತಿಸುವುದು, ಹಿರಿಯರಿಗೆ, ವೃದ್ಧರಿಗೆ ಗೌರವ ಕೊಡದೆ ವರ್ತಿಸುವಿಕೆ, ಮನಸ್ಸಿಗೆ ಕುಣಿಯುವಿಕೆ, ಅಭಕ್ಷ್ಯ ಭೋಜನ ಮಾಡುವಿಕೆ, ಸಂಜ್ಞಾಹೀನ ಹಾಗೂ ಪ್ರಜ್ಞಾಹೀನನಾಗುವಿಕೆ, ರಹಸ್ಯ ವಿಷಯಗಳನ್ನು ಬುದ್ಧಿ ಇಲ್ಲದಿದ್ದರಿಂದ ಪ್ರಕಟಪಡಿಸುವಿಕೆ ಮುಂತಾದ ಬುದ್ಧಿ ಭ್ರಂಶಕ ಚಟುವಟಿಕೆಗಳಿಂದ ಮದ್ಯವು ಸತ್ಪುರುಷ ಸಮಾಜಕ್ಕೆ ಅನರ್ಹವಾದದ್ದೆಂದು ತಿರಸ್ಕರಿಸಲ್ಪಟ್ಟಿದೆ.

ಭೋಜನ ಮಾಡದಿರುವ ಕಾಲದಲ್ಲಿ ಸೇವಿಸುವಿಕೆ, ಯಾವತ್ತೂ ಸೇವಿಸಿಯೇ ಇರುವುದು ಹಾಗೂ ಆಗಾಗ್ಗೆ ಸೇವಿಸುತ್ತಿರುವವ ಕ್ರೋಧ ಹೃದಯದವನಾಗಿಯೂ ಮಲ ಮೂತ್ರಾಧಿವೇಗಯುಕ್ತನೂ ಆಗಿರುತ್ತಾನೆ. ಬಹು ಹುಳಿ ಪದಾರ್ಥದೊಡನೆ ಸೇವಿಸುವಿಕೆ, ನಿರ್ಬಲನಾದರೂ ಕುಡಿಯುವಿಕೆ, ಯಾವನಾದರೂ ಉಷ್ಣ ವಿಕಾರಯುಕ್ತನಾಗಿ ಮದ್ಯಪಾನ ಮಾಡುವಿಕೆ ಇಂಥ ಅತ್ಯಾಚಾರಗಳಿಂದ ಮದ್ಯಪಾನ ಮಾಡಬಾರದು. ಹಾಗೇನಾದರೂ ಮಾಡಿದರೆ ಮಹದನರ್ಥ ಉಂಟಾಗುವುದು.

**ಡಾ॥ ಅಶೋಕ ಆಯ್. ಕಲಾಲ**
ಶ್ರೀ ಅಗಸ್ತ್ಯ ಆಯುರ್ವೇದ ಚಿಕಿತ್ಸಾಲಯ
ನವಿಪೇಠ, ರಾಮದುರ್ಗ - ೫೯೧ ೧೨೩



# ವೈಜ್ಞಾನಿಕ ಚಿಂತನೆಯ ಪ್ರಸ್ತುತತೆ

ಜಿ. ಟಿ. ನಾರಾಯಣರಾವ್

**ಸೃಷ್ಟಿಯಲ್ಲಿ ಮಾನವನ ಸ್ಥಾನ**

ಇತರ ಯಾವ ಪ್ರಾಣಿಗೂ ಇರದ ನಾಲ್ಕು ಪರಸ್ಪರ ಸಂಬಂಧಿತ ಸೌಕರ್ಯಗಳು ಮಾನವನಿಗೆ ಜನ್ಮತಃ ಪ್ರಾಪ್ತವಾಗಿವೆ: ಸ್ಮರಣೆ, ಚಿಂತನೆ, ವರ್ತನೆ ಮತ್ತು ಸೃಷ್ಟಿ. ಗತ ಅನುಭವಗಳ ಉಗ್ರಾಣ ಸ್ಮರಣೆ. ಇದರೊಳ ಹೊಕ್ಕು ವರ್ತಮಾನದಲ್ಲಿ ಉಪಯುಕ್ತವಾಗುವ ದ್ರವ್ಯವನ್ನು ಹೆಕ್ಕುವುದು ಚಿಂತನೆ. ಇದನ್ನು ಮಾತಿನ ಮತ್ತು ಅಭಿನಯದ ಮೂಲಕ ಅಭಿವ್ಯಕ್ತಿಸುವುದು ವರ್ತನೆ. ಹೊಸ ಸಲಕರಣೆ ಮುಂತಾದವನ್ನು ತಯಾರಿಸುವುದು ಸೃಷ್ಟಿ. ಆದ್ದರಿಂದಲೇ ಸೃಷ್ಟಿಯಲ್ಲಿ ಮಾನವನ ಸ್ಥಾನ ಏಕೈಕ ಎನ್ನುತ್ತೇವೆ – ಶ್ರೇಷ್ಠ ಮಧ್ಯಮ, ಕನಿಷ್ಠ ಮುಂತಾಗಿ, ಮಾನವನನ್ನೂ ಒಳಗೊಂಡಂತೆ, ಯಾವ ಜೀವಿಯನ್ನೂ ವರ್ಗೀಕರಿಸಲಾಗದು.

ನಮ್ಮ ದೈನಂದಿನ ಸಮಸ್ತ ಕ್ರಿಯಾ ಕಲಾಪಗಳಲ್ಲಿಯೂ ಈ ನಾಲ್ಕು ಸೌಕರ್ಯಗಳೂ ಯಥೋಚಿತವಾಗಿ ಸಹಸ್ಪಂದಿಸುತ್ತಿರುವುವು. ಅವುಗಳಲ್ಲಿ ಸಹಸ್ಪಂದನವಿರದಾಗ, ಅಂದರೆ ಅವುಗಳ ನಡುವೆ ಸಾಮರಸ್ಯವೇರ್ಪಡದಾಗ, ವ್ಯಕ್ತಿ ಅಪಸಾಮಾನ್ಯ (abnormal) ಎನಿಸುತ್ತಾನೆ. ನಾವು ಅಪಸಾಮಾನ್ಯರಾಗದೇ ಸಾಮಾನ್ಯರೇ ಆಗಿದ್ದು ನಮ್ಮ ನಮ್ಮ ಆಸಕ್ತಿಗಳ ಅನುಶೀಲನೆಯಲ್ಲಿ ಮಗ್ನರಾಗಿರಬೇಕಾದರೆ ನಮ್ಮೊಳಗೆ ಮೂರು ಪ್ರಜ್ಞೆಗಳು ಏಕತಾನದಲ್ಲಿರಬೇಕು: ಮಾನವೀಯತೆ (humanism), ನೈತಿಕತೆ (ethics) ಮತ್ತು ವೈಚಾರಿಕತೆ (rationalism).

ಮಾನವೀಯತೆ ಎಂದರೆ ಹೃದಯ ಸಂಪನ್ನತೆ – ಸಮಸ್ತ ಜೀವಿ, ಅಜೀವಿಗಳ ಬಗೆಗೆ ''ಇಳೆ ನಿಮ್ಮ ದಾನವಯ್ಯಾ'' ಎಂಬ ನಿವೇದನ ಭಾವ.

ಸರ್ವೇಜನಾಸ್ಸುಖಿನೋ ಭವಂತು, ಮತ್ತು ವಸುಧೈವ ಕುಟುಂಬಕಂ ಎಂಬ ಒರೆಗಲ್ಲುಗಳಲ್ಲಿ ಪುತ್ಥಳಿ (ಶುದ್ಧ ಚಿನ್ನ) ಎನಿಸಿಕೊಳ್ಳದ ಯಾವ ನಡವಳಿಕೆಯೂ ನೈತಿಕವಾಗಿ ಸಾಧುವಾಗದು – ''ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯ ನೀನು !''

ಪ್ರತಿಯೊಂದು 'ಕಾರ್ಯ'ದ ತಳದಲ್ಲಿ ಒಂದು 'ಕಾರಣ'ವೂ ಮತ್ತು ಪ್ರತಿಯೊಂದು 'ಕಾರಣ'ದ ಫಲವಾಗಿ ಒಂದು 'ಕಾರ್ಯ'ವೂ ಉಂಟೆಂಬ ಅರಿವೇ ವೈಚಾರಿಕತೆ. ಕಾರಣ ರಹಿತ ಕಾರ್ಯವಾಗಲೀ ಕಾರ್ಯ ವಿರತ ಕಾರಣವಾಗಲೀ ಇಲ್ಲ, ವಿಶ್ವವ್ಯಾಪಾರಗಳೆಲ್ಲವೂ ಕಾರ್ಯಕಾರಣ ಬಂಧಿತವಾಗಿವೆ.

'ಮಾನವೀಯತೆ'ಯ ಪರ್ಯಾಯ ಪದ 'ಪ್ರೀತಿ', ಅಂತೆಯೇ 'ನೈತಿಕತೆ'ಯದು 'ನೀತಿ'. ಪ್ರೀತಿ ಸೇಚಿತ ನೀತಿ ಮತ್ತು ನೀತಿ ನಿಯಂತ್ರಿತ ಪ್ರೀತಿಯೇ ಋಜು ಜೀವನದ ಸೆಲೆ, ಸ್ವಾಸ್ಥ್ಯದ ಸೆಲೆ. ಪ್ರೀತಿರಹಿತ ನೀತಿಗೆ ಗೌತಮ ಋಷಿಯೂ ನೀತಿರಹಿತ ಪ್ರೀತಿಗೆ ಧೃತರಾಷ್ಟ್ರನೂ ನಿದರ್ಶನರು. ಯಾವುದೇ ಅವೈಚಾರಿಕ ವರ್ತನೆಯಲ್ಲಿ – ಪಕ್ಷಪಾತ, ದ್ವೇಷ, ಅಸೂಯೆ ಮುಂತಾದವುಗಳ ಪ್ರದರ್ಶನ – ಪ್ರೀತಿ ನೀತಿಗಳ ಬಂಧ ಛೇದಿತವಾಗಿರುವುದು ಎದ್ದುಕಾಣುತ್ತದೆ.

**ವಿಜ್ಞಾನದ ಉಗಮ**

ಮಾನವಮತಿ ವೈಚಾರಿಕವಾಗಿ ನಿಸರ್ಗದ ಜೊತೆ ವರ್ತಿಸುವಾಗ ನೈಸರ್ಗಿಕ ವಿದ್ಯಮಾನಗಳನ್ನು ಕುರಿತು ಲಭಿಸುವ ಒಳನೋಟವೇ ವಿಜ್ಞಾನ. ಆದ್ದರಿಂದ ವಿಜ್ಞಾನವೂ ಮಾನವನಷ್ಟೇ ಪ್ರಾಚೀನ. ಗಾಳಿಯ ಬೀಸಿಗೆ ದಟ್ಟ ಬಿದಿರುಗಳು ತೀವ್ರವಾಗಿ ಉಜ್ಜಿಕೊಂಡು ಶಾಖ ಹುಟ್ಟಿ ಕಿಡಿ ರಟ್ಟಿ ಬೆಂಕಿ ಭುಗಿಲೆದ್ದದ್ದನ್ನು ಕಂಡ ಆದಿ ಮಾನವ ತನ್ನ ಎರಡು ಅಂಗೈಗಳನ್ನೂ ಅಮುಕಿ ತಿಕ್ಕಿದ – ಸಾಕಷ್ಟು ರಭಸವಾಗಿಯೇ. ಶಾಖೋತ್ಪತ್ತಿಯಾದ ಅನುಭವ. ಆಗ ಒಂದು ತತ್ತ್ವ ತಿಳಿಯಿತು. ಘರ್ಷಣೆಯಿಂದ ಶಾಖ. ಎರಡು ಬೆಣಚು ಕಲ್ಲುಗಳನ್ನು ಘರ್ಷಿಸಿದಾಗ ಇನ್ನೊಂದು ಸಂಗತಿ ಗೊತ್ತಾಯಿತು: ಶಾಖದಿಂದ ಬೆಂಕಿ. ಇನ್ನೊಂದು ಸೂತ್ರವೂ ಅರಿವಿಗೆ ಬಂದಿತು: ಕಾರ್ಯ-ಕಾರಣ ಸಂಬಂಧ. ಸಕಲ ನೈಸರ್ಗಿಕ ವಿದ್ಯಮಾನಗಳೂ ಕಾರ್ಯ-ಕಾರಣ ಬಂಧಿತವಾಗಿವೆ ಎಂಬ ಸಾರ್ವತ್ರಿಕ ನಿಯಮವೂ ವೇದ್ಯವಾಯಿತು.

ನಿಸರ್ಗದಲ್ಲಿ ಸಮೃದ್ಧವಾಗಿ ಸಿಕ್ಕುವ ಕಚ್ಚಾ ಪದಾರ್ಥಗಳಿಗೆ ವಿಜ್ಞಾನ ಲಭ್ಯ ತತ್ತ್ವ ಸೂತ್ರಗಳನ್ನು ಅನ್ವಯಿಸಿ ಜೀವನೋಪಯುಕ್ತ ಸಲಕರಣೆಗಳ ತಯಾರಿಕೆ ತೊಡಗಿದ. ಇಂಥ ಯಾದೃಚ್ಛಿಕ ಪ್ರಯೋಗ ಪರೀಕ್ಷೆಗಳಲ್ಲಿ ಸಂಗ್ರಹೀತವಾಗುವ ಒಟ್ಟರಿವಿಗೆ ತಂತ್ರವಿದ್ಯೆ ಎಂದು ಹೆಸರು. ಇದು ವಿಜ್ಞಾನದ ಶಿಶು. ಇನ್ನು, ತಂತ್ರವಿದ್ಯೆಯ ಮೂಲಕ ಲಭಿಸುವ ಇನ್ನಷ್ಟು ಒಳನೋಟ ಹೊಸ ವಿಜ್ಞಾನ. ಈಗ, ಬದುಕು ಜಟಕಾ ಬಂಡಿಯ ನಿರಂತರ ಪಯಣವನ್ನು ರೂಪಕ ಭಾಷೆಯಲ್ಲಿ ಹೀಗೆ ವರ್ಣಿಸಬಹುದು: ವಿಜ್ಞಾನ, ತಂತ್ರವಿದ್ಯೆ ಅದರ ಎರಡು ಗಾಲಿಗಳು, ಅದನ್ನ ಎಳೆಯುವ ಕುದುರೆ ಸಮಗ್ರ ಮನುಕುಲ, ಅದರೊಳಗೆ ಆಸೀನನಾಗಿರುವ ಸವಾರ ನಾಗರಿಕತೆ. ಹಾಗಾದರೆ ಪಥ ?

*ದಾರಿಗಾ ! ಪಥ ದತ್ತವಾಗಿಲ್ಲ ! ನೀ ನಡೆದು*
*ತೋರು ನವ ದೃಶ್ಯವನು, ಎಲ್ಲಿಯೂ ತಂಗದಿರು*
*ಯಾರಿಗೂ ಬಾಗದಿರು, ಬದ್ಧನಾಗಿರು ಋತಕೆ*
*ಹಾರಲಾಗದ ಕಮರಿಯೇ ಇರದು ಅತ್ರಿಸೂನು*

**ವಿಜ್ಞಾನ ಆದ್ಯುಕ್ತಿಗಳು**

ವಿಜ್ಞಾನದ ಸಮಸ್ತ ಪ್ರಕ್ರಿಯೆಗಳ ತಳದಲ್ಲಿ ಮೂರು ಆದ್ಯುಕ್ತಿಗಳು (axioms) ಅನುರಣಿಸುತ್ತಿರುವುವು. ಎಂದೂ ಎಲ್ಲಿಯೂ ಸುಳ್ಳಾಗದ, ಎಲ್ಲರಿಗೂ ಎಲ್ಲ ದೇಶ ಕಾಲಗಳಲ್ಲಿಯೂ ಅನುಭವವೇದ್ಯವಾಗುವ, ಆದರೆ ಯಾರಿಂದಲೂ ಸಾಧಿಸಲಾಗದ ಅನುಭವ ಜನ್ಯ ಸೂಕ್ತಿಗಳಿವು:

೧. ನಿಸರ್ಗದಲ್ಲಿ ಕ್ರಮ (order) ಇದೆ.

೨. ಮಾನವಮತಿಗೆ ಇದನ್ನು ಗುರುತಿಸಿ, ಗ್ರಹಿಸಿ, ಅರ್ಥವಿಸಿ ಸಂವಹನಿಸುವ ಸಾಮರ್ಥ್ಯವಿದೆ.

೩. ''ದೇವರು ನವುರು (subtle). ಎಂದೂ ಕುಹಕಿ (malicious) ಅಲ್ಲ.''

ಈ ಮೂರನೆಯದು ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) ಅವರ ಸುಪ್ರಸಿದ್ಧ ಸೂಕ್ತಿ. ಇಲ್ಲಿ 'ದೇವರು' ಪದ ನಿಸರ್ಗವನ್ನು ಪ್ರತೀಕಿಸುತ್ತದೆ. ನಿಸರ್ಗದ ಆಂತರಿಕ ಸಂರಚನೆ ಮತ್ತು ಬಾಹ್ಯ ವರ್ತನೆ ಗೂಢಾದ್ಗೂಢತರ ನಿಜ. ಆದರೆ ಅವು ಮಾನವನನ್ನು ಪೀಡಿಸಲು, ಸೋಲಿಸಲು ಅಥವಾ ಅನುಗ್ರಹಿಸಲು ರೂಪಿತವಾದವಲ್ಲ. ಅರ್ಥಾತ್, ನಿಸರ್ಗಕ್ಕೆ ಮನವಿಲ್ಲ, ಮರುಕವೂ ಇಲ್ಲ. ಮಾನವ ಸ್ವಪ್ರಯತ್ನದಿಂದ ಅದರ ಭಾಷೆ, ವ್ಯಾಕರಣ, ಸೂತ್ರ ಮುಂತಾದವನ್ನು ಯಥಾಮತಿ ಯಥಾಶಕ್ತಿ ಗ್ರಹಿಸಬೇಕೇ ವಿನಾ ವರ ಅಥವಾ ದಾನವಾಗಿ ಅವನ್ನ ಪಡೆಯಲು ಹವಣಿಸುವುದಲ್ಲ. ''ಅವರವರ ದರುಶನಕೆ, ಅವರವರ ವೇಷದಲಿ'' ಎಂಬ ಅನುಭಾವೋಕ್ತಿ ಸ್ಫುರಿಸುವುದು ಇದೇ ಅರ್ಥವನ್ನು.

**ವೈಜ್ಞಾನಿಕ ವಿಧಾನ**

ಇಷ್ಟು ಪೂರ್ವಸಿದ್ಧತೆ ಮಾಡಿಕೊಂಡು ನಾವೀಗ ನಿಸರ್ಗದ ವಿವಿಧ ವಿದ್ಯಮಾನಗಳನ್ನು ಬೆರಗು ಕಂಗಳಿಂದ ಮತ್ತು ಚಿಕಿತ್ಸಕ ದೃಷ್ಟಿಯಿಂದ ಗಮನಿಸುತ್ತಿದ್ದೇವೆ. ತೀರ ಸಾಧಾರಣವಾದ ಮೂರು ದೈನಂದಿನ ಅನುಭವಗಳತ್ತ ಲಕ್ಷ್ಯ ಹರಿಸೋಣ :

೧. ಸೂರ್ಯ, ಚಂದ್ರ, ಗ್ರಹ, ತಾರೆಗಳ ಚಲನೆ ಸದಾ ಪೂರ್ವ - ಪಶ್ಚಿಮ ದಿಶೆಯಲ್ಲಿಯೇ ಸಂಭವಿಸುವುದೇಕೆ ?

೨. ತೆಂಗಿನ ಮರದಲ್ಲಿ ಕುಂಬಳ ಕಾಯಿ ಬೆಳೆಯುವುದಿಲ್ಲವೇಕೆ ?

೩. ಮರದಿಂದ ತೊಟ್ಟು ಕಳಚಿದ ಹಣ್ಣು ಗಗನಕ್ಕೆ ನೆಗೆಯುವುದಿಲ್ಲವೇಕೆ ?

''ಕಣ್ಣುಗಳನು ತೆರೆವರ್ಗೆ'' ಇಂಥ ಸಾವಿರಾರು ಪ್ರಶ್ನೆಗಳು ಸದಾ ಏಳುತ್ತಲೇ ಇರುವುವು. ಯಾವುದೇ ಪ್ರಶ್ನೆಗೆ ''ದೇವರ ಇಚ್ಛೆ ಹಾಗಿದೆ,'' ಅಥವಾ ''ನನಗೆ ಗೊತ್ತಿಲ್ಲ,'' ಅಥವಾ ''ನನಗೆ ತಿಳಿಯುವ ಕುತೂಹಲವಿಲ್ಲ'' ಎಂದು ಜಾರಿಕೊಳ್ಳುವವರು ಪಲಾಯನ ವಾದಿಗಳು, ಕುರುಡು ನಂಬಿಕೆಗಳ ಹಸನು ಹೊಲಗಳು, ಅಥವಾ ಭೀರುಗಳು :

*ಭೀರುಗಳು ಮಡಿಯುವರು ದಿನದಿನಂ ಭಯದಿಂದ*
*ಧೀರರು ಮಹಾಕಾರ್ಯ ಸಾಧನೆಯ ಹಾದಿಯಲಿ*
*ವೀರಮರಣವಗಳಿಸುತಮರತ್ವವೈದುವರು*
*ಧಾರಿಣಿಯನೆ ಸ್ವರ್ಗ ಮಾಡುವರು ಅತ್ರಿಸೂನು*

**ವೈಜ್ಞಾನಿಕ ವಿಧಾನದ ಹಂತಗಳು**

೧. ಕುತೂಹಲದೀಪ್ತಮತಿ ತನಗೊಪ್ಪುವ ಒಂದು ಪ್ರಶ್ನೆಯನ್ನು ನಿಸರ್ಗಕ್ಕೆ ಹಾಕುತ್ತದೆ – ಪ್ರಶ್ನಾ ನಿರೂಪಣೆ.

೨. ಈ ಪ್ರಶ್ನೆ ಕುರಿತಂತೆ ಉತ್ತರ ಹುದುಗಿರಬಹುದಾದ ಮಾಹಿತಿಗಳನ್ನು ಸಂಗ್ರಹಿಸುತ್ತದೆ – ದತ್ತಾಂಶ ಸಂಗ್ರಹಣೆ.

೩. ಸಂಗೃಹೀತ ದತ್ತಾಂಶಗಳನ್ನು ತನ್ನ ಅಧ್ಯಯನ ಸೌಕರ್ಯಾರ್ಥ ಒಂದು ಕ್ರಮದಲ್ಲಿ ಅಳವಡಿಸಿ ವಿಶ್ಲೇಷಿಸುತ್ತದೆ – ದತ್ತಾಂಶ ವಿಶ್ಲೇಷಣೆ.

೪. ''ಈ ವಿಶ್ಲೇಷಿತ ದತ್ತಾಂಶಗಳ ಒಳಗೆ ಮೂಲ ಪ್ರಶ್ನೆಯ ಉತ್ತರ ಹುದುಗಿದೆ. ಅದನ್ನ ನಾನು ಹೆಕ್ಕಿ ಹೊರ ತೆಗೆಯಬೇಕು – ಅದುರಿನ ಬೆಟ್ಟದಿಂದ ಲೋಹದ ಗಟ್ಟಿಯನ್ನು ಆಸವಿಸುವಂತೆ'' – ಇಂಥ ಏಕಾಗ್ರ ಚಿಂತನೆ ಮಾಡಬೇಕು. ಈ ಹಂತದಲ್ಲಿ ಸಂಶೋಧಕನ ಪ್ರತಿಭಾನ (intuition) ಮುಂಚೂಣಿಯಲ್ಲಿರುತ್ತದೆ. ವಾಸ್ತವವಾಗಿ ಪ್ರತಿಭಾನವೇ ಸೃಜನಶೀಲತೆಯ ಮಾತೆ. ಹನುಮಂತನಿಗೆ ರಾವಣ ಬಂಧಿತ ಸೀತೆ ಗೋಚರಿಸಿದ್ದು ಹೀಗೆ. ಈ ಪ್ರಕಾರ ಸಂಶೋಧಕ ತಾನು ಹಾಕಿಕೊಂಡಿದ್ದ ಪ್ರಶ್ನೆಗೆ ಉತ್ತರವಾಗಬಹುದಾದ ಒಂದು ವಾದವನ್ನು ರೂಪಿಸುತ್ತಾನೆ – ವಾದರೂಪಣೆ.




೫. ಮೂಲಪ್ರಶ್ನೆಗೆ ಇದು ಸಮರ್ಪಕ ಉತ್ತರವೆಂದು ಖಚಿತಪಡಿಸದಿದ್ದರೆ ಇದೊಂದು ಕುಶಲ ಊಹೆಯಾಗಿ ಮಾತ್ರ ಉಳಿಯುತ್ತದೆ. ಆದ್ದರಿಂದ ವಾದವನ್ನು ಪ್ರಯೋಗದ ನಿಕಷಕ್ಕೆ ಒಡ್ಡುವುದು ಅತ್ಯಗತ್ಯ. ಈ ನಿಕಷದಲ್ಲಿ ಚೆನ್ನಾಗದ ವಾದವನ್ನು ಅಲ್ಲಿಗೇ ಕೈಬಿಟ್ಟು ಪುನರಪಿ ಪ್ರಯತ್ನವೊಂದೇ ಹಾದಿ – ಪ್ರಾಯೋಗಿಕ ತಪಾಸಣೆ.

೬. ಪ್ರಯೋಗದ ಕಠಿಣ ಪರೀಕ್ಷೆಯಲ್ಲಿ ಉತ್ತೀರ್ಣವಾಗುವ ವಾದಕ್ಕೆ (hypothesis) ಸಿದ್ಧಾಂತ (theory) ಎಂದು ಹೆಸರು. ಇದು ಮೂಲ ಪ್ರಶ್ನೆಗೆ ಸದ್ಯ ಒಪ್ಪುವ ಪರಿಹಾರ – ಸಿದ್ಧಾಂತ ಮಂಡನೆ.

ಇವು ವೈಜ್ಞಾನಿಕ ವಿಧಾನದ ೬ ವಿವಿಕ್ತ ಹಂತಗಳು – ಮಾನವ ದೀರ್ಘಕಾಲ ವೀಕ್ಷಣೆ, ಶೋಧನೆ, ಸಂಶೋಧನೆ, ತಪಾಸಣೆಗಳಿಂದ ಕಂಡುಕೊಂಡಿರುವ ಅನ್ವೇಷಣಮಾರ್ಗ. ಜೀವನದ ಸಮಸ್ತ ಸಮಸ್ಯೆಗಳಿಗೂ ಇದನ್ನು ಯಶಸ್ವಿಯಾಗಿ ಅನ್ವಯಿಸಬಹುದು.

''ಸದ್ಯ ಒಪ್ಪುವ ಪರಿಹಾರ'' ಅಂದರೇನು ? ಭೌತ ವಿಶ್ವದಲ್ಲಿ, ಆದ್ದರಿಂದ ಮಾನವ ನಿರ್ಮಿತಗಳಲ್ಲಿ, ಶಾಶ್ವತತೆ ಎಂಬುದೇ ಇಲ್ಲ, ಎಂದೇ ಶಾಶ್ವತ ಸಿದ್ಧಾಂತಗಳೂ ಇಲ್ಲ:

*ಸಂದೇಹವಿಕೃತಿಯೊಳಿನ್ನಿಲ್ಲವೆಂದಲ್ಲ*
*ಇಂದು ನಂಬಿಹುದೆ ಮುಂದೆಂದುಮೆಂದಲ್ಲ*
*ಕುಂದು ತೋರ್ದಂದದನು ತಿದ್ದಿಕೊಳೆ ಮನಸುಂಟು*
*ಇಂದಿಗೀ ಮತವುಚಿತ ಮಂಕುತಿಮ್ಮ*

ಅಂತಿಮವಾಗಿ ಹೇಳುವುದಾದರೆ ಸಿದ್ಧಾಂತವೆಂಬುದು ಮಾನವ ಮತಿಮುಕುರದಲ್ಲಿ ನಿಸರ್ಗದ ಪ್ರತಿಬಿಂಬ. ಈ ಮುಕುರವೆಂದೂ ಪರಿಪೂರ್ಣವಾಗಿರದು. ಆದ್ದರಿಂದ ಯಾವ ಸಿದ್ಧಾಂತವೂ ಪರಿಪೂರ್ಣವಲ್ಲ. ಇನ್ನು ಮಾನವ ತನ್ನ ಧೀಶಕ್ತಿ ಪ್ರಯೋಗದಿಂದ ಪರಿಪೂರ್ಣ ಸಿದ್ಧಾಂತವೊಂದನ್ನು ರಚಿಸಿದರೆ – ಇದು ಸಾಧ್ಯ – ಆ ಸಿದ್ಧಾಂತ ನಿಸರ್ಗದ ಯಥಾ ಪ್ರತಿಬಿಂಬ ಮಾತ್ರ ಆಗಿರದು ! ''ಗಣಿತೋಕ್ತಿಗಳು ವಾಸ್ತವತೆಯನ್ನು ಪ್ರತಿನಿಧಿಸುತ್ತಿರುವ ತನಕ ಖಚಿತವಲ್ಲ, ಖಚಿತವಾಗಿರುವ ತನಕ ಪ್ರತಿನಿಧಿಸುವುದಿಲ್ಲ,'' ಎಂದಿದ್ದಾರೆ ಐನ್‌ಸ್ಟೈನ್.

**ವೈಜ್ಞಾನಿಕ ಚಿಂತನೆ**

ಸಮಸ್ಯಾಪರಿಹಾರಾರ್ಥ ವೈಜ್ಞಾನಿಕ ವಿಧಾನದಲ್ಲಿ ಮುನ್ನಡೆಯುತ್ತಿರುವಾಗ ಮನಸ್ಸಿಗೆ ಒದಗುವ ಹದಕ್ಕೆ ಅಥವಾ ಅದು ಏರಿರುವ ಸ್ಥಿತಿಗೆ ವೈಜ್ಞಾನಿಕ ಮನೋಧರ್ಮ (scientific temper) ಎಂದು ಹೆಸರು. ಭಗವದ್ಗೀತೆಯಲ್ಲಿ ಈ ಹದವನ್ನು ಸ್ಥಿತ ಪ್ರಜ್ಞೆ ಎನ್ನಲಾಗಿದೆ. ಪುತಿನ ಅನುವಾದ (೨-೫೫, ೫೬) ಗಮನಿಸಿ :

*ಬಗೆಹೊಗುವಾಸೆಗಳೆಲ್ಲವ ತೊರೆಯುತ ಆತ್ಮನಿಂದಲೇ ಆತ್ಮನೊಳು*
*ತುಷ್ಟಿಯನಾವನು ಪಡೆವನೊ ಪಾರ್ಥನೆ ! ಸ್ಥಿತಪ್ರಜ್ಞನೆಂದಾಗೆನಿಪ ॥*
*ದುಃಖಗಳೊದಗಲು ತಲ್ಲಣಗೊಳ್ಳದ ಸುಖಗಳೊಳಾಸಕ್ತಿಯ ತೊರೆದ*
*ರಾಗಭಯಕೋಪವಿವುಗಳ ನೀಗಿದ ಮುನಿಯೇ ಸ್ಥಿತಧೀಯೆನ್ನಿಸುವ ॥*

ವೈಜ್ಞಾನಿಕ ಚಿಂತನೆ, ಮನೋಧರ್ಮ ಪರ್ಯಾಯ ಪದಗಳು – ಮೊದಲನೆಯದು ಜಂಗಮಸ್ಥಿತಿ, ಎರಡನೆಯದು ಸ್ಥಾವರಸ್ಥಿತಿ.

**ವೈಜ್ಞಾನಿಕ ಚಿಂತನೆಯ ಪ್ರಸ್ತುತತೆ**

ಇಂದು ನಮ್ಮನ್ನು ಬಿಡಿಯಾಗಿ ಮತ್ತು ಇಡಿಯಾಗಿ ಕಾಡುತ್ತಿರುವ ಹಲಬಗೆಯ ಪೀಡನೆಗಳನ್ನು ವ್ಯಾಪಕವಾಗಿ ಮೂರು ಮಾರ್ಗಗಳಲ್ಲಿ ಅಳವಡಿಸಬಹುದು : ದುರಾಸೆ – ಪ್ರಭುತ್ವಮೂಲವಾದದ್ದು, ಧರ್ಮಾಂಧತೆ – ಧರ್ಮದ ತಿರುಳನ್ನು (ದಯವೇ ಧರ್ಮದ ಮೂಲವಯ್ಯಾ !) ಮರೆತು ಕರಟಕ್ಕೆ ಶರಣಾಗಿರುವ ಮೌಢ್ಯ, ಕರ್ಮಾಂಧತೆ – ಮಾನವಕಲ್ಯಾಣ ದೂರವಾದ ತಂತ್ರವಿದ್ಯೆ ಬೀರಿರುವ ಯಂತ್ರದಾಸ್ಯ.

ಈ ಪೈಕಿ ಪ್ರಭುತ್ವ ಮತ್ತು ಧರ್ಮ ಜ್ಞಾತೃನಿಷ್ಠವಾದವು (subjectiive) – ಮೊದಲನೆಯದಕ್ಕೆ ರಾಜ, ಸಂವಿಧಾನ, ಪೂರ್ವಕ್ರಮ ಮುಂತಾದವು ಆಧಾರ; ಎರಡನೆಯದಕ್ಕೆ ಸಂತವಾಣಿ, ಧಾರ್ಮಿಕ ಗ್ರಂಥ, ಮಹಾಮಹಿಮರ ನಡೆ ನುಡಿ ಸಾಕ್ಷ್ಯ. ವಿಜ್ಞಾನಕ್ಕಾದರೋ ಖುದ್ದು ನಿಸರ್ಗವೇ ನಿರ್ಣಾಯಕ – ''ಅವರಿವರ ನಂಬುಗೆಯ ಮಳಲ ರಾಶಿ''ಗಳಲ್ಲ. ಎಂದೇ ವಿಜ್ಞಾನ ಮಾತ್ರ ಜ್ಞೇಯನಿಷ್ಠ (objective).

ಪ್ರಭುತ್ವ, ಧರ್ಮ, ವಿಜ್ಞಾನ ಪರಸ್ಪರ ಪೂರಕ ಪೋಷಕವಾಗಿ ತಮ್ಮ ತಮ್ಮ ವಲಯಗಳಲ್ಲಿ ಕ್ರಿಯಾಶೀಲವಾಗಿರುವಾಗ ಅವು ಒಟ್ಟಾಗಿ ವರ್ಧಿಸುತ್ತವೆ, ಸಮಾಜ ಪ್ರವರ್ಧಿಸುತ್ತದೆ. ಹೀಗಲ್ಲದೇ ಸಮಕಾಲೀನ ಸಾಮಾಜಿಕ ರಾಜಕೀಯ ಕಾರಣಗಳಿಂದಾಗಿ ಯಾವುದೇ ಒಂದು ಅಥವಾ ಹೆಚ್ಚು 'ವಿಜೃಂಭಿಸಿ'ದರೆ ಅಂಥ ಅತಿರೇಕ ಮನಃಸ್ಥಿತಿಗೆ ಅಂಧತೆ (fanaticism) ಎಂದು ಹೆಸರು. ಪ್ರಭುತ್ವಾಂಧತೆ – ಇದು ನಿರಂಕುಶತೆಯ ತಳಹದಿ. ನಿದರ್ಶನ ಹಿಟ್ಲರ್. ಧರ್ಮಾಂಧತೆ – ಇತರ ಧರ್ಮಾವಲಂಬಿಗಳ ಹನನವೊಂದೇ ಇದರ ಉದ್ದೇಶ. ವೃದ್ಧ ಗೆಲಿಲಿಯೋನಿಗೆ ತುರಂಗ ಶಿಕ್ಷೆ ವಿಧಿಸಿದ್ದು, ಜಿಹಾದ್‌ಗೆ ಕರೆ ಮುಂತಾದವು ಉದಾಹರಣೆಗಳು. ವಿಜ್ಞಾನಾಂಧತೆ – ವಿಜ್ಞಾನಕ್ಕೆ ಅಪರಿಹಾರ್ಯವಾದ ಸಮಸ್ಯೆಯೇ ಇಲ್ಲ ಎಂಬ ಬೌದ್ಧಿಕ ಮೌಢ್ಯ. ಇಂದಿನ ನಿಸರ್ಗದೂರ (ವಾಸ್ತವವಾಗಿ ನಿಸರ್ಗ ವೈರಿ) ರಾಸಾಯನಿಕ ಕೃಷಿ ಇದಕ್ಕೆ ಜ್ವಲಂತ ನಿದರ್ಶನ. ಆದ್ದರಿಂದ –

*ಪ್ರಭುತ್ವರಹಿತ ಧರ್ಮ ಅನಾಥತೆ, ಧರ್ಮರಹಿತ ಪ್ರಭುತ್ವ ಸ್ವಚ್ಛಂದತೆ*
*ಧರ್ಮರಹಿತ ವಿಜ್ಞಾನ ಕುಂಟು, ವಿಜ್ಞಾನ ರಹಿತ ಧರ್ಮ ಕುರುಡು*
*ವಿಜ್ಞಾನ ರಹಿತ ಪ್ರಭುತ್ವ ಅರಾಜಕತೆ, ಪ್ರಭುತ್ವ ರಹಿತ ವಿಜ್ಞಾನ ಶುಷ್ಕತೆ*
*ಪ್ರಭುತ್ವ - ಧರ್ಮ - ವಿಜ್ಞಾನ ಸಾಮರಸ್ಯವೇ ಋಜು ಜೀವನ*

**ಸಮಾರೋಪ**

ವೈಜ್ಞಾನಿಕ ಚಿಂತನೆ ಸದಾಕಾಲ ಸರ್ವರಂಗಗಳಲ್ಲಿಯೂ ಪ್ರಸ್ತುತ. ತನ್ನ ಪರಿಪಕ್ವ ಪರಿಶುದ್ಧ ಸ್ಥಿತಿಯಲ್ಲಿ ವೈಜ್ಞಾನಿಕ ಚಿಂತನೆ ಇತರೆ ಎರಡು ಚಿಂತನೆಗಳಿಗಿಂತ (ಪ್ರಭುತ್ವ ಮತ್ತು ಧರ್ಮ) ವಿಭಿನ್ನವಲ್ಲ. ಪೌರಾಣಿಕ ಪ್ರತಿಮೆಗಳನ್ನು ಬಳಸುವುದಾದರೆ ವೈಜ್ಞಾನಿಕ ಚಿಂತನೆಗೆ ಶ್ರೀಕೃಷ್ಣನನ್ನೂ ಪ್ರಭುತ್ವ ಚಿಂತನೆಗೆ ಗೌತಮಬುದ್ಧನನ್ನೂ ಧಾರ್ಮಿಕ ಚಿಂತನೆಗೆ ಶ್ರೀ ರಾಮನನ್ನೂ ಉಲ್ಲೇಖಿಸಬಹುದು. ಅವರವರ ವೃತ್ತಿ ಪ್ರವೃತ್ತಿಗಳಲ್ಲಿ ಅವರವರು ಋಜುಮಾರ್ಗಗಾಮಿಗಳಾಗಿದ್ದರೆ – ಪ್ರಭು ಪಥ, ಧರ್ಮ ಮಾರ್ಗ, ವಿಜ್ಞಾನ ದಾರಿ – ಅಂತಿಮವಾಗಿ ಅವರು ಸಂಧಿಸುವುದು ಒಂದೇ ಶೃಂಗದಲ್ಲಿ: ಅದು ಸತ್ಯ.

*ಋತ ಶೋಧನಾರ್ಥ ವಿಜ್ಞಾನ ನಡೆ ಹಿಡಿದನವ*
*ಸತ್ಯದರ್ಶನಕೆಂದು ಧರ್ಮಪಥದಲಿವ, ಪ್ರ -*
*ಭುತ್ವಮಾರ್ಗದಲಿನ್ನುಳಿದವ ಸಾಗಿದರು – ಕೂ -*
*ಡಿತ್ತವರ ಹಾದಿಗಳು ಶೃಂಗದಲಿ ಅತ್ರಿಸೂನು*

**ಜಿ. ಟಿ. ನಾರಾಯಣರಾವ್**
೭, ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ, ಮೈಸೂರು - ೫೭೦ ೦೦೯

ಧಾರ್ಮಿಕ ಮೂಲಭೂತವಾದ, ಎಲ್ಲೇ ಇರಲಿ ಹೇಗೇ ಇರಲಿ, ಅದು ನಿಸ್ಸಂಶಯವಾಗಿ ಮನುಕುಲದ ನೆಮ್ಮದಿಯನ್ನೇ ಹಾಳು ಮಾಡಿಬಿಡುತ್ತದೆ. ಬಹುಶಃ ಬೌದ್ಧ ಧರ್ಮವನ್ನು ಬಿಟ್ಟರೆ ಜಗತ್ತಿನಲ್ಲಿ ಮತ್ತಾವ ಧರ್ಮದಲ್ಲೂ ಧಾರ್ಮಿಕ ನಂಬಿಕೆಗಳನ್ನು ಪ್ರಶ್ನಿಸುವುದಕ್ಕೆ ಅವಕಾಶವಿಲ್ಲ. ಅಲ್ಪಸಂಖ್ಯಾತ ಪುರೋಹಿತ ವರ್ಗ ಹಾಗೂ ಆಳುವ ವರ್ಗವು ಬಹುಸಂಖ್ಯಾತ ಶ್ರಮಿಕ ವರ್ಗವನ್ನು ಧರ್ಮದ ಈ ಪ್ರಬಲ ಅಸ್ತ್ರವನ್ನು ಬಳಸಿಕೊಂಡು ಇತಿಹಾಸಪೂರ್ವ ಕಾಲದಿಂದಲೂ ಜಗತ್ತಿನಾದ್ಯಂತ ಸಾಕಷ್ಟು ರಕ್ತವನ್ನು ಹರಿಸಿದೆ ಹಾಗೂ ಆ ಮೂಲಕ ತನ್ನ ಹಿತಾಸಕ್ತಿಗಳನ್ನು ಪೂರೈಸಿಕೊಂಡಿದೆ. ಧರ್ಮವೆಂಬ ಅಫೀಮು ಪರಲೋಕದ (ಇಲ್ಲದ) ಬಗೆಗೆ ಜನರಲ್ಲಿ ಪ್ರಬಲವಾದ ಭ್ರಾಂತಿಯನ್ನುಂಟುಮಾಡಿ ಇಹಲೋಕದ ಮಾನವೀಯ ಮೌಲ್ಯಗಳು ಹಾಗೂ ಬದುಕಿನೆಡೆಗಿನ ಪ್ರೀತಿಯನ್ನೇ ಹೊಸಕಿ ಹಾಕುತ್ತದೆ. ಇಡೀ ಮಾನವ ಸಂಕುಲ ವೈಜ್ಞಾನಿಕವಾಗಿ ಒಂದೇ ಪ್ರಭೇದಕ್ಕೆ ಸೇರಿದ್ದರೂ ಪರಸ್ಪರ ಅಪನಂಬಿಕೆ ಹಾಗೂ ಶ್ರೇಷ್ಠತೆಯ ಅಹಂನಿಂದಾಗಿ ಈ ಸುಂದರ ಜಗತ್ತಿನಲ್ಲಿ ಕ್ರೌರ್ಯ ತಾಂಡವವಾಡುತ್ತಿದೆ. ಅನೇಕ ಮಹನೀಯರು ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿದು ವಿಶ್ವದ ಎಲ್ಲ ನಾಗರಿಕರ ಹೃದಯಗಳನ್ನು ಬೆಸೆಯಲು ಬಹಳ ಹಿಂದಿನಿಂದಲೂ ಅವಿರತ ಪ್ರಯತ್ನ ನಡೆಸಿದ್ದಾರೆ ಹಾಗೂ ನಡೆಸುತ್ತಲಿದ್ದಾರೆ. ಹೀಗಿದ್ದೂ ನಮ್ಮ ಸಮಾಜದ ಪ್ರಸ್ತುತ ವಿದ್ಯಮಾನಗಳು ಮಾನವತಾವಾದಿಗಳನ್ನು ಆತಂಕಕ್ಕೆ ದೂಡುತ್ತವೆ. ಕಾಶ್ಮೀರದ ನರಮೇಧ, ಬಾಬರಿ ಮಸೀದಿ ನಾಶ, ಗೋಧ್ರಾ ಘಟನೆ ಹಾಗೂ ಆನಂತರದ ಭುಗಿಲೆದ್ದ ಹಿಂಸಾಚಾರ, ಅಕ್ಷರಧಾಮದ ಮೇಲಿನ ದಾಳಿ, ಪ್ಯಾಲಿಸ್ಟೇನಿನ ಹಿಂಸಾಚಾರ, ಚೆಚನ್ಯಾದ ಗಲಭೆ ಹೀಗೆ ಪ್ರಪಂಚದ ಯಾವುದೇ ಭಾಗದಲ್ಲಿ ಯಾವುದೇ ಧರ್ಮದ ಹೆಸರಿನಲ್ಲಿ ಹಿಂಸಾಚಾರ ನಡೆದರೂ ಅದು ಖಂಡನೀಯವೇ. ಪಾಕಿಸ್ತಾನದ ಮುಕ್ತ ಚಿಂತಕರ ಹಾಗೂ ಜಾತ್ಯತೀತ



ಸಿದ್ಧರಾಜು

ವೇದಿಕೆ ಬಜಾಮ್-ಇ-ಫೈಜ್‌ನ ಅಧ್ಯಕ್ಷ ಹಾಗೂ ವಕೀಲ ಮೊಹಮದ್ ರಂಜಾನ್ ಜತಾಲ ಅವರು ಧರ್ಮ ದ್ರೋಹದ ಆಪಾದನೆಯ ಮೇಲೆ ಪ್ರಸ್ತುತ ಗಲ್ಲು ಶಿಕ್ಷೆಗೆ ಗುರಿಯಾಗುತ್ತಿರುವ ಡಾ. ಮಹಮ್ಮದ್ ಯೂಸಫ್ ಶೇಕ್‌ರ ಬಗ್ಗೆ ಚರ್ಚಿಸಲು ಆಗಸ್ಟ್ ೨೧, ೨೦೦೧ರಂದು ಪಾಕಿಸ್ತಾನದ ಮಾನವ ಹಕ್ಕು ಹೋರಾಟಗಾರರ ಜಾಲ ಕರೆದಿದ್ದ ತುರ್ತು ಸಭೆಯಲ್ಲಿ ಮಾತನಾಡುತ್ತಾ, ಒಬ್ಬ ವ್ಯಕ್ತಿ ಧರ್ಮ/ದೈವ ದ್ರೋಹ ಎಸಗಿದಾಗ ಅದು ನೇರವಾಗಿ ದೇವರು ಹಾಗೂ ಆ ಮನುಷ್ಯನಿಗೆ ಸಂಬಂಧಿಸಿದ ವಿಚಾರ. ಅಂತಹವರಿಗೆ ದೇವರು ಶಿಕ್ಷೆ ವಿಧಿಸಬೇಕೇ ವಿನಃ ಆ ಹಕ್ಕು ಮಾನವ ಮಾತ್ರರಾದ ನಮಗಿಲ್ಲ ಎಂದು ಹೇಳುತ್ತಾರೆ. ದೇವರು ಕರುಣಾಮೂರ್ತಿ, ಸರ್ವಶಕ್ತ ಎಂದು ಹೇಳುತ್ತಾ ಆ ದೇವರನ್ನೇ ರಕ್ಷಿಸಲು ದೇವರ ಹೆಸರಲ್ಲಿ ನಡೆಯುವ ಹಿಂಸಾಚಾರವನ್ನು ಸಮರ್ಥಿಸಿಕೊಳ್ಳುವುದೆಂತು ? ಎಲ್ಲರೂ ದೇವರ ಸೃಷ್ಟಿಯೆಂದಾದಮೇಲ ಆ ದೇವರ ಹೆಸರಿನಲ್ಲಿ ಮತ್ತೊಂದು ಜೀವದ ಹತ್ಯೆ ಮಾಡುವುದು ದೇವರಿಗೆ ಬಗೆದ ಅಪಚಾರವಾಗದೆ? ಎಲ್ಲರನ್ನೂ ದೇವರು ಸೃಷ್ಟಿಸಿದ ಮೇಲೆ ಅಲ್ಲಿ ಮೇಲು-ಕೀಳು, ಹೆಣ್ಣು-ಗಂಡು ಎಂಬ ತಾರತಮ್ಯ ಏಕೆ ? ಈ ಪ್ರಶ್ನೆಗಳನ್ನು ಎಲ್ಲಾ ಧರ್ಮಾವಲಂಬಿಗಳು ಹಾಕಿಕೊಂಡರೆ ಧರ್ಮಗಳ ಆಷಾಢಭೂತಿತನ ಅನಾವರಣಗೊಳ್ಳುತ್ತದೆ.

ಹಿಂದೂ ಧರ್ಮದ ನಂಬಿಕೆಗಳ ಬಗ್ಗೆ ಹಾಗೂ ಮೂಲಭೂತವಾದದ ಬಗ್ಗೆ ಮಾತನಾಡುವಾಗ ಇಸ್ಲಾಮಿನ ಮೂಲಭೂತವಾದದ ಬಗ್ಗೆ ವಿಚಾರವಾದಿಗಳು ಮಾತನಾಡುವುದಿಲ್ಲವೇಕೆ ಎಂದು ಕೆಲವರು ಆಗಾಗ್ಗೆ ಕುಹಕವಾಡುವುದುಂಟು. ಸಂಖ್ಯೆಯಲ್ಲಿ ಕಡಿಮೆಯಿದ್ದರೂ ಇಸ್ಲಾಮಿನ ಮೂಲಭೂತವಾದದ ಬಗೆಗೆ ಅನೇಕ ಮಹನೀಯರು ಬಹಳ ಹಿಂದಿನಿಂದಲೂ ದನಿಯೆತ್ತುತ್ತಲೇ ಬಂದಿದ್ದಾರೆ. ಹೆಸರಾಂತ ಪರ್ಷಿಯನ್ ದಾರ್ಶನಿಕ ಉಮರ್‌ಖಯ್ಯಾಂನ ರುಬಾಯತ್‌ಗಳು, ಸಲ್ಮಾನ್ ರಶ್ದಿ, ತಸ್ಲೀಮಾ ನಸ್ರೀನ್ ಹಾಗೂ ಈಗ ಮರಣ ದಂಡನೆಗೆ ಗುರಿಯಾಗಿರುವ ಪಾಕಿಸ್ತಾನದ ಮಾನವತಾವಾದಿ ಡಾ. ಮಹಮ್ಮದ್ ಯೂಸಫ್ ಶೇಕ್ ಅವರ ಪ್ರಕರಣಗಳು, ಮಾನವ ಕಲ್ಯಾಣಕ್ಕಾಗಿ ಮಿಡಿಯುವ ಹೃದಯಗಳು ಜಗತ್ತಿನೆಲ್ಲೆಡೆ ಈಗಲೂ ಬದುಕಿ ಉಳಿದಿವೆ ಎಂಬುದನ್ನು ಸಾರಿ ಹೇಳುತ್ತವೆ. ಹಿಂದೂಗಳ ಭಕ್ತಿ ಪಂಥದ ರೀತಿಯಲ್ಲೇ ಇಸ್ಲಾಮಿನ ಸೂಫಿ ಪಂಥ ಕೂಡ ಜನಪರವಾಗಿದ್ದು ಅದು ಧಾರ್ಮಿಕ ಮೂಲಭೂತವಾದದ ವಿರುದ್ಧದ ಹೋರಾಟವೇ ಆಗಿತ್ತು. ಆದರೆ ಸಮಕಾಲೀನ ಧಾರ್ಮಿಕ ಮುಖಂಡರುಗಳು ಮಾಡುತ್ತಿರುವುದೇನು ? ಬಡತನದಿಂದ ಜರ್ಝರಿತವಾಗಿರುವ ಭಾರತ, ಪಾಕಿಸ್ತಾನ, ಬಾಂಗ್ಲಾ ದೇಶಗಳ ಜನತೆಗೆ ಬೇಕಾಗಿರುವುದು ಮೂಲಭೂತ ಸೌಕರ್ಯಗಳೇ ವಿನಃ ಮೂಲಭೂತವಾದಕ್ಕೆ ಪೋಷಣೆ ನೀಡುವ ಬಾಬ್ರಿ ಮಸೀದಿ/ರಾಮ ಮಂದಿರಗಳಲ್ಲ ಅಥವಾ ಬಾಬಾಬುಡನ್‌ಗಿರಿ/ದತ್ತ ಪೀಠಗಳೂ ಅಲ್ಲ. ಸ್ವಾರ್ಥಕ್ಕಾಗಿ ಮತೀಯ ಸೌಹಾರ್ದವನ್ನು ಹಾಳುಗೆಡಹುವುದು ಮಾನವೀಯವೂ ಅಲ್ಲ. ಇಸ್ಲಾಮಿಕ್ ಭಯೋತ್ಪಾದನೆ ಎಂದು ಕೂಗೆಬ್ಬಿಸುತ್ತಾ ಹಿಂದೂ ಭಯೋತ್ಪಾದನೆಯನ್ನು ಹುಟ್ಟುಹಾಕಿ ಕೋಮು ಸೌಹಾರ್ದವನ್ನು ಕದಡುವುದು ವಿವೇಕದ ಲಕ್ಷಣವಲ್ಲ. ಧಾರ್ಮಿಕ ನೆಲೆಗಟ್ಟಿನಲ್ಲಿ ರೂಪುಗೊಂಡ ಯಾವ ರಾಷ್ಟ್ರವೂ ನೆಮ್ಮದಿಯಿಂದ ಬದುಕಲಾರದು. ಅರೇಬಿಯಾದ ರಾಷ್ಟ್ರಗಳೆಲ್ಲಾ ಇಸ್ಲಾಂ ನೆಲೆಗಟ್ಟಿನಲ್ಲಿ ರೂಪುಗೊಳ್ಳುತ್ತಿದ್ದಾಗ ಟರ್ಕಿಯ ಮಹಾನಾಯಕ ಕೆಮಾಲ್ ಪಾಷ ಆ ಕಾಲದಲ್ಲೇ ರಾಜ್ಯಾಡಳಿತವನ್ನು ಧರ್ಮದಿಂದ ಪ್ರತ್ಯೇಕಿಸಿ ಪ್ರಗತಿಪರ ಮೌಲ್ಯಗಳ ಮೇಲೆ ತನ್ನ ಆಧುನಿಕ ರಾಷ್ಟ್ರ ನಿರ್ಮಾಣಕ್ಕೆ ಭದ್ರ ಬುನಾದಿ ಹಾಕಿದ. ಇತಿಹಾಸ ಓದಿದ ಯಾರಿಗಾದರೂ ಈ ಅಂಶ ಗೋಚರವಾದೀತು.

ಈ ಲೇಖನದಲ್ಲಿ ಮಧ್ಯಪ್ರಾಚ್ಯ ದೇಶಗಳ ಮಹಿಳಾ ಹಕ್ಕುಗಳ ರಕ್ಷಣಾ ಸಮಿತಿಯ ಸಂಘಟಕಿಯಾಗಿರುವ ಇರಾನಿನ ಲೇಖಕಿ ಅಜಾಂ ಕಾಂಗ್ವಿಯಾನ್ ಅವರು ೨೦೦೨ನೇ ಸಾಲಿನ ಅಂತರರಾಷ್ಟ್ರೀಯ ಮಾನವತಾವಾದಿಗಳ ಹಾಗೂ ನೀತಿನಿಷ್ಠರ ಒಕ್ಕೂಟದ ಸಮ್ಮೇಳನದಲ್ಲಿ ಇಸ್ಲಾಮಿನ ಮೇಲೆ ಮಾಡಿದ ಭಾಷಣದ ಭಾವಾನುವಾದವನ್ನು ನೀಡಲಾಗಿದೆ. ಇದರಲ್ಲಿ ದೇವರು ಮತ್ತು ಇಸ್ಲಾಮಿನ ಹೆಸರಿನಲ್ಲಿ ಮಾನವತೆಯ ಮೇಲೆ ನಡೆದಿರುವ ದೌರ್ಜನ್ಯವನ್ನು ಕ್ರಮಬದ್ಧವಾಗಿ ಹಾಗೂ ಪ್ರಬಲವಾಗಿ ಖಂಡಿಸುವ ಕಾಂಗ್ವಿಯಾನ್ ಇಸ್ಲಾಮಿಕ್ ಆಡಳಿತಗಳ ಕ್ರೌರ್ಯಗಳ ವಿರುದ್ಧ ಎಲ್ಲಾ ಮಾನವತಾವಾದಿಗಳು ಹಾಗೂ ಸಭ್ಯ ಜನತೆ ಸೆಟೆದು ನಿಲ್ಲುವಂತೆ ಕರೆ ನೀಡುತ್ತಾರೆ. ಈ ಭಾಷಣವನ್ನು ಓದಿದರೆ ಆಕೆಯ ಕರೆ ಕೇವಲ ಒಂದು ಧರ್ಮಕ್ಕೆ ಮಾತ್ರವೇ ಸೀಮಿತವಾಗಿರದೆ ಧಾರ್ಮಿಕ ನೆಲೆಗಟ್ಟಿನಲ್ಲಿ ರಾಷ್ಟ್ರವನ್ನು ಕಟ್ಟಬಯಸುವ ಎಲ್ಲಾ ಮತಧರ್ಮಗಳ ಸನಾತನಿಗಳಿಗೂ ಒಂದು ನೀತಿಪಾಠವಾಗಬಲ್ಲದು. ಮಾನವೀಯ ಅಂತಃಕರಣವಿಲ್ಲದ ಎಲ್ಲ ಮತಧರ್ಮಗಳೂ ಮನುಕುಲದ ವಿನಾಶದಲ್ಲಿ ವಹಿಸಿರುವ ಪಾತ್ರದ ಬಗ್ಗೆ ಈಗಲಾದರೂ ನಾವು ಇತಿಹಾಸದಿಂದ ಪಾಠ ಕಲಿಯಬೇಕಾಗಿದೆ. ಕಾಂಗ್ವಿಯಾನ್ ಅವರ ಅಭಿಪ್ರಾಯಗಳನ್ನು ಅವರ ಮಾತುಗಳಲ್ಲೇ ಕೇಳೋಣ :

ನಾನು ಹೇಳಹೊರಟಿರುವುದು ಇಸ್ಲಾಮಿನ ಅದರಲ್ಲೂ ಸಮಕಾಲೀನ ಇಸ್ಲಾಮಿನ ಬಗೆಗೆ. ಇರಾನಿನಲ್ಲಿ ಈವರೆಗೆ ಏನು ನಡೆದಿದೆ ಹಾಗೂ ಈಗಲೂ ಏನು ನಡೆಯುತ್ತಿದೆ ಎಂಬುದನ್ನು ನಿಮಗೆ ಮನವರಿಕೆ ಮಾಡಿಕೊಡುವುದಕ್ಕಾಗಿ ಇಸ್ಲಾಮಿಕ್ ಕಗ್ಗೊಲೆಗಳ ಕೆಲವು ಘಟನೆಗಳನ್ನಿಲ್ಲಿ ನಿಮಗೆ ವಿವರಿಸುತ್ತೇನೆ. ಇಸ್ಲಾಮಿಕ್ ಚಳುವಳಿಗಳ ಪೋಷಕರ ಹಾಗೂ ಇಸ್ಲಾಮಿನ ಸಮರ್ಥಕರ ಬಗ್ಗೆ ಕೂಡ ನಾನಿಲ್ಲಿ ಮಾತಾಡುತ್ತೇನೆ. ಇಸ್ಲಾಮಿನ ಮೇಲೆ ಮಾನವೀಯತೆ ವಿಜಯ ಸಾಧಿಸಬೇಕಾದ ತುರ್ತು ಅವಶ್ಯಕತೆ ಹಾಗೂ ಈ ಗುರಿ ಸಾಧನೆಗೆ ಅನುಸರಿಸಬೇಕಾದ ಪ್ರಾಯೋಗಿಕ ಕ್ರಮಗಳ ಬಗೆಗೆ ಒತ್ತು ಕೊಡುವುದರ ಮೂಲಕ ನನ್ನ ಮಾತುಗಳನ್ನು ಅಂತಿಮಗೊಳಿಸುತ್ತೇನೆ.

ಇಪ್ಪತ್ತನೆಯ ಶತಮಾನದ ಕೊನೆಯ ದಶಕ ಮತ್ತೊಂದು ವಿನಾಶ (ಪ್ರಳಯ)ಕ್ಕೆ ಸಾಕ್ಷಿಭೂತವಾಯಿತು. ಅದು ಇಸ್ಲಾಮಿಕ್ ಸ್ವರೂಪದ್ದಾಗಿದ್ದು ಅದರಲ್ಲಿ ಇಸ್ಲಾಮಿಕ್ ದೇಶಗಳು, ಇಸ್ಲಾಮಿನ ರಾಜಕೀಯ ಚಳುವಳಿಗಳು ಮತ್ತು ಇರಾನ್, ಸೂಡಾನ್, ಅಫ್ಘಾನಿಸ್ತಾನ, ಆಲ್ಜೀರಿಯಾ, ಈಜಿಪ್ಟ್, ನೈಜೀರಿಯಾ, ಮಧ್ಯಪ್ರಾಚ್ಯ ಹಾಗೂ ಈಗ ಅಮೆರಿಕೆಯಲ್ಲಿ ಇಸ್ಲಾಮಿಕ್ ಭಯೋತ್ಪಾದಕರು ಮಿಲಿಯಾಂತರ ಜನರನ್ನು ಗುಂಡಿಕ್ಕಿ, ತಲೆ ಹಾರಿಸಿ, ಕಲ್ಲು ಹೊಡೆದು ಸಾಯಿಸಿದ್ದಾರೆ. ಇಲ್ಲವೇ ಆ ಪ್ರದೇಶದಿಂದಲೇ ಹೊರ ಓಡಿಸಿದ್ದಾರೆ. ಕಡ್ಡಾಯವಾಗಿ ತೊಡಬೇಕಾದ ನೀಳ ಉಡುಪು, ತಲೆ ಪೇಟ ಹಾಗೂ ಕುರಾನ್ ಇವು ಜನರನ್ನು ನಿರಂತರವಾಗಿ ಬಲಿ ತೆಗೆದುಕೊಳ್ಳುತ್ತಲೇ ಇವೆ. ಸ್ವಾತಂತ್ರ್ಯ ಹಾಗೂ ಭಿನ್ನಮತದ ಧ್ವನಿಯನ್ನು ಸ್ಥಳದಲ್ಲೇ ಅಡಗಿಸಲಾಗುತ್ತಿದೆ. ಇಸ್ಲಾಮಿಕ್ ಚಳುವಳಿಗಳಿಂದ ಪ್ರೇರಣೆಗೊಂಡ ದಬ್ಬಾಳಿಕೆಯ ಕ್ರೂರ ಸಂಪ್ರದಾಯಗಳು ಮತ್ತು ಕಾನೂನುಗಳನ್ನು ಬಲವಂತವಾಗಿ ಹೇರುವ ಮೂಲಕ ಹಾಗೂ ಮಕ್ಕಳು ವೃದ್ಧರೆನ್ನದೇ ಅವರನ್ನು ಸಾಮೂಹಿಕವಾಗಿ ಹತ್ಯೆ ಮಾಡುವ ಮೂಲಕ ವೈಯಕ್ತಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಚಿವುಟಿ ಹಾಕಲಾಗುತ್ತಿದೆ. ಸ್ತ್ರೀಯರ ನಾಗರಿಕ ಸ್ವಾತಂತ್ರ್ಯದ ಹರಣ ಮಾಡಲಾಗುತ್ತಿದೆ.

ವಾಸ್ತವವಾಗಿ ಇಸ್ಲಾಂ ನಂಬಿಕೆಗಳ ಹಾಗೂ ನಿಯಮಗಳ ಒಂದು ಕಂತೆಯಾಗಿದ್ದು ಇವು

ಮಾನವನ ಏಳಿಗೆ, ಸಮಾನತೆ, ಸ್ವಾತಂತ್ರ್ಯ, ಸುಖ-ಸಂತೋಷ ಹಾಗೂ ಜ್ಞಾನಾರ್ಜನೆಗೆ ಪ್ರತಿಕೂಲವಾಗಿದೆ. ಮನುಷ್ಯನ ಸಮಗ್ರ ಬದುಕಿಗೆ ಇಸ್ಲಾಮಿನ ರೀತಿ-ರಿವಾಜುಗಳು ವಿರುದ್ಧವಾಗಿದ್ದು ವಿರೋಧಾಭಾಸಗಳಿಂದ ಕೂಡಿದೆ. ಇಸ್ಲಾಂ ಧರ್ಮವನ್ನು ಹೇಗೆ ವ್ಯಾಖ್ಯಾನ ಮಾಡಿದರೂ ಅದು ಧರ್ಮನಿರಪೇಕ್ಷತೆ, ಆಧುನಿಕತೆ, ಸಮಾನತೆ ಹಾಗೂ ಸ್ತ್ರೀಯರ ಹಕ್ಕುಗಳನ್ನು ದಮನಿಸುವ ಪ್ರಬಲ ಶಕ್ತಿಯಾಗಿ ಪರಿಣಮಿಸಿದೆ. ಒಂದು ರಾಜಕೀಯ ಚಳುವಳಿಯಾಗಿ ಮಾರ್ಪಟ್ಟ ಇಸ್ಲಾಂ, ವಿಮೋಚನೆಗಾಗಿ ಹೋರಾಟ ನಡೆಸುತ್ತಿರುವ ಪ್ರಗತಿಪರ ಚಳುವಳಿಗಳನ್ನು ಹತ್ತಿಕ್ಕುತ್ತಿರುವುದಲ್ಲದೆ ಸಾಂಸ್ಕೃತಿಕ ಹಾಗೂ ಬೌದ್ಧಿಕ ಬೆಳವಣಿಗೆಗೆ ಅಡ್ಡಿಯಾಗಿದೆ. ಹಿಂಸೆಯನ್ನು ಪ್ರಚೋದಿಸುವ ಹಾಗೂ ಮನುಕುಲದ ಘನತೆಗೆ ಕುಂದುಂಟುಮಾಡುವ ಗುಣಗಳು ರಾಜಕೀಯ ರೂಪ ತಳೆದಿರುವ ಇಸ್ಲಾಮಿಕ್ ಚಳವಳಿಯಲ್ಲಿ ಹಾಗೂ ಇಸ್ಲಾಮಿಕ್ ರಾಜಕೀಯ ಪಕ್ಷಗಳ ಪ್ರಣಾಳಿಕೆಗಳಲ್ಲಿ ಅಂತರ್ಗತವಾಗಿವೆ.

ಇರಾನಿನಲ್ಲಿ ಇಸ್ಲಾಂ ಒಂದು ರಾಜಕೀಯ ಶಕ್ತಿಯಾಗಿ ಬೆಳೆದು ಇಸ್ಲಾಮಿಕ್ ಗಣರಾಜ್ಯ ಸ್ಥಾಪನೆಯಾದ ನಂತರ ಅದು ತನ್ನ ಗಡಿಯನ್ನು ದಾಟಿ ಇತರೆ ಮಧ್ಯಪ್ರಾಚ್ಯ ದೇಶಗಳಿಗೂ ಹರಡತೊಡಗಿತು. ಇಸ್ಲಾಂ ಒಂದು ರಾಜಕೀಯ ಶಕ್ತಿಯಾಗಿ ಬೆಳೆದು ಮೊತ್ತ ಮೊದಲ ಬಾರಿ ಆಡಳಿತದ ಚುಕ್ಕಾಣಿ ಹಿಡಿದದ್ದು ಇರಾನಿನಲ್ಲೇ. ನಂತರ ಈ ಪ್ರದೇಶದಲ್ಲಿ ಅದೊಂದು ಗುರುತರ ಶಕ್ತಿಯಾಗಿ ಬೆಳೆಯಿತು. ಇರಾನ್ ಇಸ್ಲಾಮಿಕ್ ರಾಷ್ಟ್ರವಾದ ನಂತರ ಅಲ್ಲಿ ಹಿಂಸೆ ಮತ್ತೊಂದು ಆಯಾಮವನ್ನೇ ಪಡೆದುಕೊಂಡಿದೆ. ಎಲ್ಲಿಯಾದರೂ ಇಸ್ಲಾಮಿಕ್ ಗಣರಾಜ್ಯ ಅಸ್ತಿತ್ವದಲ್ಲಿದೆಯೆಂದರೆ ಅಲ್ಲಿ ಭೀಕರ ಹಿಂಸೆ ಇದೆಯೆಂದೇ ಅರ್ಥ. ತಮ್ಮ ಪರಿಕಲ್ಪನೆಯ ದೇವರು ಯಾವಾಗಲೋ, ಏನನ್ನೋ ಹೇಳಿದ್ದಾನೆಂಬ ನಂಬಿಕೆಯಿಂದಲಾಗಲೀ ಅಥವಾ ಯಾವನೋ ಒಬ್ಬ ಪ್ರವಾದಿ ಮತ್ತೇನನ್ನೋ ಹೇಳಿದ್ದಾನೆಂಬ ನಂಬಿಕೆಯಿಂದಲಾಗಲೀ ಇಂತಹ ನಂಬಿಕೆಗಳನ್ನಾಧರಿಸಿದ ನಿಯಮಗಳನ್ನು ಜನರ ಮೇಲೆ ಬಲವಂತವಾಗಿ ಹೇರುವುದು ಕೂಡ ಹಿಂಸೆಯ ಒಂದು ಸ್ವರೂಪವೇ ಆಗಿದೆ. ಇಂತಹ ನಿಯಮಗಳನ್ನು ಯಾರಾದರೂ ಪ್ರತಿರೋಧಿಸಿದಲ್ಲಿ ಅಂತಹವರನ್ನು ತೀವ್ರ ಶಿಕ್ಷೆಗೆ ಗುರಿಪಡಿಸಲಾಗುವುದಲ್ಲದೆ, ಪ್ರತಿರೋಧವನ್ನು ಆರಂಭದಲ್ಲೇ ಹೊಸಕಿ ಹಾಕಲಾಗುತ್ತದೆ. ಇಸ್ಲಾಂ ಎಂದರೆ ಅತ್ಯಂತ ಕೆಟ್ಟದಾದ ಹಾಗೂ ಭೀಕರ ಹಿಂಸಾಕೃತ್ಯವೆಂದೇ ಅರ್ಥ. ಇಸ್ಲಾಂ ಏನೆಲ್ಲಾ ಮಾಡಬಲ್ಲದು ಎಂಬುದಕ್ಕೆ ಇರಾನ್ ಒಂದು ಪಾರದರ್ಶಕ ಚಿತ್ರಣವನ್ನು ಒದಗಿಸುತ್ತದೆ. ಇಸ್ಲಾಮಿಕ್ ಆಡಳಿತಾವಧಿಯಲ್ಲಿ ಅಲ್ಲಿ ನಡೆದ ಹಿಂಸೆ, ದೌರ್ಜನ್ಯ ಹಾಗೂ ಸ್ತ್ರೀದ್ವೇಷಿ ರಕ್ತಪಾತದ ಬಗೆಗೆ ನಿಮಗಿಲ್ಲಿ ಸಂಕ್ಷಿಪ್ತವಾಗಿ ಹೇಳುತ್ತಿದ್ದೇನೆ.

ಇಸ್ಲಾಂ ರಕ್ತವನ್ನೇ ಹರಿಸಿದ ಆ ಕಾಲದಲ್ಲಿ ನಾನು ಸಹಸ್ರಾರು ದಿನಗಳನ್ನು ಇರಾನಿನಲ್ಲಿ ಕಳೆದಿದ್ದೇನೆ. ಅಲ್ಲಿ ೧೯೭೮ರಿಂದೀಚೆಗೆ ಪುರುಷರು, ಮಹಿಳೆಯರು ಹಾಗೂ ಮಕ್ಕಳಿನ್ನದೆ ಸಹಸ್ರಾರು ಜನರನ್ನು ಅಲ್ಲಾಹನ ಹೆಸರಿನಲ್ಲಿ ಹತ್ಯೆ ಮಾಡಲಾಗಿದೆ. ನಾನು ಮತ್ತು ನನ್ನಂಥ ಸಹಸ್ರಾರು ಪುರುಷರು ಹಾಗೂ ಮಹಿಳೆಯರು ಆ ದಿನಗಳಲ್ಲಿ ಯಾರಿಗೆ ಎಂಥವರಿಗೆ ಅಂದು ಮರಣದಂಡನೆ ನೀಡಲಾಯಿತು ಎಂದು ತಿಳಿಯಲು ವೃತ್ತಪತ್ರಿಕೆಗಳನ್ನು ಜಾಲಾಡುತ್ತಿದ್ದೆವು. ಅಲ್ಲಾಹನ ಸೈನಿಕರು ಪ್ರಕಟಣಾಲಯಗಳು ಹಾಗೂ ಪುಸ್ತಕದಂಗಡಿಗಳಿಗೆ ದಾಳಿಯಿಟ್ಟು ಪುಸ್ತಕಗಳನ್ನು ಸುಡುತ್ತಿದ್ದರು. ವಿಶ್ವವಿದ್ಯಾಲಯಗಳ ಮೇಲೆ ದಾಳಿ ಮಾಡಿ ವಿದ್ಯಾರ್ಥಿಗಳನ್ನು ದೇಶಾದ್ಯಂತ ನಿರ್ದಯವಾಗಿ ಕೊಲ್ಲಲಾಯ್ತು. ಮುಷ್ಕರ ನಿರತರ ಮೇಲೆ ವಾರಗಟ್ಟಲೆ, ತಿಂಗಳುಗಟ್ಟಲೆ ಆಕ್ರಮಣ ಮಾಡಿ ರಕ್ತದ ಕೋಡಿಯನ್ನೇ ಹರಿಸಿದರು. ಇರಾನಿನ ಒಳಗೆ ಮತ್ತು ಹೊರಗೆ ವಿರೋಧಿಗಳನ್ನು ಹತ್ಯೆ ಮಾಡುತ್ತಿದ್ದ ವರುಷಗಳು ಅವು. ಲಿಂಗಭೇದ ನಿಯಮಗಳು ಹಾಗೂ ಹಿಜಾಬ್‌ನಿಂದ ಉಂಟಾದ ಸಂಕಷ್ಟಮಯ ಪರಿಣಾಮಗಳನ್ನು ಪ್ರತಿರೋಧಿಸಿದ ಫಲವಾಗಿ ನಿರೀಶ್ವರವಾದಿಗಳು, ಮುಕ್ತ ಚಿಂತಕರು, ಸಮಾಜವಾದಿಗಳು, ಬಹಾಯಿಗಳು, ಮಾರ್ಕ್ಸ್‌ವಾದಿಗಳು, ಟ್ರೇಡ್ ಯೂನಿಯನ್ ನಾಯಕರು ಹಾಗೂ ಮಹಿಳಾ ಕಾರ್ಯಕರ್ತರನ್ನು ಬರ್ಬರವಾಗಿ ಹತ್ಯೆ ಮಾಡಲಾಯಿತು. ಈ ಯಾವ ಗುಂಪಿಗೂ ಸೇರಿರದ ಅನೇಕರನ್ನು ರಸ್ತೆಗಳಲ್ಲಿ ಬಂಧಿಸಿ ಅವರು ಮುಸಲ್ಮಾನರಂತೆ ಕಾಣುತ್ತಿಲ್ಲವೆಂಬ ಕಾರಣಕ್ಕಾಗಿಯೇ ಕೊಲ್ಲಲಾಯಿತು. ಇರಾನಿನೊಳಗೆ ಹೀಗೆ ಬಲಿಯಾದ ನೂರಾರು ಸಾವಿರಾರು ಜನರ ಗುಂಪಿಗೆ ಅಲ್ಜೀರಿಯಾ, ಸೂಡಾನ್, ಅಫ್ಘಾನಿಸ್ತಾನ, ಪಾಕಿಸ್ತಾನ ಮುಂತಾದೆಡೆ ಹತರಾದ ಲಕ್ಷೋಪಲಕ್ಷ ಜನಗಳು ಸೇರ್ಪಡೆಯಾಗುತ್ತಾರೆ. ನಾಗರಿಕ ಪ್ರಪಂಚ ಯಾವುದೇ ಕ್ರಮ ವಹಿಸದ ಮೌನಪ್ರಳಯ ಇದು.

ಅಲ್ಲಾಹ್ ಮತ್ತು ಶರಿಯತ್‌ನ ನಿಯಮಗಳ ಹೆಸರಿನಲ್ಲಿ ನನಗೆ ಮತ್ತು ಇತರ ಸಹಸ್ರಾರು ರಾಜಕೀಯ ಖೈದಿಗಳಿಗೆ ದೇವರನ್ನು ನಂಬದವರ ಬಗೆಗಿನ ಕುರಾನ್‌ನ ಶ್ಲೋಕಗಳನ್ನು ಪಠಿಸುತ್ತಾ ಚಿತ್ರಹಿಂಸೆ ನೀಡುತ್ತಿದ್ದರು. ಚಾಟಿಯೇಟಿನಂತಹ ಹಲಬಗೆಯ ಕ್ರೂರ ಹಿಂಸೆಗಳ ನೋವಿನಿಂದ ಹೊರಟ ನಮ್ಮ ಆಕ್ರಂದನಗಳ ಸ್ವರ ಕುರಾನಿನ ಶ್ಲೋಕಗಳ ಧ್ವನಿಯಲ್ಲಿ ಬೆರೆತು ಹೋಗುತ್ತಿತ್ತು. ಅಲ್ಲಾಹ್ ತಮಗೆ ಕರುಣಿಸಿದ ಫಲವೆಂದು ಭಾವಿಸಿ ಸ್ತ್ರೀ ಖೈದಿಗಳ ಮೇಲೆ ಅತ್ಯಾಚಾರ ನಡೆಸಲಾಗುತ್ತಿತ್ತು ಮತ್ತು ಆ ಮುನ್ನ ಪ್ರಾರ್ಥನೆ ಸಲ್ಲಿಸಲಾಗುತ್ತಿತ್ತು. ನಮ್ಮ ಗೆಳೆಯರು ಹಾಗೂ ಸಹ ಖೈದಿಗಳಿಗೆ ಗುಂಡಿಕ್ಕಿದ ಶಬ್ದಗಳನ್ನು ಆಲಿಸಿ ನಾವು ಬೆಳಗಾದದ್ದನ್ನು ತಿಳಿಯುತ್ತಿದ್ದೆವು. ಅಂದು ಬಂದೂಕಿನಿಂದ ಹೊಮ್ಮಿದ ಗುಂಡಿನ ಶಬ್ದಗಳಿಂದ ಆ ದಿನ ಸತ್ತವರ ಸಂಖ್ಯೆಯನ್ನು ನಾವು ಲೆಕ್ಕ ಹಾಕುತ್ತಿದ್ದೆವು. ತಮ್ಮ ಬಂಧುಗಳ ರಕ್ತಸಿಕ್ತ ಉಡುಗೆಗಳನ್ನು ಪಡೆಯಲಿಕ್ಕೂ (ಗುಂಡಿಗೂ) ಹಣ ತೆರಬೇಕಾಗಿತ್ತು. ಅವರುಗಳು ಅಲ್ಲಿ ಒಂದು

## ಸಂಖ್ಯೆಗಳ ವಿಸ್ಮಯ

**ನಾ**ನೊಮ್ಮೆ ಗಣಿತಶಾಸ್ತ್ರದ ಯಾವುದೋ ಪ್ರಮೇಯ ಕುರಿತು ಉಪನ್ಯಾಸ ನೀಡಲು ವಿದೇಶವೊಂದಕ್ಕೆ ಹೋಗಿದ್ದೆ. ಕೇಳುಗರೆಲ್ಲಾ ಅತಿರಥ-ಮಹಾರಥರು. ಹಾಗೆಂದು ಅವರಂತೂ ಭಾವಿಸಿಕೊಂಡಿದ್ದರು. ಗಂಭೀರವಾದ ಮತ್ತು ಗಹನವಾದ ಉಪನ್ಯಾಸದ ನಿರೀಕ್ಷೆಯಲ್ಲಿದ್ದ ಅವರಿಗೆ ಆರಂಭದಲ್ಲಿ ಏನು ಹೇಳಬೇಕೆಂಬ ಯೋಚನೆಯಲ್ಲಿದ್ದೆ. ಕಡೆಗೆ ಹೀಗೆ ಆರಂಭಿಸಿದೆ :

ಸರಿ, ನಾನು ಉಪನ್ಯಾಸ ಆರಂಭಿಸಬೇಕಲ್ಲವೇ ? ಆದ್ದರಿಂದ ಆರಂಭದ ಆರಂಭದಿಂದಲೇ ಆರಂಭಿಸುತ್ತೇನೆ. ಜರ್ಮನಿಯ ವಿಜ್ಞಾನಿ ಕ್ರೊನೇಕರ್ ಒಮ್ಮೆ ಹೇಳಿದ್ದ 'ದೇವರು ಸಂಖ್ಯೆಗಳನ್ನು ಸೃಷ್ಟಿಸಿದ; ಅಲ್ಲಿಂದ ಮುಂದಿನದೆಲ್ಲಾ ಮಾಡಿರುವುದು ಮನುಷ್ಯ' ಎಂದು. ಹಾಗಿದ್ದರೆ ಮನುಷ್ಯನ ಮೊದಲ ಕೆಲಸ ಏನಾಗಿತ್ತು ? ಕಾರಣವೇನೇ ಇರಲಿ, ಅವನು ಮೊದಲು ದಶಮಾಂಶ ಪದ್ಧತಿಯನ್ನು ಕಂಡುಕೊಳ್ಳಬೇಕಾಗಿತ್ತು. ಅದನ್ನವನು ಸಿದ್ಧಿಸಿಕೊಂಡಾಗ ಜಾಣತನದಿಂದ ಒಂದು ಮಕ್ಕಳ ಹಾಡನ್ನು ಅದರೊಳಗೆ ಅಡಗಿಸಿಬಿಟ್ಟ. ಆ ಹಾಡೇ ನನ್ನ ಶೋಧನೆಗಳಲ್ಲಿ ಅತ್ಯುತ್ತಮವಾದ್ದೆಂದು ನನ್ನ ನಂಬಿಕೆ. ಅಂತಹ ಇನ್ನೊಂದನ್ನು ಮತ್ತೆಂದಾದರೂ ಶೋಧಿಸುತ್ತೇನೋ ಇಲ್ಲವೋ ಎಂಬ ಅನುಮಾನ ನನಗಿದೆ !

ದಶಮಾಂಶ ಪದ್ಧತಿಯ ಮೂಲ ಗ್ರಹಿಕೆ ಇದು : ಒಟ್ಟು ಹತ್ತು ಸಂಕೇತಗಳನ್ನು ಬಳಸಿ ಯಾವುದೇ ಸಂಖ್ಯೆಯನ್ನು ಬೇಕಾದರೂ ಸೂಚಿಸಬಹುದು. ಅವು ಎಲ್ಲರಿಗೂ ಗೊತ್ತಿದೆ. ೧, ೨, ೩, ೪, ೫, ೬, ೭, ೮, ೯, ಮತ್ತು ೦. ಅವನ್ನು ಕೆಳಗಿನಂತೆ ಬರೆಯೋಣ :

| | | | |
|---|---|---|---|
| ೧ | ೨ | ೩ | ೪ |
| ೫ | ೬ | ೭ | ೮ |
| ೯ | ೦ | ೯ | ೧೦ |

ನಾಲ್ಕನೆಯ ಸಾಲಿನಲ್ಲೇನೋ ಪುನರುಕ್ತಿ ಇದ್ದಂತೆ ತೋರುತ್ತದಲ್ಲಾ ಎನಿಸಬಹುದು. ಕಡೆಯ ೯ ಮತ್ತು ೧೦ ಎಂಬುವನ್ನು ಬಿಟ್ಟು ಮಿಕ್ಕವನ್ನು ನೋಡಿ. ಆ ಹತ್ತು ಸಂಕೇತಗಳನ್ನು ಬಳಸಿ ಯಾವ ಸಂಖ್ಯೆಯನ್ನಾದರೂ ಬರೆಯಬಹುದೆಂಬ ದಶಮಾಂಶ ಸಿದ್ಧಾಂತವನ್ನು ಅವು ಪ್ರಕಟಪಡಿಸುತ್ತವೆ. ಕಡೆಯ ೯ ಮತ್ತು ೧೦ ಬಿಟ್ಟು ಉಳಿದವು ಸಂಕೇತಗಳು. ಕಡೆಯ ಸಾಲಿನ ೯ ಮತ್ತು ೦ ಬಿಟ್ಟು ಆ ಸಾಲನ್ನು ಗಮನಿಸಿ. ಸಂಕೇತಗಳಿಂದ ಸಂಖ್ಯೆಗಳ ರಚನೆ ಹೇಗೆ ಎಂಬುದಕ್ಕೆ ಅದೊಂದು ಪ್ರಾಯೋಗಿಕ ನಿದರ್ಶನ: ಉದಾಹರಣೆಗೆ ೧೦ ಎಂಬುದರಲ್ಲಿ ಎರಡು ಸಂಕೇತಗಳ ಬಳಕೆಯಾಗಿವೆ. ನಾಲ್ಕನೆಯ ಸಾಲಿನಲ್ಲಿ ಸಂಕೇತಗಳೂ ಇವೆ, ಅವುಗಳ ಬಳಕೆಗೆ ಒಂದು ನಿದರ್ಶನವೂ ಇದೆ.

ಈಗೊಂದು ಚಮತ್ಕಾರ ಮಾಡೋಣ : = ಮತ್ತು x ಎಂಬ ಸಂಕೇತಗಳನ್ನು ಸೇರಿಸಿ ನಾಲ್ಕು ಸಾಲುಗಳನ್ನೂ ಮತ್ತೆ ಬರೆದರೆ ಹೇಗಿರುತ್ತದೆ ನೋಡಿ.

೧೨ = ೩ x ೪

೫೬ = ೭ x ೮

೯೦ = ೯ x ೧೦.

ಏನು ಸೊಗಸು ಅಲ್ಲವೆ ! ಇದರಲ್ಲಿ ಲಯ ಇದೆ. ಆದರೆ ತರ್ಕ ?

ಪ್ರೊ|| ಎಸ್. ಶ್ರೀನಿವಾಸನ್
ಟಿ. ಐ. ಎಫ್. ಆರ್., ಭಾರತೀಯ ವಿಜ್ಞಾನ ಸಂಸ್ಥೆ ಆವರಣ, ಬೆಂಗಳೂರು - ೫೬೦ ೦೧೨

ಇಸ್ಲಾಮಿಕ್ ಆಶ್‌ವಿಟ್ಜ್‌ನ್ನೇ (ನಾಜೀಗಳು ಖೈದಿಗಳನ್ನು ಬೀಭತ್ಸವಾಗಿ ಕೊಲ್ಲುತ್ತಿದ್ದ ಪೋಲೆಂಡಿನ ಪಟ್ಟಣ) ಸೃಷ್ಟಿಸಿಬಿಟ್ಟಿದ್ದರು. ಭಾವೋದ್ರಿಕ್ತರಾದ ಹೆಸರಾಂತ ಪ್ರಗತಿಪರರನೇಕರನ್ನು ಸಾಮೂಹಿಕವಾಗಿ ಆ ದಿನಗಳಲ್ಲಿ ಕೊಂದುಹಾಕಲಾಯ್ತು. ಆ ಭಯಾನಕತೆಯ ಸ್ವರೂಪ ಮತ್ತು ಪ್ರಮಾಣ ಊಹೆಗೂ ನಿಲುಕದಿರುವಂಥದು.

ಅಂದಿನಿಂದ ಪ್ರೀತಿ-ಸಂತೋಷ, ಮುಗುಳ್ನಗೆಯಂತಹ ಮಾನವ ಸಹಜ ಸ್ವತಂತ್ರ ಅಭಿವ್ಯಕ್ತಿಗಳ ಮೇಲೆ ನಿಷೇಧ ಹೇರಲಾಯ್ತು. ಇಸ್ಲಾಂ ಎಲ್ಲದರಲ್ಲೂ ಮೇಲುಗೈ ಸಾಧಿಸಿತ್ತು. ಇದು ನನ್ನ ಪೀಳಿಗೆಯ ಜನ ಅನುಭವಿಸಿದ್ದು. ಆದರೆ ಇದು ನಮ್ಮ ಪೂರ್ವಿಕರು ಹಾಗೂ ನಮ್ಮ ನಂತರದ ಪೀಳಿಗೆಗಳ ಮೇಲೂ ರಕ್ತಸಿಕ್ತ ಪರಿಣಾಮಗಳನ್ನುಂಟುಮಾಡಿದೆ. ಆ ವರ್ಷಗಳಲ್ಲಿ ಮಿಲಿಯ ಸಂಖ್ಯೆಗಳಲ್ಲಿ ಮಕ್ಕಳ ಮತಿಗೆಡಿಸಿ ಅವರನ್ನು ನಂಬಿಕೆಗಳ ದಾಸರನ್ನಾಗಿಸಲಾಯಿತು. ಇರಾನಿನ ಇಸ್ಲಾಮಿಕ್ ಗಣರಾಜ್ಯ ಹಾಗೂ ಇಸ್ಲಾಮಿನ ರಾಜಕೀಯ ಶಕ್ತಿಗಳು ಆ ಪ್ರದೇಶದಲ್ಲಿ ಅಂದು ಎಸಗಿದ ಘೋರ ಕೃತ್ಯಗಳನ್ನು ೧೯೩೦ರಲ್ಲಿ ಫ್ಯಾಸಿಸ್ಟ್ ಶಕ್ತಿಗಳು ನಡೆಸಿದ ನರಮೇಧಗಳು ಹಾಗೂ ೧೯೯೦ರ ದಶಕಗಳಲ್ಲಿ ರುವಾಂಡ ಮತ್ತು ಇಂಡೋನೇಷ್ಯಾಗಳಲ್ಲಿ ಸಂಭವಿಸಿದ ಜನಾಂಗೀಯ ಕಗ್ಗೊಲೆಗಳಿಗೆ ಹೋಲಿಸಬಹುದಾಗಿದೆ. ಹೀಗಿದ್ದೂ ಜಗತ್ತಿನ ಬಹುತೇಕ ಜನಸಮುದಾಯಕ್ಕೆ ಈ ಅಪರಾಧಗಳ ಬಗ್ಗೆ ಅರಿವೇ ಆಗಲಿಲ್ಲ. ಮನುಕುಲದ ಮೇಲೆರಗಿದ ಈ ವಿನಾಶದ ವ್ಯಾಪ್ತಿ ಮತ್ತು ತೀವ್ರತೆಯ ಅರಿವಾಗಿದ್ದಿದ್ದರೆ ನಾಗರಿಕ ಜಗತ್ತು ಖಂಡಿತವಾಗಿ ಇದಕ್ಕಾಗಿ ದುಃಖಿಸಲೇಬೇಕಿತ್ತು.

ಸೆಪ್ಟೆಂಬರ್ ೧೧, ೨೦೦೨ರ ಘಟನೆ ಇಸ್ಲಾಮಿಕ್ ಭಯೋತ್ಪಾದನೆಯಡಿಯಲ್ಲೂ ಸುರಕ್ಷಿತವಾಗಿ ಬದುಕಬಲ್ಲೆವೆನ್ನುವವರಿಗೆ ವಾಸ್ತವದ ಭೀಕರತೆಯನ್ನು ತಿಳಿಸಿಕೊಟ್ಟಿದೆ. ತಾಲಿಬಾನಿನ ಆಡಳಿತದಲ್ಲಿ ನೆಲಕ್ಕುರುಳಿದ ಅನೇಕ ಮಹಿಳೆಯರ ಕರುಣಾಜನಕ ಪ್ರಕರಣಗಳನ್ನು ಅದು ಬಹಿರಂಗಗೊಳಿಸಿದೆ. ಸ್ವಲ್ಪಮಟ್ಟಿಗಾದರೂ ಅದು ಇಸ್ಲಾಮಿನ ನಿಜ ಸ್ವರೂಪವನ್ನು ಅನಾವರಣಗೊಳಿಸಿದೆ. ಈ ಬಗೆಯ ರಕ್ತದ ಕೋಡಿ ಹರಿದಿದ್ದು ಇಸ್ಲಾಮಿಕ್ ರೀತಿಯಿಂದ ಎನ್ನುವುದಕ್ಕೆ ಬದಲಾಗಿ ಇವೆಲ್ಲವೂ ಇಸ್ಲಾಮಿನಿಂದಲೇ ನಡೆದದ್ದು ಎನ್ನುವುದು ಸರಿಯೆನಿಸುತ್ತದೆ.

ನಾನು ೧೯೯೦ರಲ್ಲಿ ಪಾಶ್ಚಿಮಾತ್ಯ ದೇಶಗಳಿಗೆ ಬಂದಾಗ ಇಲ್ಲಿನ ಬಹುತೇಕ ಬುದ್ಧಿ ಜೀವಿಗಳು, ಸ್ತ್ರೀವಾದಿಗಳು, ವಿದ್ವತ್ ಪ್ರಪಂಚ ಹಾಗೂ ಮಾಧ್ಯಮದವರು ಇತರ ಧರ್ಮ ಮತ್ತು ಸಂಸ್ಕೃತಿಗಳನ್ನು ಗೌರವಿಸುವ ನೆಪದಲ್ಲಿ ಇಸ್ಲಾಂನ್ನು ಮೂಲಭೂತವಾದಿಗಳು ಮತ್ತು ಸೌಮ್ಯವಾದಿಗಳು, ಪ್ರಗತಿಪರರು ಮತ್ತು ಪ್ರತಿಗಾಮಿಗಳು, ಮದೀನಾದವರು ಮತ್ತು ಮೆಕ್ಕಾದವರು, ಜನಪರರು ಮತ್ತು ಜನಪರೇತರರು, ವಿಷಕಾರಿ ಹಾಗೂ ತಿನ್ನಲರ್ಹ ಮುಂತಾಗಿ ವಿಭಜಿಸಿ ಅದರ ಸಮರ್ಥನೆಯಲ್ಲಿ ತೊಡಗಿಕೊಂಡಿದ್ದರು. ಇಸ್ಲಾಮಿಕ್ ವಿನಾಶದ ನೇರ ಫಲಾನುಭವಿಗಳಾದ ನನ್ನಂತಹವರು ಭಯೋತ್ಪಾದನೆ, ದೌರ್ಜನ್ಯ ಹಾಗೂ ಲಿಂಗ ತಾರತಮ್ಯವನ್ನು ಈ ಬಗೆಯಲ್ಲಿ ಸಮರ್ಥಿಸುವ ಕೊನೆ ಮೊದಲಿಲ್ಲದ ಕತೆಗಳನ್ನು ಕೇಳುತ್ತಾ ಅವುಗಳನ್ನು ತಪ್ಪೆಂದು ಮನವರಿಕೆ ಮಾಡಿಕೊಡುವಷ್ಟರಲ್ಲಿ ಸಾಕಷ್ಟು ಬೆವರು ಹರಿಸಬೇಕಾಗುತ್ತದೆ. ಇಸ್ಲಾಮಿಕ್ ಕಗ್ಗೊಲೆಗಳಿಗೆ ಸಮಾನಾಂತರವಾಗಿ ಇಸ್ಲಾಮಿನ ಸಮರ್ಥಕರು ಇಸ್ಲಾಂ ಹಾಗೂ ರಾಜಕೀಯ ಇಸ್ಲಾಮಿನ ಬಗೆಗೆ ಜನರಿಗಿರುವ ಜಿಗುಪ್ಸೆಯನ್ನು ಪಲ್ಲಟ ಮಾಡಿ ಅದನ್ನು ಮೂಲಭೂತವಾದದ ಅಸಹಿಷ್ಣುತೆಗಷ್ಟಕ್ಕೇ ಸೀಮಿತಗೊಳಿಸಿಬಿಡುತ್ತಾರೆ. ಅವರು ಇಸ್ಲಾಂ ವಿರೋಧಿ ಹೋರಾಟವನ್ನು ಮೂಲಭೂತವಾದ ವಿರೋಧದ ಮಟ್ಟಕ್ಕೆ ತಗ್ಗಿಸಲು ಪ್ರಯತ್ನಿಸುತ್ತಾರೆ. ಜನರಿಗೆ ಜಿಗುಪ್ಸೆ ತಂದಿರುವುದು ಮೂಲಭೂತವಾದವೇ ವಿನಃ ಸತ್ಯವಾದ ಹಾಗೂ ನಿಜವಾದ ಇಸ್ಲಾಂ ಅಲ್ಲವೆಂದು ಹೇಳುತ್ತಾ ಹೋಗುತ್ತಾರೆ. ಅವರು ಇಸ್ಲಾಮಿನ ಸುಧಾರಣೆ ಹಾಗೂ ಸ್ತ್ರೀಯರ ಹಕ್ಕುಗಳಿಗೆ ಸಂಬಂಧಿಸಿದಂತೆ ಕುರಾನಿನ ಶ್ಲೋಕಗಳಿಗೆ ಭಾಷೆಯ ತಿರುವಿನಿಂದ ಬೇರೆಯದೇ ಅರ್ಥ ಹೇಳಿ ಧನಾತ್ಮಕವಾಗಿ ವ್ಯಾಖ್ಯಾನಿಸಲು ತೊಡಗುತ್ತಾರೆ. ಇಸ್ಲಾಮಿಕ್ ಸ್ತ್ರೀವಾದದ ಆಲೋಚನೆಗಳನ್ನು ಎತ್ತುತ್ತಾ ಮಹಿಳೆಯರ ವಿರುದ್ಧದ ಇಸ್ಲಾಮಿನ ಮೃಗೀಯ ಮುಖಕ್ಕೆ ಮಾನವೀಯತೆಯ ಮುಖವಾಡವನ್ನು ಅಂಟಿಸಲು ಶ್ರಮಿಸುತ್ತಾರೆ.

ಆದರೆ ಯಾವತ್ತಿಗೂ ಸತ್ಯವನ್ನು ಹೇಳಲೇಬೇಕಾಗುತ್ತದೆ. ಇಸ್ಲಾಮಿನ ಸಮರ್ಥಕರು ಜನಗಳ ಜೀವಗಳೊಡನೆ ಚೆಲ್ಲಾಟವಾಡುವುದಕ್ಕೆ ಇನ್ನು ಬಿಡಲಾಗದು. ನಾವುಗಳು ಗಟ್ಟಿಯಾಗಿ ಮತ್ತು ಸ್ಪಷ್ಟವಾಗಿ ಇವೆಲ್ಲವೂ ಇಸ್ಲಾಮಿನಿಂದಲೇ ಎಂದು ಹೇಳಬೇಕಾಗಿದೆ. ನಾವು ಕಂಡಿರುವುದು ಅಧಿಕಾರಾರೂಢ ಇಸ್ಲಾಮಿನ ವಾಸ್ತವಿಕತೆಯನ್ನು. ಪಾಶ್ಚಾತ್ಯ ಮುಕ್ತ ಚಿಂತಕರು ಹಾಗೂ ಎಡಪಂಥೀಯ ಬುದ್ಧಿಜೀವಿಗಳಿಗೆ ಪೂರ್ವದ ಸಾಮ್ರಾಜ್ಯಶಾಹಿ ಇತಿಹಾಸದ ಬಗೆಗೆ ಅಪರಾಧೀ ಪ್ರಜ್ಞೆಯಿದ್ದು ಈಗವರು ತೃತೀಯ ಜಗತ್ತಿನ ಎಲ್ಲಾ ಚಟುವಟಿಕೆಗಳ ಸಮರ್ಥನೆಯಲ್ಲಿ ತೊಡಗುತ್ತಾರೆ. ತೃತೀಯ ಜಗತ್ತಿನ ಜನತೆ ಇಸ್ಲಾಮಿನ ಜೀರ್ಣಗೊಂಡ ನಿಯಮಗಳಡಿಯೇ ನರಳಲು ಉತ್ಸುಕರಾಗಿರುವುದಾಗಿಯೂ ಹಾಗೂ ೨೧ನೆಯ ಶತಮಾನದ ನಾಗರಿಕತೆಯ ಸಾಧನೆಗಳಿಂದ ವಂಚಿತರಾಗಿ ಬದುಕುವುದರಲ್ಲೇ ಅವರು ಸುಖಿಗಳೆಂದು ಈ ಬುದ್ಧಿಜೀವಿಗಳು ಪರಿಗಣಿಸಿಬಿಟ್ಟಿದ್ದಾರೆ. ಇವರ ಪ್ರಕಾರ ಇಸ್ಲಾಮಿಕ್ ರಾಷ್ಟ್ರಗಳ ಜನತೆ ಇಸ್ಲಾಮಿಕ್ ಚಳವಳಿ ಹಾಗೂ ಇಸ್ಲಾಮಿಕ್ ಸರ್ಕಾರಗಳೊಡನೆಯೇ ಬೆರೆತು ಹೋಗಿದ್ದಾರೆ. ಆದರೆ ಇದು ವಾಸ್ತವಕ್ಕೆ ನೀಡಲಾಗಿರುವ ವಿರೂಪ ಚಿತ್ರಣ. ಇದೊಂದು ರೀತಿಯ ತಲೆಕೆಳಗಾದ ಸಾಮ್ರಾಜ್ಯಶಾಹಿ ನಡೆವಳಿಕೆ. ಈ ಚಿತ್ರಣದಲ್ಲಿ ರಾಜಕೀಯ ಇಸ್ಲಾಮಿಗೆ ವಿರುದ್ಧವಾಗಿ, ಧರ್ಮನಿರಪೇಕ್ಷ ಸಮಾಜಕ್ಕಾಗಿ ಹಾಗೂ ನಾಗರಿಕ ಹಕ್ಕುಗಳಿಗಾಗಿ ಹೋರಾಟ ನಡೆಸಿರುವ ಜನಗಳಿಗೆ ಜಾಗವೇ ಇಲ್ಲ. ಪಾಶ್ಚಾತ್ಯ ರಾಷ್ಟ್ರಗಳ ಸ್ವಾರ್ಥಿ ಹಾಗೂ ಕಪಟ ಬುದ್ಧಿಜೀವಿಗಳಲ್ಲಿ ಎಲ್ಲ ವಿಷಯಗಳಲ್ಲೂ ಈ ಬಗೆಯ ಅಪರಾಧಿ ಪ್ರಜ್ಞೆ ಗಸ್ತು ಹೊಡೆಯುತ್ತಿರುವುದನ್ನು ಕಂಡರೆ ದಿಗಿಲಾಗುತ್ತದೆ. ಅಭಿವ್ಯಕ್ತಿ ಸ್ವಾತಂತ್ರ್ಯ, ಲಿಂಗ ಸಮಾನತೆ ಹಾಗೂ ಧರ್ಮನಿರಪೇಕ್ಷ ಸಮಾಜದ ಆಕಾಂಕ್ಷೆ ಹಾಗೂ ಹಕ್ಕು ತೃತೀಯ ಜಗತ್ತಿನ ರಾಷ್ಟ್ರಗಳ ಜನತೆಗೂ ಇದೆ. ಆದರೆ ಈ ಬಗ್ಗೆ ವಾದ ಮಂಡಿಸಬೇಕಾಗಿರುವುದು ನಾಚಿಕೆಗೇಡಿನ ವಿಷಯ.

ಈ ಅಭಿಪ್ರಾಯಕ್ಕೆ ವಿರುದ್ಧವಾಗಿ ಕಳೆದ ೨೦ ವರ್ಷಗಳಿಂದಲೂ ಹೋರಾಟವೊಂದು ನಡೆಯುತ್ತಲೇ ಬಂದಿದೆ. ಈ ಸಂಘರ್ಷದಲ್ಲಿ ಮಧ್ಯಪ್ರಾಚ್ಯ ದೇಶಗಳು ಹಾಗೂ ಪಾಶ್ಚಾತ್ಯ ದೇಶಗಳ ಪ್ರಗತಿಪರ ಚಳುವಳಿಗಳದ್ದು ಒಂದು ಪಕ್ಷವಾದರೆ ರಾಜಕೀಯ ಇಸ್ಲಾಂನದ್ದು ಎದುರು ಪಕ್ಷವಾಗಿದೆ. ಇಸ್ಲಾಮಿಕ್ ರಾಷ್ಟ್ರಗಳಲ್ಲಿ ಜನತೆಯ ದಿನನಿತ್ಯದ ಬವಣೆಗಳು ಹಾಗೂ ಇರಾನಿನಲ್ಲಿ ಯುವಕರು ಮತ್ತು ಮಹಿಳೆಯರ ದೈನಂದಿನ ಪ್ರತಿರೋಧಗಳು ತೃತೀಯ ಜಗತ್ತಿನ ಜನಗಳ ವಾಸ್ತವಿಕ ಬೇಡಿಕೆಗಳಿಗೆ ಕನ್ನಡಿಗಳಾಗಿವೆ. ೧೯೭೯ರಿಂದೀಚೆಗೆ ಇರಾನಿನ ಸಾಮಾಜಿಕ ವ್ಯವಸ್ಥೆಯಲ್ಲಿ ನಾಟಕೀಯವಾದ ಹಾಗೂ ಆಳವಾದ ಬದಲಾವಣೆಗಳು ಘಟಿಸಿವೆ. ಧರ್ಮನಿರಪೇಕ್ಷತೆ, ನಿರೀಶ್ವರವಾದ, ಆಧುನಿಕ ಚಿಂತನೆಗಳು, ಸ್ತ್ರೀ ವಿಮುಕ್ತಿ, ಸಾಂಸ್ಕೃತಿಕ ಹಾಗೂ ನಾಗರಿಕ ಸ್ವಾತಂತ್ರ್ಯದ ಪರವಾದ ಚಳುವಳಿಗಳು ವ್ಯಾಪಕವಾಗಿ ಮತ್ತು ಗಾಢವಾಗಿ ಹರಡತೊಡಗಿವೆ. ಧರ್ಮ ಹಾಗೂ ಅಧಿಕಾರಶಾಹಿಗಳ ಸನಾತನ ನಡೆವಳಿಕೆಗಳ ಬಗೆಗೆ ಜನರ ಜಿಗುಪ್ಸೆ ತೀವ್ರವಾಗತೊಡಗಿದೆ.

ಮುಸ್ಲಿಂ ರಾಷ್ಟ್ರಗಳಲ್ಲಿ ಧರ್ಮನಿರಪೇಕ್ಷತೆಯನ್ನು ಸಕ್ರಿಯ ಹಾಗೂ ದೃಢ ಮನಸ್ಸಿನಿಂದ ಸಂರಕ್ಷಿಸಬೇಕಾಗಿದೆ. ಇದಕ್ಕೆ ಜಗತ್ತಿನ ಎಲ್ಲ ನಾಗರಿಕರಿಗೂ ಅನ್ವಯವಾಗುವ ಸಾರ್ವತ್ರಿಕ ಮಾನವ ಹಕ್ಕುಗಳನ್ನು ಮಾನದಂಡವಾಗಿಸಿಕೊಳ್ಳಬೇಕು. ಧರ್ಮನಿರಪೇಕ್ಷತೆಯೆಂಬುದು ರಾಜ್ಯಾಡಳಿತವನ್ನು ಧರ್ಮದಿಂದ ಬೇರ್ಪಡಿಸುವ, ಶಿಕ್ಷಣವನ್ನು ಧರ್ಮದಿಂದ ಪ್ರತ್ಯೇಕಿಸುವ, ಧಾರ್ಮಿಕತೆ ಹಾಗೂ ನಿರೀಶ್ವರವಾದಕ್ಕೆ ಸಮಾನ ಸ್ವಾತಂತ್ರ್ಯವಿರುವ, ಧರ್ಮ ವಿಮುಕ್ತ ಕಾನೂನುಗಳಿರುವ ಹಾಗೂ ಧರ್ಮವನ್ನು ವ್ಯಕ್ತಿಗತವಾದ ಖಾಸಗಿ ವಿಷಯವೆಂದು ಪರಿಗಣಿಸಲು ಪ್ರೇರಣೆ ನೀಡುವಂತಿರುವ ಪ್ರಣಾಲಿಕೆ. ಸಂಘಟಿತವಾದ ಧಾರ್ಮಿಕ ಶಕ್ತಿಯ ವಿರುದ್ಧ ವಿವೇಚನಾಯುತವಾದ ಹೋರಾಟವನ್ನು ನಾವಿಂದು ನಡೆಸಬೇಕಾಗಿದೆ. ಎಲ್ಲಾ ಧಾರ್ಮಿಕ ಪಂಗಡ, ಉಪಪಂಗಡಗಳನ್ನು ಕಾನೂನು ಮತ್ತು ನಿಯಮಗಳ ಅಧೀನದಡಿ ಖಾಸಗಿ ಚಟುವಟಿಕೆಗಳಾಗಿ ಅಧಿಕೃತವಾಗಿ ನೋಂದಾಯಿಸುವ ಅಗತ್ಯವಿದೆ.

ಈ ಎಲ್ಲ ಬೇಡಿಕೆಗಳು, ಆದರ್ಶಗಳು ಸಾಕಾರವಾಗಲು ನಮಗಿಂದು ಸದೃಢ ಜಂಟಿ ಬಲವೊಂದರ ಅಗತ್ಯವಿದೆ. ಕಳೆದ ಕೆಲವು ದಶಕಗಳಿಂದ ಮಧ್ಯ ಪ್ರಾಚ್ಯ ಮತ್ತು ಪಾಶ್ಚಿಮಾತ್ಯ ದೇಶಗಳಲ್ಲಿ ಇಸ್ಲಾಮೇತರ ವಿರೋಧೀ ಹೋರಾಟಗಳ ನಡುವೆ ಅಲ್ಲಲ್ಲಿ ರಾಜಕೀಯ ಇಸ್ಲಾಮಿನ ಕ್ರೌರ್ಯ – ಇದಕ್ಕೆ ಮಾಧ್ಯಮಗಳ, ಇಸ್ಲಾಂ ಸಮರ್ಥಕ ಬುದ್ಧಿ ಜೀವಿಗಳ ಹಾಗೂ ಪಾಶ್ಚಾತ್ಯ ಸರ್ಕಾರಗಳ ಪ್ರತಿಕ್ರಿಯೆಗಳು ಇಷ್ಟನ್ನೇ ಕಾಣುತ್ತಿದ್ದೇವೆ. ಆದರೆ ವಿಶ್ವದೆಲ್ಲೆಡೆ ಇಡೀ ಪರಿಸ್ಥಿತಿಯನ್ನೇ ಬದಲಿಸಬಲ್ಲ ಪ್ರಸ್ತುತ ನಿದ್ರಾವಸ್ಥೆಯಲ್ಲಿರುವ ದೈತ್ಯ ಶಕ್ತಿಯೊಂದಿದೆ. ಅದು ಈವರೆಗೂ ಶೋಚನೀಯವಾಗಿ ಸುಮ್ಮನಿದ್ದ ನಾಗರಿಕ ಸಮುದಾಯದ ಸದೃಢ ಶಕ್ತಿ. ಅದೀಗ ಮುನ್ನುಗ್ಗಿ ಬರಬೇಕಾಗಿದೆ. ಮನುಕುಲದ ಉತ್ತಮ ಭವಿಷ್ಯಕ್ಕಾಗಿ ಅದೀಗ ಮುಂಚೂಣಿಗೆ ಬರಲೇಬೇಕು. ಇಲ್ಲವಾದಲ್ಲಿ ಇಡೀ ಭೂಮಿಕೆಯನ್ನು ಅನಾಗರಿಕತೆಗೆ, ಭಯೋತ್ಪಾದನೆಗೆ ತೆರೆದಿಟ್ಟು ಆಹ್ವಾನ ನೀಡಿದಂತಾಗುತ್ತದೆ. ೨೧ನೆಯ ಶತಮಾನದ ಮುಂಬರುವ ವರ್ಷಗಳಲ್ಲಾದರೂ ಮಾನವೀಯತೆ ಇಸ್ಲಾಮಿನ ಮೇಲೆ ವಿಜಯ ಸ್ಥಾಪಿಸುವ ಘಟನೆಗೆ ನಾವು ಸಾಕ್ಷೀದಾರರಾಗುವ ಭರವಸೆಯೊಡನೆ ನಾನು ನನ್ನ ಮಾತುಗಳನ್ನು ಮುಕ್ತಾಯ ಮಾಡಲಿಚ್ಛಿಸುತ್ತೇನೆ. ಇಸ್ಲಾಮಿನಿಂದ ತುಳಿತಕ್ಕೊಳಗಾದ ಸಮುದಾಯಗಳಲ್ಲಿ ರಾಜಕೀಯ ಇಸ್ಲಾಮಿನ ವಿರುದ್ಧ ಹೋರಾಡಲು, ಲಿಂಗ ತಾರತಮ್ಯ ನಿವಾರಿಸಿ, ಸ್ವಾತಂತ್ರ್ಯ ಹಾಗೂ ಧರ್ಮನಿರಪೇಕ್ಷತೆಯನ್ನು ಬಲಪಡಿಸಲು ಜಗತ್ತಿನಾದ್ಯಂತ ಇರುವ ಎಲ್ಲಾ ಧರ್ಮನಿರಪೇಕ್ಷ ಶಕ್ತಿಗಳು ಹಾಗೂ ಸ್ವಾತಂತ್ರ್ಯ ಪ್ರೇಮಿಗಳು ಒಂದಾಗಿ ಜಂಟಿ ಯತ್ನವನ್ನಿಂದು ಆರಂಭಿಸಬೇಕಾಗಿದೆ.

---

ಮೂಲ ಪ್ರೇರಣೆ : **ಅಜಾಂ ಕಾಂಗ್ವಿಯಾನ್**, ಇರಾನಿನ ಲೇಖಕಿ.
ಭಾವಾನುವಾದ : ಸಿದ್ದರಾಜು, ಕೊತ್ತತ್ತಿ, ಮಂಡ್ಯ ತಾಲ್ಲೂಕು - ೫೭೧ ೪೦೨

# ನಗಣ್ಯ ವಿಷಯಗಳ ಆದ್ಯತೆ ಮುಖ್ಯವಾಹಿನಿ ಪತ್ರಿಕೆಗಳ ವರಸೆ

ಮ. ಶ್ರೀ. ಮುರಳಿಕೃಷ್ಣ





ಒಂದು ರಾಷ್ಟ್ರದ ಆಗು-ಹೋಗುಗಳಲ್ಲಿ ಪತ್ರಿಕಾ ರಂಗಕ್ಕೆ ವಿಶಿಷ್ಟವಾದ ಸ್ಥಾನವಿದೆ. ಪ್ರಜಾಪ್ರಭುತ್ವವಿರುವ ರಾಷ್ಟ್ರದಲ್ಲಿಯೂ ಅದರ ಪಾತ್ರ ಬಹಳ ಜವಾಬ್ದಾರಿಯುಳ್ಳದ್ದು. ಶಾಸಕಾಂಗ, ನ್ಯಾಯಾಂಗ, ಕಾರ್ಯಾಂಗ ನಂತರದ ಸ್ಥಾನ ಪತ್ರಿಕಾರಂಗಕ್ಕೆ. ಇದರಿಂದ ಅದರ ಮಹತ್ವವೆಷ್ಟು ಎಂದು ಅರಿಯಬಹುದು. ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಪ್ರಜೆಯೇ ಸಾರ್ವಭೌಮ. ಸಾಮಾನ್ಯ ಪ್ರಜೆಗಳ ದನಿಯಾಗಿ ಪತ್ರಿಕಾರಂಗ ಕಾರ್ಯವನ್ನು ನಿರ್ವಹಿಸಬೇಕು. ಸಂವಿಧಾನದಲ್ಲಿ ಪ್ರಜೆಗಳಿಗಿರುವ ಹಕ್ಕುಗಳನ್ನು ಅದು ಎತ್ತಿ ಹಿಡಿಯಬೇಕು. ಸಮಷ್ಟಿಯ ಹಿತದಲ್ಲಿ ಸರ್ಕಾರ ಕೆಲಸ ಮಾಡುತ್ತಿದೆಯೇ ಎಂದು ನಿಗಾ ವಹಿಸಬೇಕು. ಒಂದು ಪ್ರಜಾಪ್ರಭುತ್ವ ರಾಷ್ಟ್ರ ಸಮರ್ಪಕವಾಗಿ ಕಾರ್ಯನಿರ್ವಹಿಸುವಲ್ಲಿ ಪತ್ರಿಕಾರಂಗದ ಪಾತ್ರ ಗಣನೀಯ.

ಇತ್ತೀಚಿನ ವರ್ಷಗಳಲ್ಲಿ ಪತ್ರಿಕೆಗಳ, ಅದರಲ್ಲೂ ಮುಖ್ಯವಾಹಿನಿಯಲ್ಲಿರುವ ಪ್ರಮುಖ ಪತ್ರಿಕೆಗಳ ಮೊದಲ ಪುಟಗಳತ್ತ ಕಣ್ಣೋಡಿಸಿದಾಗ ''ಅಜರ್ - ಸಂಗೀತಾ ಪಾಣಿಗ್ರಹಣ'', ''ಸಚಿನ್ ತಂಡೂಲ್ಕರ್‌ಗೆ ಪುತ್ರ ಜನನ'', ''ರಾಹುಲ್ ದ್ರಾವಿಡ್ ವಿವಾಹ ಬೆಂಗಳೂರಿನಲ್ಲಿ'', ''ಮಿಸ್ ಇಂಡಿಯಾಳ ಶ್ವಾನ ಪ್ರೀತಿ'', ''ಕರಿಷ್ಮಾ ಕಪೂರ್ - ಅಭಿಷೇಕ್ ವಿವಾಹ ರದ್ದು'', ''ಅಮರ್ ಸಿಂಗ್ ಸಂತೋಷಕೂಟದಲ್ಲಿ ತಾರೆಗಳ ಆಕರ್ಷಣೆ'', ''ಹೃತಿಕ್ ಮದುವೆಗೆ ನೂಕು ನುಗ್ಗಲು'' ಮುಂತಾದ ಶಿರೋನಾಮೆಗಳು ದಪ್ಪಕ್ಷರಗಳಲ್ಲಿ ಪ್ರಕಟವಾಗುವುದನ್ನು ಕಾಣಬಹುದು. ಶಿರೋನಾಮೆಗಳ ಕೆಳಗೆ ದೀರ್ಘವೆನ್ನಬಹುದಾದ, ವರ್ಣರಂಜಿತವಾದ ವರದಿಗಳಿರುತ್ತವೆ. ತಾರೆಗಳು ಧರಿಸಿದ ವಸ್ತ್ರಗಳ, ಆಭರಣಗಳ ವಿವರಣೆ, ಜರುಗಿದ ಸಮಾರಂಭಗಳ ವಿವರಗಳು ವಿಶದವಾಗಿ ಪ್ರಕಟವಾಗಿರುತ್ತವೆ. ಹೃತಿಕ್ ರೋಷನ್ ವಿವಾಹ ಬೆಂಗಳೂರಿನಲ್ಲಿ ಜರುಗಿದಾಗ, ನಮ್ಮ ರಾಜ್ಯದ ಮುಖ್ಯ ಪತ್ರಿಕೆಗಳಲ್ಲಿ ಐದಾರು ದಿನ ಬರೀ ಅದರದೇ ಸುದ್ದಿ.

ತನಿಖಾ ವರದಿಗಳಿಗೆ ಖ್ಯಾತಿ ಪಡೆದಿರುವ ರಾಷ್ಟ್ರಮಟ್ಟದ ದಿನಪತ್ರಿಕೆಯೊಂದರ ಮುಖಪುಟದಲ್ಲಿ ಇತ್ತೀಚೆಗೆ ಪ್ರಕಟವಾದ ವರದಿ ಹೀಗಿದೆ: ಭಾರತದ ಶ್ರೇಷ್ಠ ಕ್ರಿಕೆಟ್ ಪಟುಗಳಲ್ಲಿ ಒಬ್ಬರಾದ ರಾಹುಲ್ ದ್ರಾವಿಡ್‌ನ ಮಡದಿಯಾಗಿರುವ ವಿಜೇತಳನ್ನು ಬೀಳ್ಕೊಡಲು ಅವಳ ಸಂಬಂಧಿಕರು ಹಾಗೂ ಸ್ನೇಹಿತೆಯರು ಪುಣೆ ರೈಲ್ವೆ ನಿಲ್ದಾಣದಲ್ಲಿ ಜಮಾಯಿಸಿದ್ದರು. ಒಂದು ಹೆಣ್ಣಿನ ಮದುವೆ ಬೇರೆ ಊರಿನಲ್ಲಿ ಜರುಗಿದಾಗ ಆಕೆಯ ಬಂಧು - ಬಳಗದವರು ರೈಲ್ವೇ ನಿಲ್ದಾಣಕ್ಕೊ ಅಥವಾ ಬಸ್ ನಿಲ್ದಾಣಕ್ಕೊ ಭೇಟಿ ನೀಡಿ, ಶುಭವನ್ನು ಹಾರೈಸುವುದು ಸರ್ವಸಾಮಾನ್ಯ ಸಂಗತಿ. ಈ ವಿಷಯ ಮುಖಪುಟದಲ್ಲಿ ಪ್ರಕಟವಾಗುವಷ್ಟು ವಿಶೇಷವೇ ?

ಪ್ರಮುಖ ಪತ್ರಿಕೆಗಳಲ್ಲಿ ಜಾಹೀರಾತುಗಳದ್ದೇ ಮೇಲ್ಗೈ. ಜಾಹೀರಾತುದಾರರೇ ಆ ಪತ್ರಿಕೆಗಳನ್ನು ನಿಯಂತ್ರಿಸುತ್ತಿದ್ದಾರೇನೋ ಎಂಬ ಭಾವನೆ ಬರುವಷ್ಟರಮಟ್ಟಿಗೆ ಅವು ಪುಟ ಪುಟಗಳಲ್ಲಿ ರಾರಾಜಿಸುತ್ತವೆ. ಕೆಲವು ಪತ್ರಿಕೆಗಳ ಪುರವಣಿಗಳಲ್ಲಂತೂ ಫ್ಯಾಶನ್, ಗ್ಲಾಮರ್‌ಗಳಿಗೇ ಅಗ್ರಸ್ಥಾನ. ಅವುಗಳನ್ನು ನೋಡಿದರೆ ಯಾವುದೋ ವಿದೇಶಿ ಪತ್ರಿಕೆಗಳ ನೆನಪು ಬರುವುದು ಸಹಜ. ದೇಶೀಯ ಸೊಗಡು ಸ್ವಲ್ಪವೂ ಇರುವುದಿಲ್ಲ. ಆದರೆ ಅಂತಹ ಪತ್ರಿಕೆಗಳೇ ಜಾಸ್ತಿಯಾಗಿ ಬಿಕರಿಯಾಗುತ್ತವೆ. ಏಕೆಂದರೆ ಅವೇ ಇಂದು ಯುವಜನರನ್ನು ಆಕರ್ಷಿಸಿರುವುದು.

ವಿಶೇಷವಲ್ಲದ ಸುದ್ದಿಗಳಿಗೆ ಸಿಗುವ ಆದ್ಯತೆ ಸಾಮೂಹಿಕ ಪ್ರತಿಭಟನೆ, ರ್‍ಯಾಲಿಗಳಿಗೆ ಸಿಗುವುದಿಲ್ಲ. ದಲಿತರು, ಕಾರ್ಮಿಕರು, ಕೃಷಿಕರು, ಕೂಲಿಗಳು ಹಾಗೂ ಶ್ರಮಿಕ ವರ್ಗದ ಇತರ ವಿಭಾಗದವರು, ದುರ್ಬಲ ವರ್ಗದವರು ಮತ್ತು ಸಮಾಜದ ಅಂಚಿನಲ್ಲಿರುವವರ ಹೋರಾಟಗಳಿಗೆ ಅಷ್ಟಾಗಿ ಸ್ಪಂದಿಸದಿರುವುದು ಒಳ್ಳೆಯ ಬೆಳವಣಿಗೆಯಲ್ಲ. ಒಂದು ನಿದರ್ಶನವನ್ನು ಗಮನಿಸೋಣ...

ಕಳೆದ ಒಂದು ದಶಕದಿಂದ ನಮ್ಮ ರಾಷ್ಟ್ರದಲ್ಲಿ ಜಾಗತೀಕರಣ, ಖಾಸಗೀಕರಣ ಹಾಗೂ ಉದಾರೀಕರಣ ನೀತಿಗಳನ್ನು ಅವ್ಯಾಹತವಾಗಿ ಜಾರಿಮಾಡುತ್ತಾ ಬಂದಿದೆ ಕೇಂದ್ರ ಸರ್ಕಾರ. ಹಲವು ರಾಜ್ಯ ಸರ್ಕಾರಗಳೂ ಇವುಗಳಿಗೆ ಪೂರಕವಾಗಿ ನೀತಿಗಳನ್ನು ರೂಪಿಸಿವೆ. ಸುಧಾರಣೆಗಳ ಹೆಸರಿನಲ್ಲಿ ಹಲವು ಬದಲಾವಣೆಗಳಾಗಿವೆ. ಬದಲಾವಣೆ ಸ್ವಾಗತಾರ್ಹ. ಆದರೆ ಈ ಬದಲಾವಣೆಗಳಿಂದ ಸಾಮಾನ್ಯ ಜನತೆಯ ಜೀವನದಲ್ಲಿ ಸುಧಾರಣೆಗಳಾಗಿವೆಯೇ ? ಇಲ್ಲ, ಬದಲಾಗಿ ಅವರು ಅನೇಕ ಬಗೆಯ ಸಂಕಷ್ಟಗಳನ್ನು ಎದುರಿಸುತ್ತಿದ್ದಾರೆ. ಅತ್ಯಧಿಕ ಸಂಖ್ಯೆಯಲ್ಲಿ ಉತ್ಪಾದನಾ ಘಟಕಗಳು ಮುಚ್ಚಿ, ಲಕ್ಷಾಂತರ ಕಾರ್ಮಿಕರು ಬೀದಿ ಪಾಲಾಗಿದ್ದಾರೆ. ಕಾರ್ಮಿಕರು ತಮಗೆ ಒದಗಿರುವ ಗಂಡಾಂತರಗಳ ಬಗ್ಗೆ ಸರ್ಕಾರದ ಗಮನ ಸೆಳೆಯಲು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿದ್ದಾರೆ. ಮತ ಪ್ರದರ್ಶನ, ರ್‍ಯಾಲಿ, ಹರತಾಳ, ಸಂಪು ಮುಂತಾದ ಚಟುವಟಿಕೆಗಳು ಜರುಗುತ್ತಿವೆ. ಇವುಗಳಲ್ಲಿ ಕಾರ್ಮಿಕರು ಬೃಹತ್ ಪ್ರಮಾಣದಲ್ಲಿ ಭಾಗವಹಿಸುತ್ತಿದ್ದಾರೆ. ಆದರೆ ಮುಖ್ಯವಾಹಿನಿಯಲ್ಲಿರುವ ಎಷ್ಟು ಪತ್ರಿಕೆಗಳಲ್ಲಿ ಈ ಕಾರ್ಯಕ್ರಮಗಳ ಬಗ್ಗೆ ಸೂಕ್ತವಾದ ಸ್ಥಳಾವಕಾಶ ಸಿಗುತ್ತಿದೆ ? ಎಲ್ಲೋ ಮೂಲೆಯಲ್ಲಿ ಎರಡೋ, ಮೂರೋ ವಾಕ್ಯಗಳಲ್ಲಿ ಅವುಗಳ ಉಲ್ಲೇಖವಿರುತ್ತದೆ. ಇದು ತರವೇ ?

ಕಾರ್ಮಿಕರ ಮುಷ್ಕರಗಳ ಬಗ್ಗೆ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗುವ ಸಂಪಾದಕೀಯಗಳನ್ನು ಗಮನಿಸಿದರೆ, ಅವುಗಳು ಯಾರ ಪರವಾಗಿವೆ ಎಂಬುದು ವೇದ್ಯವಾಗುತ್ತದೆ. ಮುಷ್ಕರ ಕಾರ್ಮಿಕರ ಬಳಿಯಿರುವ ಅಂತಿಮ ಅಸ್ತ್ರ. ಮುಷ್ಕರ ಹೂಡುವ ಮುನ್ನ ಅವರು ಇತರ ಪ್ರತಿಭಟನಾ ಸಾಧನಗಳನ್ನು ಬಳಸಿರುತ್ತಾರೆ. ಅವುಗಳಿಂದ ಯಾವುದೇ ರೀತಿಯ ಪ್ರತಿಫಲ ಸಿಗದಾಗ ಕಾರ್ಮಿಕ ಸಂಘಟನೆ ಮುಷ್ಕರದ ಹಾದಿಯನ್ನು ಹಿಡಿಯುತ್ತದೆ.

ಕಾರ್ಮಿಕ ಸಂಘಟನೆಗಳು ಬರೀ ಆರ್ಥಿಕ ಬೇಡಿಕೆಗಳಿಗಾಗಿ ಮಾತ್ರ ಹೋರಾಟ ಮಾಡುವುದಿಲ್ಲ. ಅವು ದುಡಿಯುವ ವರ್ಗದ ಮೇಲೆ ಆಗುವ ದಾಳಿಗಳ ವಿರುದ್ಧ ವಿಸ್ತೃತವಾದ ನೆಲೆಯಲ್ಲಿ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತವೆ.

ನಮ್ಮ ರಾಷ್ಟ್ರದಲ್ಲಿ ವರ್ತಕರು ತಮ್ಮ ಬೇಡಿಕೆಗಳಿಗಾಗಿ ಅಂಗಡಿಗಳನ್ನು ಮುಚ್ಚುತ್ತಾರೆ. ಇತ್ತೀಚೆಗೆ ವ್ಯಾಟ್ ಹಾಗೂ ಮಾರಾಟ ತೆರಿಗೆ ಹೆಚ್ಚಳದ ವಿರುದ್ಧ ಅವರು ಬೀದಿಗಿಳಿದು ಪ್ರತಿಭಟನೆ ಸಲ್ಲಿಸಿದರು. ಕೆಲವು ತಿಂಗಳ ಹಿಂದೆ ಲಾರಿ ಮಾಲೀಕರು ಮುಷ್ಕರ ಹೂಡಿದ್ದರು. ಸಿನಿಮಾ ಉದ್ಯಮದವರು ಈ ಹಾದಿಯನ್ನು ಹಿಡಿದಿದ್ದ ಉದಾಹರಣೆಗಳಿವೆ. ದೊಡ್ಡ ಉದ್ಯಮಪತಿಗಳು, ಬಂಡವಳಿಗರು ಪ್ರತಿವರ್ಷ ಆಯವ್ಯಯ ಮಂಡನೆಯಾಗುವ ಮುನ್ನ ನೇರವಾಗಿ ರಾಷ್ಟ್ರದ ಪ್ರಧಾನಿ ಹಾಗೂ ವಿತ್ತ ಮಂತ್ರಿಯವರನ್ನು ಭೇಟಿ ಮಾಡಿ ತಮ್ಮ ಬೇಡಿಕೆಗಳನ್ನು ಮಂಡಿಸುತ್ತಾರೆ. ಎಫ್‌ಐಸಿಸಿಐ ಮುಂತಾದ ಸಂಘಗಳನ್ನು ಕಟ್ಟಿಕೊಂಡು ತಮ್ಮ ವರ್ಗದ ಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು ಸೂಕ್ತವಾದ ವ್ಯವಸ್ಥೆಯನ್ನು ಮಾಡಿಕೊಳ್ಳುತ್ತಾರೆ. ದುಡಿಯುವ ವರ್ಗವನ್ನು ಪ್ರತಿನಿಧಿಸುವ ಜನ ಅಪಾರ. ಅವರು ತಮಗಾಗುತ್ತಿರುವ ಅನ್ಯಾಯಗಳ ವಿರುದ್ಧ ದನಿ ಎತ್ತಿದರೆ ಮಾಧ್ಯಮಗಳಲ್ಲಿ

ಸರಿಯಾದ ಪ್ರಸ್ತಾಪವಿರುವುದಿಲ್ಲ. ಬದಲಿಗೆ ಟೀಕೆಗಳ ಮಹಾಪೂರವೇ ಹರಿದಿರುತ್ತದೆ.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅನೇಕ ಪತ್ರಿಕೆಗಳು ನೀಡಿದ ಕೊಡುಗೆಗಳು ಅನನ್ಯ. ಜನಾಭಿಪ್ರಾಯ ಮೂಡಿಸುವಲ್ಲಿ ಅವು ವಹಿಸಿದ ಪಾತ್ರ ಶ್ಲಾಘನೀಯ. ಸಾರ್ವಜನಿಕ ಜೀವನದಲ್ಲಿದ್ದ ಕೆಲವು ಮುಂದಾಳುಗಳು ಹಾಗೂ ರಾಜಕೀಯ ನಾಯಕರು ಪತ್ರಿಕೆಗಳ ಮಾಲೀಕರು ಹಾಗೂ ಸಂಪಾದಕರಾಗಿದ್ದರು. ಅವರು ಆದರ್ಶಗಳಿಂದ ಪ್ರೇರೇಪಿತರಾಗಿ ಪತ್ರಿಕಾರಂಗಕ್ಕೆ ಪ್ರವೇಶ ಮಾಡಿದ್ದರು. ಅನೇಕರು ಬ್ರಿಟಿಷರ ಕೆಂಗಣ್ಣಿಗೆ ಸಿಲುಕಿ ನೊಂದರು. ಅನೇಕ ಕಷ್ಟ ನಷ್ಟಗಳಿಗೆ ಈಡಾದರು. ಮಹಾತ್ಮಾ ಗಾಂಧಿ, ಬಾಲ ಗಂಗಾಧರ ತಿಲಕ್ ಮುಂತಾದ ನಾಯಕರು ಪತ್ರಿಕಾ ರಂಗವನ್ನು ಸಮರ್ಥವಾಗಿ ಬಳಸಿಕೊಂಡು ಬ್ರಿಟಿಷರ ವಿರುದ್ಧ ಸಮರ ಹೂಡಿದ್ದನ್ನು ಸ್ಮರಿಸಬಹುದು. ಸ್ವಾತಂತ್ರ್ಯ ಸಿಕ್ಕ ನಂತರ ನಮ್ಮ ರಾಷ್ಟ್ರ ಅನೇಕ ಜ್ವಲಂತ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಅವುಗಳಲ್ಲಿ ಹಲವು ಬ್ರಿಟಿಷರ ಬಳುವಳಿಗಳಾಗಿದ್ದವು. ಅಂದು ಹೊಸ ರಾಷ್ಟ್ರವೊಂದನ್ನು ಕಟ್ಟುವ ಕಾರ್ಯದಲ್ಲಿ ಪತ್ರಿಕೆಗಳು ರಚನಾತ್ಮಕ ಪಾತ್ರವನ್ನು ವಹಿಸಿದ್ದವು. ಅಂದಿದ್ದ ಕೆಲವು ಪ್ರಮುಖ ಪತ್ರಿಕೆಗಳು ಈಗಲೂ ಇವೆ. ಆದರೆ ಈ ಪತ್ರಿಕೆಗಳು ಹಿಂದೆ ಹಾಗಿದ್ದವೇ ಎಂದು ಅಚ್ಚರಿಯ ಉದ್ಗಾರ ತೆಗೆಯುವಷ್ಟು ಅವು ಬದಲಾವಣೆಗೊಂಡಿವೆ.

ನಮ್ಮ ರಾಷ್ಟ್ರದ ದೊಡ್ಡ ಪತ್ರಿಕೆಗಳ ಒಡೆಯರು ದೊಡ್ಡ ಬಂಡವಾಳಿಗರು. ಅವರಿಗೆ ಅವರದೇ ಆದ ಆರ್ಥಿಕ, ರಾಜಕೀಯ ಹಾಗೂ ಇತರ ಹಿತಾಸಕ್ತಿಗಳಿರುತ್ತವೆ. ಸಂಪಾದಕೀಯ ವಿಷಯ, ತೀರ್ಮಾನಗಳಲ್ಲಿ ಮೂಗು ತೂರಿಸಿರುವ ಸಂದರ್ಭಗಳು ಅನೇಕ. ಹಿಂದೆ ಕೆಲವು ದಿಟ್ಟ ಸಂಪಾದಕರು ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿ ಕೆಲಸವನ್ನು ತೊರೆದಿದ್ದು ಉಂಟು. ಆದರೆ ಅಂತಹವರ ಸಂಖ್ಯೆ ಈಗ ವಿರಳ. ಹೀಗೆಂದಾಕ್ಷಣ ಹಿಂದಿದ್ದ ಪತ್ರಕರ್ತರು, ಸಂಪಾದಕರೆಲ್ಲಾ ಗುಣದ ಗಣಿಗಳಾಗಿದ್ದರೆಂದು ಭಾವಿಸಬೇಕಾಗಿಲ್ಲ. ಆದರೆ ಹೆಚ್ಚಿನವರ ದೃಷ್ಟಿಕೋನ ವಿಶಾಲವಾಗಿತ್ತು. ವೃತ್ತಿಪರತೆಯ ಜೊತೆ ವೃತ್ತಿ ಧರ್ಮವನ್ನು ಪರಿಪಾಲಿಸುವ ಪರಿಪಾಠವಿತ್ತು. ಅವರು ಸಿದ್ಧಪಡಿಸಿದ ವರದಿ ಇತ್ಯಾದಿಗಳಲ್ಲಿ ಅವರಿಗಿದ್ದ ಸಾಮಾಜಿಕ ಕಳಕಳಿ, ಬದ್ಧತೆ ವ್ಯಕ್ತವಾಗುತ್ತಿದ್ದವು. ಚಲಪತಿರಾವ್, ಪೋತನ್ ಜೋಸೆಫ್, ಖಾದ್ರಿ ಶಾಮಣ್ಣ, ಟಿಎಸ್ಆರ್, ನಿಖಿಲ್ ಚಕ್ರವರ್ತಿಯಂತಹ ದಿಗ್ಗಜರು ಇಂದಿನ ದಿನಗಳಲ್ಲಿ ಕಡಿಮೆಯಾಗುತ್ತಿರುವುದು ಆತಂಕಕಾರಿ ವಿಷಯ.

ಇತ್ತೀಚಿನ ದಶಕಗಳಲ್ಲಿ ಟಾಬ್ಲಾಯ್ಡ್‌ಗಳ ಸಂಖ್ಯೆ ಜಾಸ್ತಿಯಾಗುತ್ತಿದೆ. ಅವುಗಳಲ್ಲಿ ಹಿಂಸೆ, ಸೆಕ್ಸ್, ಅತ್ಯಾಚಾರ, ಕೊಲೆಯಂತಹ ವಿಷಯಗಳಿಗೆ ಮನ್ನಣೆ. ಸಮಾಜದಲ್ಲಿ ಹಿಂಸೆ ಮುಂತಾದ ಋಣಾತ್ಮಕ ಬೆಳವಣಿಗೆಗಳು ಅಧಿಕವಾಗುತ್ತಿರುವಾಗ, ಪತ್ರಿಕೆಗಳು ಅವುಗಳನ್ನು ವರದಿ ಮಾಡುವುದರಲ್ಲಿ ತಪ್ಪೇನಿಲ್ಲ ಎಂಬುದು ಸಂಪಾದಕರ ಸಮಜಾಯಿಷಿ. ಸರಿ, ಆದರೆ ಅಂತಹ ವಿಷಯಗಳನ್ನು ಮುಖಪುಟದಲ್ಲಿ ವಿಜೃಂಭಿಸಬೇಕೇ ಎಂಬುದೇ ಮುಖ್ಯ ವಿಚಾರ. ಪೀತ ಪತ್ರಿಕೆಗಳ ಪಾತ್ರವಂತೂ ತಿಳಿದ ವಿಚಾರವೇ. ಬ್ಲಾಕ್‌ಮೇಲ್ ಮಾಡಿ ವಾಮ ಮಾರ್ಗದಿಂದ ಹಣವನ್ನು ಗಳಿಸುವುದೇ ಅವುಗಳ ಧ್ಯೇಯ.

ಹೀಗೆ, ಪತ್ರಿಕಾರಂಗದಲ್ಲಿ ಕೆಲವು ನಕಾರಾತ್ಮಕ ಅಂಶಗಳು ಕಂಡುಬರುತ್ತವೆ. ಪತ್ರಿಕೆಗಳು ವಿಕಾಸಶೀಲ ಪತ್ರಿಕೋದ್ಯಮಕ್ಕೆ (ಡೆವಲಪ್‌ಮೆಂಟ್ ಜರ್ನಲಿಸಂ) ಇನ್ನೂ ಹೆಚ್ಚಿನ ಆದ್ಯತೆ ನೀಡಬೇಕು. ಶ್ರೀಸಾಮಾನ್ಯನ ದನಿಯಾದಾಗ ಮಾತ್ರ ಪತ್ರಿಕೆಗಳು ರಾಷ್ಟ್ರದ ಏಳಿಗೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಬಹುದು.

**ಮ. ಶ್ರೀ. ಮುರಳಿಕೃಷ್ಣ**
ನಂ. ೧೦೦, ೨ನೇ 'ಎ' ಅಡ್ಡರಸ್ತೆ, ಗವಿಪುರಂ ಬಡಾವಣೆ
ಬೆಂಗಳೂರು - ೫೬೦ ೦೧೯

# ಜಾತ್ರೆ

೧

ಅಪ್ಪ ಕೊಟ್ಟ
ರೂಪಾಯಿ ಜೋಡಿ ಬಿಲ್ಲೆಗಳ ಚಡ್ಡಿ ಜೇಬಿಗಿಳಿಬಿಟ್ಟು
ಹಾರು ಹೆಜ್ಜೆಗಳಿಟ್ಟರೆ ತೆರೆದುಕೊಳ್ಳುತ್ತಿತ್ತು
ಜಾತ್ರೆ ಬಯಲು, ವರುಷ ಪೂರ್ತಿ ಕಟ್ಟಿಕೊಂಡ
ಬಯಕೆಗಳ ಬಾಗಿಲು

ಕಿಂದರಜೋಗಿಯ ಜಾದೂ ಲೋಕವೆ ಇರಬೇಕು
ಜಾತ್ರೆ. ಹೆಜ್ಜೆ ಹೆಜ್ಜೆಗೂ ಕಣ್ಣರಳಿಸಬೇಕು
ಮೂಗರಳಿಸಬೇಕು – ನಿಟ್ಟುಸಿರುಗಳ ಬಿಡಬೇಕು.

ಗಾಜಿನ ಗಳಾಸಿನೊಳಗೆ ತುಂಬಿಸಿಟ್ಟ ಅರಿಶಿಣ ಕೆಂಪು
ಬಣ್ಣದ ಷರಬತ್ತು. ಘಮ್ಮೆನ್ನುತ್ತವೆ ಹೆಚ್ಚಿಟ್ಟ ನಿಂಬೆ ಹೋಳುಗಳು
ಮುತ್ತುವ ನೊಣಗಳ ಒತ್ತರಿಸುತ್ತ ಕೂಗುತ್ತಾನೆ ಖಲೀಲು
ಹತ್ತೆ ಪೈಸಕ್ಕೊಂದು ಗಳಾಸು, ತಾಜಾ ಮಾಲು.

ಸಮಾಜ ಪಾಠದ ಪಿರಿಮಿಡ್ಡುಗಳಂತೆ ಪೇರಿಸಿಟ್ಟ
ಮಿಠಾಯಿ ಮೈಸೂರುಪಾಕು ಜಿಲೇಬಿ
ಗುಡ್ಡೆ ಗುಡ್ಡೆ ಸುರಿದ ಬೆಂಡು ಬತ್ತಾಸು ಕಳ್ಳೆಪುರಿ
ಅಂಗಿ ನೆನೆಸುತ್ತದೆ ತಂತಾನೆ ತೊಟ್ಟಿಕ್ಕುವ ಬಾಯಿರಸ

ಹಾರದ ಇಮಾನ ಟಿಕ್ಕುಟಿಕ್ಕೆನ್ನದ ಗಡಿಯಾರ
ತಾಜಮಹಲು ಎದುರಿಗಿರಿಸುವ ಪಿಚ್ಚರು ಪೆಟ್ಟಿಗೆ
ಅಂಗೈನಲ್ಲಿ ಅರಮನೆ
ಜಗತ್ತೆಂದರೆ ಇಷ್ಟೇನೆ !

ನಿಂತು ನೋಡಿ ಹಗೂರಾಗಬೇಕು
ಮತ್ತೆ ಮುಂದೆ ಸಾಗಬೇಕು



೨

ಪತ್ರದ ಬೆನ್ನೇರಿ ಬರುವ ಸಂಭ್ರಮ
ಇಸ್ತ್ರಿಯಾಗುವ ಸಂಬಂಧ
ಟ್ರಂಕೊಳಗಿನ ಗೆರೆ ಕೆಡದ ಬಟ್ಟೆಗಳಿಗೆ ಬೆಳಕಿನ ಯೋಗ

ಕಳ್ಳೆಪುರಿ ಬಾಳೆ ಹೂ ಚೆಂಡುಗಳಿಗೆ
ರಾಜಬೀದಿಯೊಳಗೆ ಹರಿಯುವ ತೇರಿನ ಗುರಿ
ಗುರಿ ಮುಟ್ಟಿದಾಗ ಎದೆಯೊಳಗೆ ನೂರು ನಗಾರಿ

ಸದ್ದು ಇರುವಾಗಲೇ
ಮುಗಿದು ಬಿಡುತ್ತದೆ ಜಾತ್ರೆ
ಮರಳುತ್ತಾರೆ ನಂತರು – ಮತ್ತೆ ವರುಷ ಕಾಯಬೇಕು

೩

ನೆಲ ಮುಗಿಲುಗಳ ಅಳೆವ
ರಂಕಲುರಾಟೆಯ ಗುಂಗುಡುವ ಸದ್ದು
ಎದೆಯೊಳಗೆ ಹಸಿರಾಗುಳಿದ ಬತ್ತಿದ ಹೊಳೆ

ಹರಾಜಾಗಲು ಹಾತೊರೆವ ಮುಖವಾಡಗಳು
ನಕ್ಷೆಯಿಲ್ಲದ ಕಕ್ಷೆಯ ಜಾಗತಿಕ ಜಾತ್ರೆಯಲಿ
ಕೊನೆಯಾಗದ ಪಯಣ; ಇಂದುಮುಖಿ
ಗೊಂದಲಪುರಿಯಲಿ ಕಳೆದುಹೋದಳು.

**ರಘುನಾಥ ಚ. ಹ.**
ಶ್ರೀರಂಗ ನಿಲಯ, ಬೋವಿ ಕಾಲೋನಿ, ನಾಗಶೆಟ್ಟಿಹಳ್ಳಿ
ಬೆಂಗಳೂರು - ೫೬೦ ೦೯೪

ಒಳ್ಳೆಯ ಓದು

**ದಲಿತ ಸಾಹಿತ್ಯ ದರ್ಶನ** (ಲೇಖನಗಳು)

*ಸಂ. ಡಾ॥ ವಿ. ಮುನಿವೆಂಕಟಪ್ಪ*

**ಪುಟ : ೨೦೦** **ಬೆಲೆ : ರೂ. ೫೦**

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಹೆಬ್ಬೆರಳನ್ನೇ ಗುರುದಕ್ಷಿಣೆಯಾಗಿ ನೀಡಿದ್ದು ಆದರ್ಶವೆಂಬಂತೆ ಚಿತ್ರಿಸಲ್ಪಟ್ಟ ಸಾಹಿತ್ಯ ನಮ್ಮಲ್ಲಿದೆ. ಶೋಷಣೆಯನ್ನು ಸಹಿಸಿ ಒಪ್ಪಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಕ್ರಾಂತಿ ಪುರುಷರಾಗಿ ಬಂದು ಜನರನ್ನು ಎಚ್ಚರಿಸಿದವರು ಬಸವಣ್ಣ-ಅಂಬೇಡ್ಕರ್ ಮುಂತಾದವರು. 'ಚೋಮನ ದುಡಿ' ರಾಷ್ಟ್ರಮಟ್ಟದಲ್ಲಿ ಗುರುತಿಸಲ್ಪಟ್ಟಾಗ ದಲಿತ ಸಾಹಿತ್ಯ-ಬಂಡಾಯ ಚಳವಳಿಗೊಂದು ಹೊಸ ಆಯಾಮ ಸಿಕ್ಕಿತು. ದಲಿತರ ಬಗ್ಗೆ ಇತರರಿಂದ ಬಂದ ಸಾಹಿತ್ಯಕ್ಕೆ ಬದಲಾಗಿ ದಲಿತರಿಂದಲೇ ಸ್ವಾನುಭವದಿಂದ ಸಾಹಿತ್ಯ ರಚನೆಯಾಗತೊಡಗಿತು. ಇದು ಅಂಥ ದಲಿತ ಸಾಹಿತ್ಯದ ಅವಲೋಕನ.

**ಕನಕಾಂಬರಿಯೊಂದಿಗೆ ಕಂಪಿನ ಪಯಣ** (ಕತೆಗಳು)

*ಪ್ರೊ॥ ಜಿ. ಎಚ್. ಹನ್ನೆರಡುಮಠ*

**ಪುಟ : ೧೮೩** **ಬೆಲೆ : ರೂ. ೪೦**

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಈ ಕಥಾ ಸಂಕಲನದ ನಿರೂಪಣಾ ಶೈಲಿ ನೇರ ಮತ್ತು ಖಚಿತ. ನೇರವಾದ ನಡೆ-ನುಡಿಗಳಿಂದ ಮನುಷ್ಯ ಆತ್ಮೀಯನಾದಂತೆ ಕಥೆಗಳೂ ಆಪ್ತವಾಗಿ ಕಂಡುಬರುತ್ತವೆ. ಇಲ್ಲಿನ ಕಥಾವಸ್ತು ಕೌಟುಂಬಿಕ ಸಂಬಂಧ-ಸಮಸ್ಯೆಗಳಿಗೆ ಮನುಷ್ಯ ಸ್ಪಂದಿಸುವ ರೀತಿಯ ವಿಧವಿಧವಾದ ನೋಟಗಳು. ಅತ್ಯಂತ ಆಪ್ತವಲಯದಲ್ಲೂ ಕ್ರೂರ ನಡವಳಿಕೆಗಳು ಹಾಗೂ ಅಪರಿಚಿತ ಮುಖಗಳಿಂದ ಆತ್ಮೀಯ ಭಾವ ಹೇಗೆ ಸಾಧ್ಯವಾಗುತ್ತದೆ ? ನಾವು ಜವಾಬ್ದಾರಿಯ ಜಾಗದಲ್ಲಿದ್ದು ಕಲಿಸುತ್ತಿರುವ ಮೌಲ್ಯಗಳೇನು ? ಈ ಕಥೆಗಳು ಅಂಥ ಯೋಚನೆಗೆ ಹಚ್ಚುತ್ತವೆ.

**ಮಾಚಿಯ ಕಥನಗೀತಗಳು**

*ಡಾ॥ ಎಲ್. ಆರ್. ಹೆಗಡೆ*

**ಪುಟ : ೧೪೧** **ಬೆಲೆ : ರೂ. ೪೦**

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಲಿಪಿಯು ಸಾರ್ವತ್ರಿಕವಾಗಿ ಬಳಕೆಯಿಲ್ಲದ ಕಾರಣ ಪ್ರಾಚೀನರಿಂದ ಜನಪದ ಸಾಹಿತ್ಯ ಮೌಖಿಕವಾಗಿ ಕಾಪಾಡಲ್ಪಟ್ಟು ನೀಳ್ಗವಿತೆಗಳಾಗಿ ಉಳಿದು ಅಂದಿನ ಜನರ ಬದುಕಿಗೆ ಸಾಕ್ಷಿಯಾಗಿದೆ. ಕಾಲಾಂತರದಲ್ಲಿ ಬಹಳಷ್ಟು ಕಾಲ್ಪನಿಕ ಕಥೆಗಳು ಸೇರಿಕೊಂಡರೂ ಮೂಲವನ್ನು ಕೆದಕಿದಾಗ ಅಲ್ಲಿ ಜನಪದರ ನೋವು-ನಲಿವಿನ ಅರಿವಾಗುತ್ತದೆ. ಮಾಚಿ ಎಂಬ ಮಹಿಳೆಯೊಬ್ಬರಿಂದ ಇಲ್ಲಿನ ಕಥನಗೀತಗಳನ್ನು ಸಂಗ್ರಹಿಸಲಾಗಿದೆ. ಸಾಹಿತ್ಯ ಬದುಕಿನ ಅವಿಭಾಜ್ಯ ಅಂಗ ಎಂಬುದು ನಿಚ್ಚಳವಾಗಿ ಪೂರ್ಣವಾಗಿ ಪ್ರತಿಬಿಂಬಿತವಾಗುವುದು ಇಂಥ ಕಥನಗಳಲ್ಲಿ ಮಾತ್ರ.

**ಪಾಶ್ಚಿಮಾತ್ಯ ಸಾಹಿತ್ಯ ವಿಮರ್ಶೆಯ ಪಕ್ಷಿನೋಟ**

*ಪ್ರೊ॥ ಜಿ. ಶಂಕರಯ್ಯ (ಸಂಗ್ರಹ)*

**ಪುಟ : ೪೪೪** **ಬೆಲೆ : ರೂ. ೨೦೦**

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಪಾಶ್ಚಿಮಾತ್ಯ ಸಾಹಿತ್ಯ ವಿಮರ್ಶೆಯ ಒಂದು ಸುದೀರ್ಘ ಬೆಳವಣಿಗೆಯನ್ನು ನಮ್ಮ ಮುಂದೆ ತಂದು ನಿಲ್ಲಿಸಲಾಗಿದೆ. ಬೃಹತ್ ಗಾತ್ರದಲ್ಲಿ ಬೆಳೆದ ಸಾಹಿತ್ಯಕ್ಕೆ ಅನುಗುಣವಾಗಿ ಅದನ್ನು ವಿಮರ್ಶಿಸುವುದೂ ತೀರ ಅವಶ್ಯ. ಗ್ರಂಥಗಳು ಸಮಾಜಕ್ಕೆ ಏನನ್ನು ಕೊಟ್ಟವೆ ಅಥವಾ ಏನನ್ನು ಕೊಡಬೇಕಾಗಿತ್ತು ಎಂಬ ವಿಮರ್ಶೆ ಅತ್ಯಂತ ಆರೋಗ್ಯಕರ ಹಾಗೂ ಸ್ವಾಗತಾರ್ಹ. ಈ ಕೃತಿ ಸಾಹಿತ್ಯ ವಿಮರ್ಶೆಯ ಆಂಗ್ಲಭಾಷೆಯ ಗ್ರಂಥವೊಂದರ ಸಂಗ್ರಹಾನುವಾದ. ಸಾಹಿತ್ಯದ ವಿದ್ಯಾರ್ಥಿಗಳಿಗೆ ಅತ್ಯಂತ ಉಪಯುಕ್ತವಾದ ಕೈಪಿಡಿಯಾಗಬಲ್ಲದು.

**ಯಕ್ಷಗಾನ ಕಲಾದರ್ಶನ** (ಲೇಖನಗಳು)

*ಪ್ರೊ॥ ಟಿ. ಕೇಶವ ಭಟ್ಟ*

**ಪುಟ : ೧೨೭** **ಬೆಲೆ : ರೂ. ೪೦**

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಚಂಡೆ-ಮದ್ದಳೆಗಳು ಪ್ರಮುಖವಾಗಿದ್ದು ಭರ್ಜರಿ ವೇಷಭೂಷಣಗಳೊಂದಿಗೆ ರಂಗಸ್ಥಳದಲ್ಲಿ ಒಂದು ಕಥಾಭಾಗವನ್ನು ಆಡಿ ತೋರಿಸುವ ಕಲಾ ಮಾಧ್ಯಮವೇ ಯಕ್ಷಗಾನ. ಭಾಗವತರು ಹಾಡುವ ಪದಗಳಿಗೆ ಸರಿಯಾಗಿ ಕುಣಿಯುತ್ತ ನಂತರ ಅರ್ಥ ವಿವರಿಸುವ ಪಾತ್ರಧಾರಿ ಕಲಾವಿದರು ತಮ್ಮ ವಾಕ್ ಚಾತುರ್ಯಕ್ಕೆ ಪ್ರೇಕ್ಷಕರಿಂದ ಹೆಚ್ಚಿನ ಮನ್ನಣೆ ಗಳಿಸುತ್ತಾರೆ. ಪಾತ್ರಧಾರಿಗಳಿಗೆ ಸ್ವತಂತ್ರವಾಗಿ ಮಾತನಾಡುವ ಅವಕಾಶ. ಸಂಗೀತ ಸಾಹಿತ್ಯ ನೃತ್ಯಗಳಿಂದ ಕೂಡಿದ ಯಕ್ಷಗಾನ ಮತ್ತು ತಾಳ ಮದ್ದಳೆಗಳ ಬಗ್ಗೆ ಹೆಚ್ಚಿನ ಮಾಹಿತಿ ತಿಳಿಸುವ ಪುಸ್ತಕ.

**ಸಾಹಿತ್ಯ ಸುರಭಿ** (ವಿಮರ್ಶಾ ಲೇಖನಗಳು)

*ಪ್ರೊ॥ ದೊಡ್ಡರಂಗೇಗೌಡ*

**ಪುಟ : ೧೩೩** **ಬೆಲೆ : ರೂ. ೩೫**

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಲೇಖನಗಳಲ್ಲಿಯೂ ಕಾವ್ಯದ ಸೊಗಸನ್ನು ಮೂಡಿಸಲು ಕವಿಗಳಲ್ಲದೆ ಬೇರೆ ಯಾರಿಂದ ಸಾಧ್ಯ ? ಕವಿ ಹಾಗೂ ಕವಿತೆಗಳ ಬಗ್ಗೆ ಕವಿಗಳೇ ವಿಮರ್ಶೆ ಮಾಡಿದಾಗ ಅದು ಎಷ್ಟೊಂದು ಆಪ್ಯಾಯಮಾನ ! ಸಹಜ ಪ್ರತಿಭೆಯಿಂದ ಕಂಗೊಳಿಸಿದ ಇತ್ತೀಚಿನ ಹೊಸಗನ್ನಡದ ಕವಿಗಳ ವಿದ್ವತ್ತಿಗೆ ಮಾರುಹೋದ ಕವಿ ದೊಡ್ಡರಂಗೇಗೌಡರು ಕಾವ್ಯದ ಉತ್ತಮ ವಿಮರ್ಶೆಯನ್ನು ಮಾಡಿದ್ದಾರೆ. ನವ್ಯ ಶೃಂಗಾರ ರಮ್ಯ ಕಾವ್ಯಗಳು ಮಾತ್ರವಲ್ಲದೆ ಪ್ರಗತಿ ಪಂಥದ ಬಡವರ ಗುಡಿಸಲುಗಳನ್ನು ಪರಿಚಯಿಸುವ ಕವನಗಳೂ ಇಲ್ಲಿ ವಿಮರ್ಶೆಗೊಳಪಟ್ಟಿವೆ.

**ಮಕ್ಕಳ ಎರಡು ನಾಟಕಗಳು**

*ವೈದೇಹಿ*

**ಪುಟ : ೫೧** **ಬೆಲೆ : ರೂ. ೨೦**

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಮಕ್ಕಳ ಕನಸಿನ ಲೋಕ ಅದ್ಭುತ. ಅವರ ಕಲ್ಪನೆಗಳೂ ಅಪಾರ. ಆಕಾಶದ ಅರ್ಧಚಂದ್ರನನ್ನೂ ಸಿಹಿಯಾದ ಮಿಠಾಯಿಯಂತೆ ಕಲ್ಪಿಸಿಕೊಳ್ಳಬಲ್ಲರು. ನಿಸರ್ಗದ ಸಹಜ ವಾತಾವರಣದಿಂದ ದೂರಸರಿದು ಆ ಜಾಗಕ್ಕೆ ಬದಲೀ ವ್ಯವಸ್ಥೆ ಮಾಡಿದ ಮನುಷ್ಯನ ತಂತ್ರಗಾರಿಕೆಯನ್ನು ಇಲ್ಲಿನ ನಾಟಕ ''ಹಕ್ಕಿ ಹಾಡು'' ಪ್ರಶ್ನಿಸುತ್ತದೆ. ಸಹಜತೆ-ಕೃತಕತೆಗಳ ವ್ಯತ್ಯಾಸವನ್ನು ಮಕ್ಕಳ ಮನಸ್ಸಿಗೆ ನಾಟುವಂತೆ ತಿಳಿಸುತ್ತ ಪರಿಸರ ಪ್ರೇಮವನ್ನು ಎಳೆಯರಲ್ಲಿ ಮೂಡಿಸುತ್ತದೆ. ಮಕ್ಕಳಿಂದಲೇ ಅಭಿನಯಿಸಲ್ಪಟ್ಟಾಗ ನಾಟಕಗಳ ಶೋಭೆ ಹೆಚ್ಚು.

**ಕಲ್ಹಣನ ರಾಜತರಂಗಿಣಿ**

*ಅನುವಾದ : ನೀರ್ಪಾಜೆ ಭೀಮಭಟ್ಟ*

**ಪುಟ : ೫೮೪** **ಬೆಲೆ : ರೂ. ೧೫೦**

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಇತಿಹಾಸದಲ್ಲಿ ಕಾಶ್ಮೀರದ ಚರಿತ್ರೆ ರಕ್ತರಂಜಿತ ! ಕವಿ ಕಲ್ಹಣನ ರಾಜತರಂಗಿಣಿ ಪ್ರಾಚೀನ ಕಶ್ಮೀರದ ರಾಜ್ಯಾಡಳಿತವನ್ನು ವಿಸ್ತಾರವಾಗಿ ತಿಳಿಸುವ ಎಂಟು ತರಂಗಗಳನ್ನೊಳಗೊಂಡ ಚರಿತ್ರೆ. ಮೂಲ ಸಂಸ್ಕೃತದ ಈ ಕೃತಿ ನಾಲ್ಕು ವಿದೇಶಿ ಭಾಷೆಗಳಿಗೆ ಅನುವಾದಗೊಂಡು, ಭಾರತೀಯ ಭಾಷೆ ಹಿಂದಿ-ಮರಾಠಿಯಲ್ಲಿ ಲಭ್ಯವಿದ್ದು ಕನ್ನಡದಲ್ಲಿ ತೃತೀಯ ಮುದ್ರಣ ಕಂಡಿದೆ. ಹಿಮಗಿರಿಯಿಂದ ನದಿಗಳು ಹರಿದಂತೆ ಕಾಶ್ಮೀರದ ನೆಲದಲ್ಲಿ ಅಂದಿನಿಂದಲೂ ನೆತ್ತರ ಹೊಳೆ ಹರಿಯುತ್ತಲೇ ಇದೆ. ಕಾಶ್ಮೀರದ ರಾಜವಂಶಗಳ ಏಳುಬೀಳಿನ ಸಾಹಸದ ಕಥಾನಕ.

– ಇಂದಿರಾ ಕುಮಾರಿ



"**ಭಾ**ರತದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಬೀರ್ಸಾ ಮುಂಡಾನ ಹೆಸರು ಮತ್ತು ಅವನ ಬಂಡಾಯ ಎಲ್ಲ ವಿಧಗಳಲ್ಲಿಯೂ ಮುಖ್ಯ ಮತ್ತು ಸ್ಮರಣೀಯವಾದವು. ಈ ದೇಶದ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯಲ್ಲಿ ಈ ಬಂಡಾಯದ ಹುಟ್ಟು ಮತ್ತು ಬೆಳವಣಿಗೆಗಳು ಕೇವಲ ವಿದೇಶಿ ಸರಕಾರದ ವಿರುದ್ಧವಷ್ಟೇ ಆಗಿರದೆ, ಅದರೊಂದಿಗೇ ಆಗಿನ ಫ್ಯೂಡಲ್ (ಊಳಿಗಮಾನ್ಯ) ಪದ್ಧತಿಯ ವಿರುದ್ಧವೂ ಸಹ ಆಗಿದ್ದವು. ಇತಿಹಾಸದ ಒಟ್ಟಾರೆ ವಿಶ್ಲೇಷಣೆ ಇಲ್ಲದೆ ಬೀರ್ಸಾ ಮತ್ತು ಅವನ ಬಂಡಾಯದ ವಿಶ್ಲೇಷಣೆ ಅಸಾಧ್ಯವೇ ಸರಿ.'' ಲೇಖಕರ ಈ ಮುನ್ನುಡಿಯ ಮಾತುಗಳು ಜಗತ್ತಿನ ಯಾವ ಆದಿವಾಸಿ ಬುಡಕಟ್ಟುಗಳ ಬಂಡಾಯಗಾರನಿಗೂ ಸಹ ಅನ್ವಯವಾಗುವಂತಹ ಮಾತುಗಳೇ ಸರಿ. ಆದರೆ ಕಾಲ ದೇಶ ಸನ್ನಿವೇಶಗಳಲ್ಲಿ ಸ್ವಲ್ಪ ವ್ಯತ್ಯಾಸ ಇರುತ್ತದೆ ಅಷ್ಟೆ. ಸಾಮಾನ್ಯವಾಗಿ ಅರಣ್ಯವಾಸಿಗಳಾದ ಆದಿವಾಸಿ ಜನಾಂಗಗಳನ್ನು ನಾಗರಿಕ ಜಗತ್ತು ಯಾವತ್ತೂ ಶೋಷಣೆಗೆ ಒಳಗುಮಾಡುತ್ತಲೇ ಬಂದಿದೆ. ಆದರೆ ನಾವು ಇಂಥ ಶೋಷಣೆಗೆ ಗುರಿಯಾಗಿದ್ದೇವೆ ಎಂಬುದೂ ಅರಿವಿಗೆ ಬಾರದ ಈ ಮುಗ್ಧರು ನಾಗರಿಕರ ಜೀತ ಮಾಡಿಕೊಂಡು ಬಂದಿರುತ್ತಾರೆ ಎಂಬುದನ್ನು ಜಗತ್ತಿನ ಸಾಹಿತ್ಯ ಇತಿಹಾಸ ಸಂಶೋಧನೆಗಳು ದೃಢಪಡಿಸಿವೆ. ಜೊತೆಗೆ ಬುಡಕಟ್ಟು ಜನರ ಕಪ್ಪು ವರ್ಣವೂ ಕೂಡ ಬಿಳಿಯರಿಗೆ ಶೋಷಣೆಯ ಒಂದು ಭಾಗವೇ ಆಗಿ ಅವರನ್ನು ಕೀಳರಿಮೆಗೆ ತಳ್ಳಲು ಒಂದು ಮುಖ್ಯ ಸಾಧನವನ್ನಾಗಿಸಿದೆ. ಆದರೆ ಅನಕ್ಷರಸ್ಥರಾದ ಈ ಆದಿವಾಸಿ ಪಂಗಡಗಳು ತಮ್ಮದೇ ಆದ ಭಾಷೆ ಹಾಗೂ ಜಾನಪದ ಸಾಹಿತ್ಯ ಕಲೆಗಳ ಮೂಲಕ ಅವರ ಐಡೆಂಟಿಟಿಯನ್ನು ಯಾವತ್ತೂ ಉಳಿಸಿಕೊಂಡೇ ಬಂದಿದ್ದಾರೆ ಮತ್ತು ತನ್ಮೂಲಕ ನಾಗರಿಕ ಜಗತ್ತಿಗೆ ಸವಾಲಾಗಿ ಅವರೊಟ್ಟಿಗೆ ಬೆರೆಯದೆ ಸಾಮೂಹಿಕವಾಗಿ ಬದುಕುತ್ತಾ ಬಂದಿರುತ್ತಾರೆ. ಆದರೆ ಈಗ ಜಗತ್ತಿನಾದ್ಯಂತ ಅಭಿವೃದ್ಧಿಯ ಹೆಸರಿನಲ್ಲಿ ಕಾಡುಗಳನ್ನು ಒತ್ತುವರಿ ಮಾಡುತ್ತ, ಭಾರಿ ನೀರಾವರಿ ಅಣೆಕಟ್ಟುಗಳನ್ನು ನಿರ್ಮಾಣ ಮಾಡುತ್ತ, ಗಣಿಗಾರಿಕೆ ಇತ್ಯಾದಿ ನಡೆಸುತ್ತ, ಅರಣ್ಯದಲ್ಲಿ ನೆಮ್ಮದಿಯಾಗಿ ಬಾಳುತ್ತಿದ್ದ ಬುಡಕಟ್ಟು ಪಂಗಡಗಳನ್ನು ಅಲ್ಲಿಂದ ವಕ್ಕಲೆಬ್ಬಿಸಲಾಗುತ್ತಿದೆ. ಈಗ ಅವರ ಪಾಡು ನೀರಿನಿಂದ ಹೊರಹಾಕಿದ ಮೀನಿನಂತಾಗುತ್ತಿದೆ. ಈ ಒಂದು ಹಿನ್ನೆಲೆಯಿಂದ ಮಹಾಶ್ವೇತಾದೇವಿಯವರ **ಕಾಡಿನ ದಾವೇದಾರ** ಎಂಬ ಕಾದಂಬರಿಯನ್ನು ಓದಲು ಪ್ರಾರಂಭಿಸಬಹುದು. **ಕಾಡಿನ ದಾವೇದಾರ** ಎಂದರೆ, ಈ ಕಾಡು ತನ್ನದೆಂದು ದಾವೆ (ಮೊಕದ್ದಮೆ-ಖಟ್ಲೆ) ಹೂಡಿದವನು. ಬೀರ್ಸಾ ಮುಂಡಾ ಎಂಬ ಈ ಯುವಕ ತನ್ನ ಇಪ್ಪತ್ತನೇ ವಯಸ್ಸಿಗೇ ಈ ಒಂದು ಹಕ್ಕೊತ್ತಾಯವನ್ನು ಬ್ರಿಟಿಷ್ ಆಳರಸರ ಹಾಗೂ ಇಂಡಿಯಾದ ಜಮೀನ್ದಾರ (ದೀಕೂ) ವರ್ಗದ ಎದುರು ಮಂಡಿಸಿ ಅವರ ವಿರುದ್ಧ ದಂಗೆ ಎದ್ದ. ಅವನ ಜೀವನ ವೃತ್ತಾಂತ ಹೀಗಿದೆ :

ಕಾಡಿನ ದಾವೇದಾರನಾದ ಈ ಬೀರ್ಸಾ ಮುಂಡಾ ದಿನಾಂಕ ೧೫.೧೧.೧೮೭೫ರಲ್ಲಿ ರಾಂಚಿ ಜಿಲ್ಲೆಯ ಉಲಿಹಾತು ಎಂಬ ಗ್ರಾಮದ ಸುಗಾನ ಮತ್ತು ಕರಮಿ ಎಂಬ ಮುಂಡಾರಿ ಬುಡಕಟ್ಟಿನ ದಂಪತಿಗಳಿಗೆ ಮಗನಾಗಿ ಹುಟ್ಟಿದವನು. ಆ ಕಾಲಕ್ಕೆ ಜಮೀನ್ದಾರರು ಲೇವಾದೇವಿ ಮಹಾಜನರು ಮುಂಡಾಗಳ ಗ್ರಾಮಗಳನ್ನು ವಶಪಡಿಸಿಕೊಂಡು ಅಲ್ಲಿಂದ ಅವರನ್ನು ವಕ್ಕಲೆಬ್ಬಿಸುತ್ತಿದ್ದರು. ಹೊಟ್ಟೆಪಾಡಿಗಾಗಿ ಈ ಜನ ವನಾಂತರದಲ್ಲಿ ಬೇರೆ ಬೇರೆ ಗ್ರಾಮಗಳನ್ನು ಕಟ್ಟಿಕೊಳ್ಳುತ್ತ ಜಮೀನ್ದಾರರ ದನ ಕಾಯುವ, ಕೂಲಿ ಮಾಡುವ ಕಾಯಕದಿಂದ ಅರೆಹೊಟ್ಟೆ ಅರೆ ಬಟ್ಟೆಯಲ್ಲಿ ಬದುಕು ಸವೆಸುತ್ತಿದ್ದರು. ಹೀಗಿರುತ್ತ ಬೀರ್ಸಾನ ತಂದೆ ತಾಯಿಗಳೂ ತಮ್ಮ ಐದಾರು ಮಕ್ಕಳನ್ನು ಕಟ್ಟಿಕೊಂಡು ಗಯಾ, ಛಾಪ್ರಾ, ಅರಾ, ಭಾಗಲ್ಪುರ, ತಿರ್ಹೂತ್ ಮುಂತಾದ ಹಳ್ಳಿಗಳನ್ನು ಸುತ್ತಿದರು. ಹಿಂದೆ ಚೋಟಾ ನಾಗಪುರದ ಪಗರಣ ಜಿಲ್ಲೆಯ ಒಂದು ಒಳ್ಳೆಯ ಕುಟುಂಬದವನಾಗಿದ್ದ ಸುಗಾನ ಈಗ ತನ್ನ ಹೆಂಡತಿ ಮಕ್ಕಳನ್ನು ಸಲಹಲು

ಪುಟಗಳು : ೨೮೪ ರೂ. ೧೫೦

ಪ್ರಕಾಶಕರು

**ಕೇಂದ್ರ ಸಾಹಿತ್ಯ ಅಕಾಡೆಮಿ, ನವದೆಹಲಿ**

ಊರೂರು ಸುತ್ತುವ ಗತಿ ಬಂದಿತ್ತು. ಒಂದು ಜೋಳಿಗೆ, ಒಂದು ಮಣ್ಣಿನ ಕಡಾಯಿ, ಒಂದು ಹುಲ್ಲಿನ ಬುಟ್ಟಿ, ಒಂದು ಡಬ್ಬಾದಲ್ಲಿ ಚೀನಾ ಹುಲ್ಲಿನ (ಘಾಟೋ) ಬೀಜಗಳು, ಒಂದಿಷ್ಟು ಉಪ್ಪು – ಇವಿಷ್ಟು ಅವರ ಆಸ್ತಿ (ಪುಟ-೨೮). ಕಡೆಗೆ ಇವರು ಚಾಲ್ಕಾಡ್ ಸೇರಿದರು. ಅಲ್ಲಿ ತಮ್ಮ ಗಂಡು ಮಕ್ಕಳನ್ನು ಮಿಷನರಿ ಶಾಲೆಗೆ ಭರ್ತಿ ಮಾಡಿದರು. ಕಾರಣ ಅವರ ಅನ್ನ ಬಟ್ಟೆಗಾದರೂ ನೇರ್ಪಾಡಾಗಲಿ ಎಂದು.

ಬಾಲಕ ಬೀರ್ಸಾ ಮುಂಡಾ ತನ್ನ ಶಾಲಾ ದಿನಗಳಲ್ಲಿಯೇ ಕ್ರಿಶ್ಚಿಯನ್ ಮಿಷನರಿಗಳ ಹಾಗೂ ನೆರೆಹೊರೆಯ ಹಿಂದೂಗಳ ಮಧ್ಯೆ ತನ್ನ ಬುಡಕಟ್ಟು ಜನರು ಅನುಭವಿಸುತ್ತಿದ್ದ ಕಷ್ಟ ಕಾರ್ಪಣ್ಯಗಳನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಹೊಂದಿದ್ದ. ತನ್ನವರ ದುಸ್ಥಿತಿಗೆ ಕಾರಣರಾದ ಬ್ರಿಟಿಷ್ ಸರ್ಕಾರವನ್ನು ಹಾಗೂ ಹಿಂದೂ ದೀಕೂ (ಆದಿವಾಸಿಗಳ ಶೋಷಕವರ್ಗ)ಗಳನ್ನು ಎದುರಿಸುವ ಧೈರ್ಯವನ್ನು ಬೆಳೆಸಿಕೊಳ್ಳುತ್ತಿದ್ದ. ಬುಡಕಟ್ಟು ಜನರ ಮೌಢ್ಯ, ಅಂಧ ಶ್ರದ್ಧೆ, ಅಶುಚಿತ್ವವನ್ನು ಹೋಗಲಾಡಿಸಿ ಅವರಿಗೆ ಹೊಸ ನಾಯಕತ್ವವನ್ನು ನೀಡಲು ತವಕಿಸಿದ. ಅದಕ್ಕಾಗಿ ತನ್ನ ವಿದ್ಯಾಭ್ಯಾಸವನ್ನು ಅರ್ಧಕ್ಕೇ ನಿಲ್ಲಿಸಿ ತನ್ನವರತ್ತ

**ಪ್ರೊ|| ಶಿವರಾಮಯ್ಯ**

ಹಿಂದಿರುಗಿದ. ಈ ಸಂದರ್ಭದಲ್ಲಿ ಅವನ ಮನಸ್ಥಿತಿ ಹೇಗಿತ್ತೆಂದು ಹೇಳುವುದಾದರೆ, ಸಾವು ನೋವು ಮುಪ್ಪುಗಳನ್ನು ಮೀರುವ ಬಗೆ ಹೇಗೆ ಎಂದು ಚಿಂತಿಸಿದ ಭಗವಾನ್ ಬುದ್ಧನ ಚಿಂತನೆಯನ್ನೇ ಹೋಲುವಂತಿದೆ. ಕಾಡಿನೊಳಕ್ಕೆ ಹೋದರೆ ಅವನಿಗೆ ನೆಮ್ಮದಿ ಸಿಗುತ್ತಿತ್ತು. ಆದರೆ ಆ ಕಾಡನ್ನೂ ಈಗ ಕಿತ್ತುಕೊಳ್ಳುತ್ತಿದ್ದಾರೆ. ಆದ್ದರಿಂದ ಅದನ್ನು ವಿಮೋಚನೆ ಮಾಡಬೇಕಾಗಿದೆ, ಕಾಡಿನ ವಿಮೋಚನೆಯಲ್ಲಿ ತನ್ನವರ ವಿಮೋಚನೆಯೂ ಇದೆ, ಎಂಬ ಚಿಂತನೆ ಅವನಲ್ಲಿ ಗಾಢವಾಗುತ್ತಾ ಹೋಯಿತು. ಕೊನೆಗೆ ಅವನ ಅಂತರ್ವಾಣಿ, ''ಇದೆಲ್ಲ ನನ್ನದು, ಈ ಕಾಡೆಲ್ಲವೂ ನನ್ನದೇ, ನಾನು ಭೂಮಿಯ ತಂದೆ''. ಎಂದು ಬೋಧೆ ಮಾಡಿದಂತಾಯಿತು. ಆನಂತರ ಅವನು ಹೊಸ ಮನುಷ್ಯನಾಗುತ್ತಾನೆ. ದೇವ ಮಾನವನಾದ, ಅಲ್ಲಿ, ದೇವರೇ ಆದ. ಆ ದೇವರು ತನ್ನ ಜನರಿಗೆ ಕರೆಕೊಟ್ಟದ್ದು ಏನೆಂದರೆ, ''ಭೂತ-ಪ್ರೇತಗಳನ್ನು, ದೀಕೂಗಳನ್ನು, ಸರಕಾರವನ್ನು ನಾಶಗೊಳಿಸಿ, ನಿಮ್ಮ ಅಧಿಕಾರವನ್ನು ನೀವೇ ಕಿತ್ತುಕೊಳ್ಳಿ'' ಎಂಬ ಹಕ್ಕೊತ್ತಾಯದ ಕರೆ (ಪುಟ-೮೬).

ಬೀರ್ಸಾ ಮನೆಮನೆಗೆ ಹೋಗಿ ಕಾಲರಾ, ಮೈಲಿ ಬೇನೆ, ಹಾವು ಕಡಿಯುವುದು, ಹುಲಿ ಹಿಡಿಯುವುದು ಮುಂತಾಗಿ, ಇವೆಲ್ಲ ಹಣೆಬರಹ ಅಲ್ಲ ಎಂದು ತಿಳಿಸಿ, ಅವುಗಳ ನಿವಾರಣೋಪಾಯಗಳನ್ನೂ ಔಷಧೋಪಚಾರಗಳನ್ನೂ ಕಲಿಸುತ್ತಾ ಬಂದ. ಇದರಿಂದ ಹಳ್ಳಿಗರು ಆರೋಗ್ಯವಂತರಾದರು, ಮೂಢ ನಂಬಿಕೆಗಳಿಂದ ಪಾರಾದರು. ಸಿಬೋಜನೆಂಬ ಅವರ ಜಾನಪದ ದೇವರು ಇನ್ನು ಮುಂದೆ ಮುಂಡಾ ಒರಾಂವ್, ಕೋಲ, ಕಾರಿಯಾ ಮೊದಲಾದವರನ್ನು ರಕ್ಷಿಸಲಾರ. ಬೀರ್ಸಾ ಮುಂಡಾನೇ ಅವರ ರಕ್ಷಕ ದೇವರಾದ. ಆದರೆ ಆ ದೇವರ ಕರ್ತವ್ಯ ಒಳಗಿನ ಶತ್ರುಗಳಾದ ರೋಗರುಜಿನ ಇವುಗಳೊಂದಿಗೆ ಹೋರಾಡುವುದಷ್ಟೇ ಆಗಿರಲಿಲ್ಲ; ಅವರನ್ನು ಈ ಸ್ಥಿತಿಗೆ ತಳ್ಳಿದ ಹೊರಗಿನ ಶತ್ರುಗಳಾದ ಸರಕಾರ ಹಾಗೂ ಹಿಂದೂ ಮಹಾ ಜನರನ್ನು ಎದುರಿಸಿ ಹೋರಾಡಬೇಕಾಗಿತ್ತು. ಆದ್ದರಿಂದ ಬಂಡಾಯಕ್ಕೆ ಧುಮಿಕಿದ. ಹೀಗೆ ಬೀರ್ಸಾ ಮುಂಡಾ ತಾನೇ ದೇವರೆಂದು ಹೇಳಿದುದರ ಪರಿಣಾಮವಾಗಿ ಬುಡಕಟ್ಟು ಜನರು ಅವನ ಸದ್ಯೋಪಕಾರ ಹಾಗೂ ಪ್ರೀತಿಯನ್ನು ಅರ್ಥ ಮಾಡಿಕೊಂಡು ಅವನನ್ನು ದೇವರೆಂದು ಒಪ್ಪಿಕೊಂಡರು. ಇವನು ಸಂದರ್ಭದ ಸೃಷ್ಟಿಯಾದಂತೆಯೇ ಅವನು ಸಹ ಸಂದರ್ಭದ ಸೃಷ್ಟಿಕರ್ತನೂ ಆದ. ಹೀಗೆ ಬುಡಕಟ್ಟು ಜನರಿಗೆ ನಾಯಕತ್ವವನ್ನು ನೀಡುವ ಮೂಲಕ ಬ್ರಿಟಿಷ್ ಸರ್ಕಾರವನ್ನೂ ಹಾಗೂ ಹಿಂದೂ ಕ್ರಿಶ್ಚಿಯನ್ ಎಂಬ ಪ್ರಭಾವಿ ಧರ್ಮಗಳನ್ನೂ ಒಟ್ಟೊಟ್ಟಿಗೆ ತಿರಸ್ಕರಿಸಿದ. ಅಂತೂ ಬುಡಕಟ್ಟು ಜನರಿಗೆ ಒಂದು ಹೊಸ ಮಾರ್ಗವನ್ನೇ ತೋರಿಸಿಕೊಟ್ಟ ಒಬ್ಬ ಧೀಮಂತ ಯುವಕ ಬೀರ್ಸಾ ಮುಂಡ. ಸ್ವಾತಂತ್ರ್ಯ ಹಾಗೂ ಸಾಮಾಜಿಕ ಗೌರವದ ಅಗತ್ಯವನ್ನು ಮನಗಂಡ ಈತ ಅದರತ್ತ ಹಕ್ಕೊತ್ತಾಯದಿಂದ ಸರ್ಕಾರದ ಗಮನವನ್ನು ಸೆಳೆದ. ಬಂಡಾಯ ಹೂಡಿ ಮುಂಡಾರಿ ವರ್ಗದ ಬುಡಕಟ್ಟು ಜನರು ಅನುಭವಿಸುತ್ತಿದ್ದ ಭೂ ವಿವಾದ, ಕಿರುಕುಳಗಳನ್ನು ಹೋಗಲಾಡಿಸಲು ಪ್ರಯತ್ನಿಸಿದ. (ಇವನ ಆ ಬಂಡಾಯದ ಫಲವಾಗಿ ಬ್ರಿಟಿಷ್ ಸರ್ಕಾರ ತದನಂತರ ಹಲವಾರು ಭೂ ಸುಧಾರಣಾ ಶಾಸನಗಳನ್ನು ಜಾರಿಗೆ ತಂದದ್ದೂ ಈಗ ಇತಿಹಾಸ. ಅಲ್ಲದೆ ಶತಮಾನದ ಹಿಂದೆ ಬೀರ್ಸಾ ಮುಂಡಾ ಯಾವ ಸ್ವತಂತ್ರ ರಾಜ್ಯಕ್ಕಾಗಿ ಬಂಡಾಯ ಹೂಡಿದ್ದನೋ ಆ ಬಂಡಾಯದ

ಫಲವೋ ಎಂಬಂತೆ ಈಗ 'ಜಾರ್ಖಂಡ್' ಎಂಬ ಬುಡಕಟ್ಟುಗಳ ರಾಜ್ಯ ಅಸ್ತಿತ್ವಕ್ಕೆ ಬಂದಿದೆ.)

ಪ್ರಸ್ತುತ ಮಹಾಶ್ವೇತಾದೇವಿಯವರ **'ಕಾಡಿನ ದಾವೇದಾರ'** ಕಾದಂಬರಿಯು ೧೯೭೭ರಲ್ಲಿಯೇ ರಚಿತವಾದುದಾಗಿದೆ. ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಈ ಲೇಖಕರು ಬುಡಕಟ್ಟು ಜನಾಂಗದ ಹೋರಾಟದಲ್ಲಿ ಸಕ್ರಿಯ ಪಾತ್ರ ವಹಿಸಿದವರು. ಆ ಜನಜೀವನದ ಅಥೆಂಟಿಕ್ ಅನುಭವವುಳ್ಳವರು. ಆದಿವಾಸಿ ಸಂಸ್ಕೃತಿಯನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದವರು. ಐತಿಹಾಸಿಕ ಹಾಗೂ ಸಾಮಾಜಿಕ ಬದ್ಧತೆಯಿಂದ ಸಾಹಿತ್ಯ ಕಥನಕ್ಕೆ ತೊಡಗಿಸಿಕೊಂಡಿರುವ ಭಾರತೀಯ ಲೇಖಕರಲ್ಲಿ ಇವರು ಪ್ರಮುಖರು. **'ಕಾಡಿನ ದಾವೇದಾರ'** ಎಂಬ ಇವರ ಕಾದಂಬರಿಯನ್ನು ಜಿ. ಕುಮಾರಪ್ಪನವರು ಅದರ ಅಸಲುತನ ಕೆಡದಂತೆ ಬಂಗಾಳಿಯಿಂದ ಕನ್ನಡಕ್ಕೆ ಅನುವಾದ ಮಾಡಿರುವುದು ಸ್ವಾಗತಾರ್ಹ.

ಈ ಕಾದಂಬರಿಯು ಕಾಲ, ದೇಶ ಮತ್ತು ಕ್ರಿಯೆಗಳೆಂಬ ಮೂರು ಐಕ್ಯತೆಗಳನ್ನು ಸಾಧಿಸುವ ಮೂಲಕ ಒಂದು ವಿಶಿಷ್ಟ ತಂತ್ರಗಾರಿಕೆಯನ್ನು ಮೈಗೂಡಿಸಿಕೊಂಡಿದೆ. ''ಜೂನ್ ೯, ೧೯೦೦ರಂದು ರಾಂಚಿ ಜೈಲಿನ ಸಾಲಿಟರಿ ಸೆಲ್‌ನಲ್ಲಿ ಬೆಳಗಿನ ೮ ಗಂಟೆಯ ಸಮಯಕ್ಕೆ ಬೀರ್ಸಾ ರಕ್ತ ಕಾರಿಕೊಂಡು ಮೂರ್ಛೆ ಹೋಗಿದ್ದ. ಬೀರ್ಸಾ ಮುಂಡ, ಸುಗಾನ ಮುಂಡಾನ ಮಗ. ವಯಸ್ಸು ೨೫. ವಿಚಾರಣಾಧೀನ ಕೈದಿ.'' ಇದು ಆರಂಭ. ರಾಂಚಿ ಜೈಲಿನಲ್ಲಿ ೪೦೦ ಜನ ಮುಂಡಾಗಳನ್ನು ಹಿಡಿದು ಹಾಕಲಾಗಿದೆ. ಐದು ತಿಂಗಳಿನಿಂದ ಅವರೆಲ್ಲ ವಿಚಾರಣಾಧೀನ ಕೈದಿಗಳಾಗಿದ್ದಾರೆ. ಅವರಲ್ಲಿ ಧಾನಿಯಂತಹ ವಯೋವೃದ್ಧನೂ, ಸುನಾರನಂತಹ ಹಸುಳೆ ಹುಡುಗನೂ, ಭರಮಿ, ಕನು, ಗೋಪಿ, ರಮಾಯಿ ಮೊದಲಾದ ನೂರಾರು ಮುಂಡಾಗಳು ಬಿಗಿದ ಸರಪಳಿಯಲ್ಲಿ ಕುಳಿತು ಧಾನಿ ಮುದುಕ ಹೇಳುತ್ತಿದ್ದ ಅವರ ಆದಿಮ ಚರಿತ್ರೆಯನ್ನು ಆಲಿಸುತ್ತಿದ್ದರು. ಈ ಮೊದಲುಗೊಂಡು ಮುಂಡಾ ಬುಡಕಟ್ಟು ಯಾವುದು ? ಎಲ್ಲಿಯದು ? ಎತ್ತ ಬಂದದ್ದು ? ಎಲ್ಲಿ ಇದ್ದದ್ದು ? ಹೀಗೆ ಮುಂದುವರಿಯುತ್ತದೆ ನಿರೂಪಣೆ. ಬೀರ್ಸಾ ಮುಂಡಾ ಯಾರು ? ಅವನ ಕೌಟುಂಬಿಕ ಹಿನ್ನೆಲೆ ಏನು ? ತಂದೆ ತಾಯಿ, ಹುಟ್ಟಿದ್ದು, ಬೆಳೆದದ್ದು, ಕಲಿತದ್ದು, ಬಿಟ್ಟದ್ದು, ಅವನ ಬಾಲ್ಯ, ಯೌವ್ವನ, ಜ್ಞಾನೋದಯ ಇತ್ಯಾದಿ ಆಖ್ಯಾನಗಳಲ್ಲಿ ಹರಿದುಬರುತ್ತದೆ. ಬೀರ್ಸಾ ಮುಂಡ ತಾನೇ ದೇವರೆಂದು ಹೇಳಿದ್ದು, ಜನರು ಹಿಂಬಾಲಿಸಿದ್ದು, 'ಉಲ್ ಗುಲಾನ್' ಹೋರಾಟ, ದಂಗೆ ಎದ್ದದ್ದು, ದೀಕೂಗಳ ವಿರುದ್ಧ, ಬ್ರಿಟಿಷ್ ಸರ್ಕಾರದ ವಿರುದ್ಧ ದಂಗೆಕೋರನಾಗಿ ಬೆಳೆದಿದ್ದು, ಛೋಟಾನಾಗಪುರ ಪಗರಣ ಜಿಲ್ಲೆಗಳಲ್ಲಿ ಸಭಾಗಳನ್ನು ಜರುಗಿಸಿದ್ದು, ನದಿ-ನೀರ್ಝರಿಗಳನ್ನು ಈಸು ಬಿದ್ದು, ಡೊಂಬಾರಿ ಪರ್ವತಶ್ರೇಣಿಯಲ್ಲಿ ಹೋರಾಡಿದ್ದು, ಚುಟಿಯಾ ಮತ್ತು ಜಗನ್ನಾಥಪುರ ಮಂದಿರಗಳನ್ನು ದಾಖಲು ಮಾಡಿಕೊಂಡು ಮುಂದುವರಿದಿದ್ದು, ಇತ್ಯಾದಿ ವಿವರಗಳಲ್ಲಿ ಇಡಿಕಿರಿದು; ಕಡೆಗೆ ಸೆಲ್ರಾಕಾಬ್ ಬೆಟ್ಟದಲ್ಲಿ ನಡೆದ ಹೋರಾಟದಲ್ಲಿ ನೂರಾರು ಜನ ಮುಂಡಾಗಳು ಸತ್ತು, ಬೀರ್ಸಾ ಮುಂಡ ತಲೆಮರೆಸಿಕೊಂಡದ್ದು, ಕೊನೆಗೆ ೫೦೦ ರೂಗಳ ಇನಾಮು ಆಸೆಯಿಂದ ತನ್ನವರ ಸಹಕಾರದಿಂದಲೇ ಸೆರೆ ಹಿಡಿಯಲ್ಪಟ್ಟು ರಾಂಚಿ ಜೈಲಿಗೆ ಸೇರುವವರೆಗೆ ೨೫೦ ಪುಟಗಳ ಕಾದಂಬರಿ ಬೆಳೆದು ಮತ್ತೆ ಮೊದಲ ಪುಟದ ಆರಂಭಕ್ಕೆ ಬಂದು ನಿಂತಾಗ ಜೂನ್ ೯ರ ಬೆಳಗ್ಗೆ ೯ ಗಂಟೆ ೧೦ ನಿಮಿಷ. ಅದೇ ೮ ಗಂಟೆಗೆ ರಕ್ತ ಕಾರಿಕೊಂಡು ಮೂರ್ಛೆ ಹೋಗಿದ್ದ ಬೀರ್ಸಾ ಮುಂಡಾ ಅಲ್ಲಿಂದ ೧ ಗಂಟೆ ೧೦ ನಿಮಿಷ ಅವಧಿಯಲ್ಲಿ ಕೊನೆಯುಸಿರೆಳೆಯುತ್ತಾನೆ. ಎಂದರೆ ಕಾದಂಬರಿ ಸಾಧಿಸಿರುವ ಕಾಲ, ದೇಶ ಮತ್ತು ಕ್ರಿಯೆಗಳಲ್ಲಿರುವ ಐಕ್ಯತೆ ತುಂಬಾ ಪರಿಣಾಮಕಾರಿಯಾಗಿದೆ, ಹೀಗೆ ನಾಯಕನ ಸಾವಿನೊಂದಿಗೆ ಕೃತಿ ಮುಗಿಯುತ್ತದೆ.

ಆದರೆ, ಕಾದಂಬರಿ ಮುಗಿದರೂ ಉಪಸಂಹಾರ, ಬೀರ್ಸಾ ಮುಂಡಾನ ಬಂಡಾಯಕ್ಕೆ ಕೊನೆಯಿಲ್ಲ ಎಂಬುದನ್ನು ಧ್ವನಿಸುತ್ತದೆ. ಬೀರ್ಸಾ ಮುಂಡಾನ ಸಹಪಾಠಿ, ಈಗ ಜೈಲ್ ಅಧಿಕಾರಿಯಾಗಿರುವ ಅಮೂಲ್ಯ ಬಾಬುವಿನ ಸಾಕ್ಷೀ ಪ್ರಜ್ಞೆಯಲ್ಲಿ ಇಡೀ ಹೋರಾಟ ನಿರಂತರವಾದುದು. ''ನಾವು ಹೇಗೆ ಚಿರಕಾಲಿಗಳೋ ಹಾಗೆಯೇ ಹೋರಾಟವೂ ಸಹ. ಬೀರ್ಸಾನ ಹೋರಾಟವೂ ಚಿರಕಾಲ. ಭೂಮಿಯ ಮೇಲೆ ಏನೊಂದೂ ಮುಗಿದುಹೋಗುವುದಿಲ್ಲ- ಏನೊಂದೂ ಮುಗಿಯದು. ಉಲ್-ಗುಲಾನ್‌ಗೆ ಕೊನೆಯಿಲ್ಲ ಬೀರ್ಸಾನಿಗೆ ಮರಣವಿಲ್ಲ'' ಇದನ್ನು ಕೇಳಿಸಿಕೊಳ್ಳಬೇಕು, ಕೇಳಿಸಿಕೊಳ್ಳುವುದನ್ನು ಕಲಿಯದೇ ಇದ್ದಲ್ಲಿ ನಂಬಿಕೆಯನ್ನು ಬೆಳೆಸಿಕೊಳ್ಳುವುದು ಹೇಗೆ ? ಎಂಬ ಆಶಯದೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ.

ಕಾದಂಬರಿಯ ಒಳಜಗತ್ತಿನಲ್ಲಿರುವ ಶಿಖರ ಸನ್ನಿವೇಶಗಳನ್ನು ಗುರ್ತಿಸುವುದಾದರೆ, ಧಾನಿ ಮುದುಕ ಹೇಳುವ ಅನಾದಿ ಬುಡಕಟ್ಟುಗಳ ಕಥೆ; ಬೀರ್ಸಾ ಮುಂಡಾ ತನ್ನ ತಂದೆಯೊಂದಿಗೆ, ತಾಯಿಯೊಂದಿಗೆ ನಡೆಸುವ ಮಾತುಕತೆ; ಬೀರ್ಸಾ ವನಾಂತರದಲ್ಲಿ ಪಡೆವ ಅಂತರ್‌ಬೋಧೆ; ಉಲ್-ಗುಲಾನ್ ಹೋರಾಟಗಳು, ಡೊಂಬಾರಿ ಪರ್ವತ ಶ್ರೇಣಿಯಲ್ಲಿ, ಸೆಲ್ರಾಕಾಬ್ ಬೆಟ್ಟದಲ್ಲಿ ನಡೆದ ಹೋರಾಟ ಸಂದರ್ಭಗಳು ಇತ್ಯಾದಿ. ಕಾದಂಬರಿಯಲ್ಲಿ ಬರುವ ಮುಖ್ಯ ಪಾತ್ರಗಳು ಬೀರ್ಸಾ ಮುಂಡಾ, ಅವನ ತಂದೆ ಸುಗಾನಾ, ತಾಯಿ ಕರಮಿ. ಅವನ ಅನುಯಾಯಿಗಳಲ್ಲಿ ಪ್ರಮುಖರು ವೃದ್ಧ ಧಾನಿ, ಭರಮಿ, ತಮ್ಮ ಕನು, ಗೋಪಿ, ರಮಾಯಿ, ಅಲ್ಲದೆ ಅಮೂಲ್ಯ ಬಾಬು, ರಾಂಚಿ ಡಿ. ಸಿ, ಮಾಜಿಸ್ಟ್ರೇಟ್, ವಕೀಲರಾದ ಜೇಕಬ್ ಹಾಗೂ ಸಾಲಿ, ಪರಮಿ ಮುಂತಾದ ಸ್ತ್ರೀಯರು ಮತ್ತು ಸುನಾರ ಎಂಬ ಬಾಲಕ ಇತ್ಯಾದಿ. ಒಂದೇ ಮಾತಿನಲ್ಲಿ ಹೇಳುವುದಾದರೆ ಮಹಾಶ್ವೇತಾದೇವಿಯವರ **'ಕಾಡಿನ ದಾವೇದಾರ'** ಕಾದಂಬರಿಯು ಮುಂಡಾರಿ ಮಹಾಭಾರತವೇ ಎನ್ನಬಹುದು.

**ಶಿವರಾಮಯ್ಯ**
ನಂ.೧೭೨, ಐಸೆಕ್ ರೋಡ್, ಟೀಚರ್ಸ್ ಕಾಲೋನಿ, ನಾಗರಬಾವಿ
ಬೆಂಗಳೂರು - ೫೬೦ ೦೭೨

# ವ್ಯಾಘ್ರನ ಬೇಟೆ

ಕಾನನದ ಮಡಿಲಲ್ಲಿ ಒಂಟಿತನದಲಿ ನಾನು
ಹೊಂಚು ಹಾಕುತಲಿದ್ದೆ ವ್ಯಾಘ್ರನ ಬೇಟೆಗೆ
ಗಿರಿಯ ಗುಹೆಯಲ್ಲಿ ಅಡಗಿದ್ದ ವ್ಯಾಘ್ರನು
ನನ್ನ ತಾಳ್ಮೆಯನು ಕೆದಕುತ್ತಲಿದ್ದನು

ಕತ್ತಲಾವರಿಸಲು ಕರಿಮೋಡ ಏರಿತ್ತು
ಬಿರುಗಾಳಿ ಎದ್ದಿತ್ತು ಕಡಲ ಮಡಿಲಿಂದ
ಬಾಗುತ್ತ ಬಳುಕುತ್ತ ಮುರಿಯುತಿಹ ಮರಗಳ
ಸಾಲುಗಳ ನೋಡುತ್ತ ಹೌಹಾರತೊಡಗಿದೆ.

ಆಸರೆಯ ಹುಡುಕುತ್ತ ಕತ್ತಲಲಿ ತೆವಳಿದೆ
ತರುಲತೆಗಳ ಮಧ್ಯೆ ತೂರತೊಡಗಿದೆ
ಪೊದೆಗಳ ಮಧ್ಯದಲಿ ತೆವಳುತ್ತ ತೆವಳುತ್ತ
ಬಂಡೆಗಳ ಗರ್ಭದಲಿ ತಾಣವನು ಹುಡುಕಿದೆ



ಬಿರುಗಾಳಿ ಹೊಡೆತಕ್ಕೆ ಮಳೆಯ ಆರ್ಭಟಕೆ
ಬಂಡೆಗಳ ಮಧ್ಯದಲಿ ನಡುಗುತ್ತ ಕುಳಿತಿದ್ದೆ
ಉರಿಯುತಿಹ ದೃಷ್ಟಿಗಳು ನನ್ನನೆಚ್ಚರಿಸಿದವು
ಏನೆಂದು ನೋಡಲವು ವ್ಯಾಘ್ರನ ಕಣ್ಣುಗಳು !

ನನ್ನಂತೆ ಬಳಲಿ ನಡಗುತಿಹ ವ್ಯಾಘ್ರನು
ಬಂಡೆಗಳ ಮಧ್ಯದಲಿ ಆಸರೆಯ ಪಡೆದಿದ್ದ
ಕಡು ವೈರಿಗಳಾದರೂ ಇಬ್ಬರೂ ಜೊತೆಯಲ್ಲಿ
ಅಣ್ಣತಮ್ಮಂದಿರಂತೆ ಅಲ್ಲೆ ಮುದುಡಿದೆವು

ಅಂದು ಬೆಳಗಿನ ಜಾವ ರವಿ ಉದಯಿಸಿದಾಗ
ನಮ್ಮಿಬ್ಬರಾ ನಡುವೆ ಭಯವಿನಿತು ಇರಲಿಲ್ಲ
ಅಡಗು ತಾಣದೊಳಗಿಂದ ಹೊರ ಹೊರಟ ನಾವು
ನಮ್ಮಗಳ ಹಾದಿಯಲಿ ನಡೆಯುತ್ತಲಿದ್ದೆವು

**ವಿ. ಗಣೇಶ**
ನಂ ೫೬, ಚಾಮರಾಜಪೇಟೆ
ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

ವಿಶ್ವ ವೀಕ್ಷಣೆ

# ಆಕ್ರಮಣಕಾರಿ ಸೇನೆಗಳು ಇರಾಕಿನಿಂದ ಕಾಲ್ತೆಗೆಯಲಿ

ಇರಾಕಿನ ಮೇಲೆ ಅಮೆರಿಕ ನಡೆಸಿದ ದುರಾಕ್ರಮಣ, ದ್ವೇಷ ಸಾಧನೆ ಹಾಗೂ ಅದರ ತೈಲ ಸಂಪನ್ಮೂಲಗಳನ್ನು ವಶಪಡಿಸಿಕೊಳ್ಳಲು ನಡೆಸಿದ ಸನ್ನಾಹ ಎನ್ನುವುದು ದಿನ ಕಳೆದಂತೆ ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತಿದೆ. ತನ್ನ ಹಿತಾಸಕ್ತಿಗಾಗಿ, ತನಗೆ ಅಹಿತ ವೆನಿಸುವ ಆಡಳಿತವನ್ನು ಉರುಳಿಸಲು, ಏನಾದರೂ ಸುಳ್ಳಿನ ಕಂತೆ ಹೊಸೆದು ಸಾರ್ವಭೌಮ ರಾಷ್ಟ್ರವೊಂದನ್ನು ಆಕ್ರಮಿಸಿಕೊಳ್ಳಲು ಸಾಮ್ರಾಜ್ಯಶಾಹಿಗಳು ಎಂಥ ಹೀನಕೃತ್ಯ ನಡೆಸಲೂ ಸಿದ್ಧ ಎನ್ನುವುದನ್ನು ಇರಾಕಿನ ದುರಾಕ್ರಮಣ ಸ್ಪಷ್ಟಪಡಿಸಿದೆ. ಇರಾಕಿನ ಅಧ್ಯಕ್ಷ ಸದ್ದಾಮ್ ಹುಸೇನ್ ಹೇರಳವಾಗಿ ಸಾಮೂಹಿಕ ವಿನಾಶಕಾರಿ ಅಸ್ತ್ರಗಳನ್ನು ದಾಸ್ತಾನಿರಿಸಿ ಕೊಂಡಿದ್ದಾನೆಂಬ ಆಪಾದನೆ ಹಸೀ ಸುಳ್ಳು ಎನ್ನುವುದನ್ನು ಈಗ ಅಮೆರಿಕನ್ನರೇ ಒಪ್ಪಿಕೊಳ್ಳಬೇಕಾಗಿ ಬಂದಿದೆ. ಸುಳ್ಳಿನ ಕಂತೆ ಹೊಸೆಯುವುದರಲ್ಲಿ, ಸುಳ್ಳು ದಾಖಲೆಗಳನ್ನು ಸೃಷ್ಟಿಸುವುದರಲ್ಲಿ ಪರಿಣತಿ ಹೊಂದಿರುವ ಕುಖ್ಯಾತ 'ಸಿಐಎ' ಅಮೆರಿಕದ ಜನತೆಯನ್ನು, ವಿಶ್ವದ ಜನಕೋಟಿಯನ್ನು ಮೋಸಗೊಳಿಸಿರುವುದು ಇನ್ನೊಮ್ಮೆ ಸಾಬೀತಾಗಿದೆ. ಗೂಢಚರ್ಯೆ ಮಾಹಿತಿಯನ್ನು ಉತ್ಪ್ರೇಕ್ಷೆ ಮಾಡಲಾಯಿತು ಎಂದು ಈಗ ಜಾರಿಕೊಳ್ಳಲು ಅಮೆರಿಕ, ಬ್ರಿಟನ್‌ಗಳು ಪ್ರಯತ್ನಿಸುತ್ತಿವೆ. ಇರಾಕಿನಲ್ಲಿ ಸಾಮೂಹಿಕ ವಿನಾಶಕಾರಿ ಅಸ್ತ್ರಗಳ ದಾಸ್ತಾನು ಕುರಿತು ತನಿಖೆ ನಡೆಸಿದ ವಿಶ್ವಸಂಸ್ಥೆಯ ಮುಖ್ಯ ತನಿಖೆಗಾರ ಹ್ಯಾನ್ಸ್ ಬ್ಲಿಕ್ಸ್ ಬ್ರಿಟಿಷ್ ಪ್ರಧಾನಿ ಸೃಷ್ಟಿಸಿದ ದಸ್ತಾವೇಜನ್ನು ನೇರವಾಗಿ ಖಂಡಿಸಿದ್ದಾರೆ. ಇರಾಕ್ ಅಣ್ವಸ್ತ್ರತಯಾರಿಸಲು ನೈಜರ್‌ನಿಂದ ಯುರೇನಿಯಮನ್ನು ಪಡೆದುಕೊಂಡಿತು ಎಂದು ಅಮೆರಿಕ ಅಧ್ಯಕ್ಷ ಜಾರ್ಜ್ ಬುಷ್ ಮಾಡಿದ ಆರೋಪ ಸುಳ್ಳು ಎಂಬುದನ್ನು, ಮಾಹಿತಿಯನ್ನು ಒದಗಿಸಿದ ಸಿಐಎ ಒಪ್ಪಿಕೊಂಡಿದೆ. ಈ ಇಕ್ಕಟ್ಟಿನಿಂದ ಪಾರಾಗಲು ಅಮೆರಿಕದ ರಕ್ಷಣಾ ಸಚಿವ ರೊನಾಲ್ಡ್ ರಮ್ಸ್‌ಫೆಲ್ಡ್ ಈಗ ಹೊಸ ರಾಗ ಹಾಡತೊಡಗಿದ್ದಾನೆ. ಈತ ಹಾಗೂ ಉಪಾಧ್ಯಕ್ಷ ಡಿಕ್ ಶೆನಿ ಇರಾಕಿನ ದುರಾಕ್ರಮಣಕ್ಕೆ ಸೂತ್ರಧಾರರು. ಈಗ ರಮ್ಸ್‌ಫೆಲ್ಡ್ ಯುದ್ಧ ನಡೆಸಲು ಮುಖ್ಯ ಕಾರಣ ನಿಷೇಧಿತ ಅಸ್ತ್ರಗಳ ದಾಸ್ತಾನಿದೆ ಎನ್ನುವುದಕ್ಕಲ್ಲ, ಆದರೆ ಸೆಪ್ಟೆಂಬರ್ ೧೧, ೨೦೦೧ರಲ್ಲಿ ಅಮೆರಿಕದ ಮೇಲೆ ಜರುಗಿದ್ದ ಭಯೋತ್ಪಾದಕ ದಾಳಿ. ಸೆಪ್ಟೆಂಬರ್ ೧೧ಕ್ಕೂ ಇರಾಕಿಗೂ ಸಂಬಂಧ ಕಲ್ಪಿಸಲು ಈಗ ಹೊಸ ಮಾಹಿತಿಗಳನ್ನು ಸೃಷ್ಟಿಸಲಾಗುತ್ತಿದೆ. ತಮ್ಮ ದುರಾಕ್ರಮಣ ಕೃತ್ಯವನ್ನು ಸಮರ್ಥಿಸಿಕೊಳ್ಳಲು ಸಾಮ್ರಾಜ್ಯಶಾಹಿಗಳು ಇನ್ನೂ ಏನೇನು ಅವತಾರ ತಾಳುತ್ತಾರೆ ಎನ್ನುವುದನ್ನು ನಾವು ಊಹಿಸಿಕೊಳ್ಳಬಹುದು.

ಇದು ಒಂದು ಕಡೆಯಾದರೆ, ಇರಾಕನ್ನು ಆಕ್ರಮಿಸಿಕೊಂಡು ಹತ್ತು ವಾರಗಳಾಗುತ್ತ ಬಂದರೂ ಅಮೆರಿಕನ್ನರಿಗೆ ಇರಾಕಿ ಜನರ ಮೇಲೆ ತಮ್ಮ ಆಡಳಿತವನ್ನು ಹೇರಲು ಸಾಧ್ಯವಾಗಿಲ್ಲ. ಇರಾಕಿನಲ್ಲಿರುವ ೧,೫೦,೦೦೦ ಅಮೆರಿಕನ್ ಯೋಧರಿಗೆ ಅದು ಮುಗಿಯದ ಯುದ್ಧವಾಗಿದೆ. ಪ್ರತಿದಿನ ಅಮೆರಿಕದ ಸೈನಿಕರ ಮೇಲೆ ಒಂದಲ್ಲ ಒಂದು ಕಡೆ ಇರಾಕಿಗಳು ದಾಳಿ ನಡೆಸುತ್ತಿದ್ದಾರೆ. ಅಮೆರಿಕದ ಅಧ್ಯಕ್ಷ ಬುಷ್ ಹೇಳಿಕೆ ಪ್ರಕಾರ ಇದುವರೆಗೆ ೧೫೧ ಅಮೆರಿಕನ್ ಯೋಧರು ಆ ದೇಶದ ದಾಳಿಗಳಲ್ಲಿ ಸಾವನ್ನಪ್ಪಿದ್ದಾರೆ. ಹತ್ತಾರು ಮಂದಿ ಗಾಯಗೊಂಡಿದ್ದಾರೆ. ಆಕ್ರಮಣಕಾರರ ವಿರುದ್ಧ ಇರಾಕಿ ಜನತೆಯ ಪ್ರತಿರೋಧ ದಿನೇದಿನೇ ಹೆಚ್ಚುತ್ತಿದೆ. ರಕ್ಷಣಾ ಸಚಿವ ರಮ್ಸ್‌ಫೆಲ್ಡ್ ಪ್ರಕಾರ ಈ ಪ್ರತಿರೋಧ ಮುಂದಿನ ದಿನಗಳಲ್ಲಿ ಹೆಚ್ಚಾಗಲಿದೆ. ಅವರೇ ಹೇಳಿರುವಂತೆ ಇರಾಕಿನ ಆಕ್ರಮಣದಿಂದ ಅಮೆರಿಕಾಗೆ ಪ್ರತಿ ತಿಂಗಳಿಗೆ ೩.೯ ರಿಂದ ೪ ಬಿಲಿಯ ಡಾಲರುಗಳು ಖರ್ಚಾಗುತ್ತಿದೆ. ಕಾಂಗ್ರೆಸ್ ಸದನದ ಮುಂದೆ ಮಂಡಿಸಿರುವ ಅಂದಾಜು ಇದು. ಹೆಚ್ಚುಕಡಿಮೆ ಗೆರಿಲ್ಲಾ ಯುದ್ಧದ ಪರಿಸ್ಥಿತಿ ಇರಾಕಿನಲ್ಲಿ ಉಂಟಾಗಿದ್ದು (ವಿಯೆತ್ನಾಂನಲ್ಲಾದಂತೆ) ಅಮೆರಿಕದ ಸೈನಿಕರಿಗೆ ನಿಭಾಯಿಸುವುದು ಕಷ್ಟವಾಗುತ್ತಿದೆ. ಅಮೆರಿಕನ್ ಸೈನಿಕರ ಮೇಲೆ ಹೆಚ್ಚುತ್ತಿರುವ ದಾಳಿಯಿಂದಾಗಿ ಅಮೆರಿಕದಲ್ಲೇ ಇರಾಕಿನ ದುರಾಕ್ರಮಣದ ವಿರುದ್ಧ ಪ್ರತಿಭಟನೆ ಹೆಚ್ಚತೊಡಗಿದೆ. ಅಮೆರಿಕದ ಆಡಳಿತಗಾರರಿಗೆ ಅಮೆರಿಕನ್ ಸೈನಿಕರ ಪ್ರಾಣ ರಕ್ಷಣೆ ಮುಖ್ಯ, ಇತರ ದೇಶಗಳ ಜನರ ಪ್ರಾಣ ನಿಕೃಷ್ಟ. ಕಂಡವರ ಮಕ್ಕಳನ್ನು ಬಾವಿಗೆ ತಳ್ಳಿ ಆಳ ನೋಡುವ ಜಾಯಮಾನ ಅಮೆರಿಕನ್ನರದ್ದು. ಕಳೆದ ಅರ್ಧ ಶತಮಾನದಲ್ಲಿ ಪ್ರಪಂಚದ ನಾನಾ ಕಡೆಗಳಲ್ಲಿ ಅಮೆರಿಕ ಎಷ್ಟು ಅಮಾಯಕ ನಾಗರಿಕರನ್ನು ಆಹುತಿ ತೆಗೆದುಕೊಂಡಿದೆ ಎಂಬುದನ್ನು ಇಲ್ಲಿ ಪಟ್ಟಿ ಮಾಡುವುದು ಅನಗತ್ಯ. ಅದು ಬೇರೆಯೇ ವಿಷಯವಾಗುತ್ತದೆ. ಅದಕ್ಕೇ ಅಮೆರಿಕದ ಆಡಳಿತಗಾರರು ತಮ್ಮ ಸೈನಿಕರನ್ನು ರಕ್ಷಿಸಿಕೊಳ್ಳಲು ಇತರ ದೇಶಗಳ ಸೈನ್ಯದ ನೆರವು ಬಯಸುತ್ತಿರುವುದು.



ದುರಾಕ್ರಮಣಕಾರರಿಗೆ ನೆರವಾಗಿ ಇರಾಕಿ ಜನತೆಯನ್ನು ಹದ್ದುಬಸ್ತಿನಲ್ಲಿರಿಸಿಕೊಳ್ಳಲು ಅಮೆರಿಕ ಭಾರತದ ಸೈನ್ಯದ ನೆರವನ್ನು ಅಪೇಕ್ಷಿಸಿದ್ದು, ಅದಕ್ಕಾಗಿ ವಾಜಪೇಯಿ ಸರಕಾರಕ್ಕೆ ಆಮಿಷಗಳನ್ನು ಒಡ್ಡಿದ್ದು ಸಾಕಷ್ಟು ಸುದ್ದಿ ಮಾಡಿತು. ಅಮೆರಿಕಾಗೆ ಭೇಟಿ ನೀಡಿದ್ದ ಉಪಪ್ರಧಾನಿ ಅದ್ವಾನಿ ಹಾಗೂ ಇತರರಿಗೆ ರಾಜೋಪಚಾರ ನೀಡಿ ಅವರ ಮನವೊಲಿಸಿಕೊಂಡಿದ್ದು ಈಗ ಹಳೆಯ ಕತೆ. ವಿಶ್ವಸಂಸ್ಥೆ ಹಾಗೂ ಪ್ರಪಂಚದ ಜನತೆಯ ಅಭಿಮತವನ್ನು ಧಿಕ್ಕರಿಸಿ ಇರಾಕಿನ ಮೇಲೆ ದುರಾಕ್ರಮಣ ನಡೆಸಿದ ಅಮೆರಿಕವನ್ನು ಖಂಡಿಸಲು ಹಿಂಜರಿದ ವಾಜಪೇಯಿ ನೇತೃತ್ವದ ಸರಕಾರ, ದುರಾಕ್ರಮಣಕಾರರಿಗೆ ನೆರವಾಗಲು ಭಾರತದ ಸೇನೆಯನ್ನು ಕಳಿಸಿ ಕೊಡಬೇಕೆ ಬೇಡವೆ ಎಂದು ವಾರಗಟ್ಟಲೆ ತಿಣುಕಿದ್ದು ನಿಜಕ್ಕೂ ನಾಚಿಕೆಗೇಡು. ಎಡಪಕ್ಷಗಳ, ಪ್ರತಿಪಕ್ಷಗಳ, ಜನತೆಯ ವಿರೋಧವಿಲ್ಲದೇ ಹೋಗಿದ್ದಲ್ಲಿ ಭಾಜಪ ನೇತೃತ್ವದ ಸರಕಾರ, ಅಮೆರಿಕದ ಪ್ರಭೃತಿಗಳನ್ನು ಮೆಚ್ಚಿಸಲು ಭಾರತದ ಸೈನಿಕರನ್ನು ಕೂಲಿ ಸಿಪಾಯಿಗಳಾಗಿ ಬಲಿಕೊಡಲು ಹೇಸುತ್ತಿರಲಿಲ್ಲವೇನೋ ! ಕೊನೆಗಾದರೂ ವಾಜಪೇಯಿ ಸರಕಾರ ಅಮೆರಿಕದ ಕೋರಿಕೆಯನ್ನು ತಿರಸ್ಕರಿಸಿದ್ದು ಭಾರತ ಜನತೆಗೆ ದೊರೆತ ವಿಜಯ ಎನ್ನಬೇಕು. ನಿಜವಾಗಿ ಹೇಳಬೇಕೆಂದರೆ, ಪ್ರಸ್ತುತ ಪರಿಸ್ಥಿತಿಯಲ್ಲಿ ಭಾರತ ಅನುಸರಿಸಬೇಕಾಗಿರುವ ನೀತಿ, ಅಮೆರಿಕ ಮತ್ತು ಬ್ರಿಟನ್‌ಗಳ ದುರಾಕ್ರಮಣವನ್ನು ಸ್ಪಷ್ಟವಾದ ಮಾತುಗಳಲ್ಲಿ ಖಂಡಿಸಿ, ದುರಾಕ್ರಮಣವನ್ನು ತೆರವು ಮಾಡಿ ಅಮೆರಿಕದ ಸೈನಿಕರು ಇರಾಕಿನಿಂದ ಕಾಲ್ತೆಗೆಯಬೇಕೆಂದು ಒತ್ತಾಯ ಮಾಡುವುದು. ಸಾಮ್ರಾಜ್ಯಶಾಹಿ ವಿರುದ್ಧವಾಗಿ, ವಸಾಹತುಶಾಹಿ ವಿರೋಧವಾಗಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಪರಂಪರೆಯನ್ನು ಹೊಂದಿರುವ ಭಾರತ ತಳೆಯಬೇಕಾಗಿರುವ ಧೋರಣೆ ಇದು. ಇರಾಕಿನ ಮೇಲೆ ಅಮೆರಿಕ ನಡೆಸಿದ ಯುದ್ಧ ವಸಾಹತುಶಾಹಿ ಪದ್ಧತಿಯದು ಎನ್ನುವುದರಲ್ಲಿ ಅನುಮಾನವೇ ಇಲ್ಲ. ಹಾಗಾಗಿ ವಿಶ್ವಸಂಸ್ಥೆಯ ಒಳಗೂ ಹಾಗೂ ಹೊರಗೂ ವಸಾಹತುಶಾಹಿಯ ನಿರ್ನಾಮಕ್ಕಾಗಿ ನಿರಂತರವಾಗಿ ಶ್ರಮಿಸಿದ ಹಿನ್ನೆಲೆ ಹೊಂದಿರುವ ಭಾರತ ಅದಕ್ಕನುಗುಣವಾಗಿ ಇರಾಕಿನ ಸ್ವಾತಂತ್ರ್ಯ, ಸಾರ್ವಭೌಮತ್ವಗಳನ್ನು ಎತ್ತಿಹಿಡಿದು, ಅಮೆರಿಕದ ಸೇನೆ ವಾಪಸ್ಸಾಗಬೇಕೆಂದು ಒತ್ತಾಯ ತರುವುದು ಆದ್ಯ ಕರ್ತವ್ಯವಾಗಿದೆ. ಪ್ರಪಂಚದ ಸ್ವಾತಂತ್ರ್ಯಪ್ರೇಮಿ ಜನತೆಯ ಬೆಂಬಲ ಅಂಥ ಉಪಕ್ರಮಕ್ಕೆ ಖಂಡಿತ ಇದೆ. ಭಾಜಪ ನೇತೃತ್ವದಲ್ಲಿರುವ ಎನ್‌ಡಿಎ ಸರಕಾರ ಇನ್ನಾದರೂ ಅಮೆರಿಕದ ಆಡಳಿತಗಾರರನ್ನು ಓಲೈಸುವ ಧೋರಣೆ ತ್ಯಜಿಸಿ ಸ್ವತಂತ್ರ ಭಾರತದ ಸಾಮ್ರಾಜ್ಯಶಾಹಿ ವಿರೋಧಿ ಧೋರಣೆಯನ್ನುಎತ್ತಿಹಿಡಿದು, ಭಾರತದ ಘನತೆಗೆ ಗೌರವ ತರುವ ನೀತಿಯನ್ನು ಅನುಸರಿಸೀತೆ ? ಇರಾಕಿನ ಮೇಲೆ ನಡೆಸಿದ ದಾಳಿ ಪೂರ್ವ ನಿಯೋಜಿತವಾದದ್ದು, ಸುಳ್ಳು ಆಪಾದನೆಗಳ ಮೇಲೆ ಆಧಾರಗೊಂಡ ನಗ್ನ ದುರಾಕ್ರಮಣ ಎನ್ನುವುದು ಸ್ಪಷ್ಟಗೊಂಡಿರುವ ಹಿನ್ನೆಲೆಯಲ್ಲಿ, ವಿಶ್ವಸಂಸ್ಥೆಯಲ್ಲಿ ಅಮೆರಿಕದ ದುರಾಕ್ರಮಣವನ್ನು ಖಂಡಿಸಿ, ಇರಾಕಿನಲ್ಲಿ ಶಾಂತಿ, ಸುವ್ಯವಸ್ಥೆ ನಿರ್ಮಿಸಲು ವಿದೇಶೀ ಸೈನ್ಯಗಳು ಕೂಡಲೇ ವಾಪಸ್ಸಾಗಬೇಕೆಂದು ಒತ್ತಾಯ ತರುವ ನಿರ್ಣಯವನ್ನು ಮಂಡಿಸುವುದು ಜರೂರು ಅಗತ್ಯವಾಗಿದೆ. ಭಾರತ ಸರಕಾರ ಅಂಥ ನಿರ್ಣಯವನ್ನು ಮಂಡಿಸಲು ಕ್ರಮ ತೆಗೆದುಕೊಂಡರೆ ಸಾರ್ಥಕವಾಗುವುದಲ್ಲದೆ, ಸೋಗಲಾಡಿತನಕ್ಕೆ ಪ್ರಾಯಶ್ಚಿತ್ತವೂ ಆಗುತ್ತದೆ. ಇರಾಕಿನಲ್ಲಿ ಶಾಂತಿಸ್ಥಾಪನೆಗೆ ಅತ್ಯಗತ್ಯವಾದ್ದು ಆಕ್ರಮಣಕಾರಿ ಸೈನ್ಯಗಳ ವಾಪಸಾತಿ, ಇರಾಕಿನ ಜನತೆಯ ಸ್ವಾತಂತ್ರ್ಯ, ಸಾರ್ವಭೌಮತ್ವಗಳ ಮನ್ನಣೆ. ಇರುವುದು ಇದೊಂದೇ ಮಾರ್ಗ. ಜಗತ್ತಿನಾದ್ಯಂತ ಜನತೆ ಇದಕ್ಕಾಗಿ ಒತ್ತಾಯ ತರಬೇಕಾಗಿದೆ.

■ ಸೀಯಾರ್ಕೆ

# ಮಂಗಳದ ರಾಜ ವೈಭವ



ಚಂದ್ರ ರಾತ್ರಿಯ ರಾಜ - ರಜನಿಗಾ ಚಂದ್ರಂ ಮಹಾಭೂಷಣಂ– ಎಂಬ ಉಕ್ತಿ ಪರಿಚಿತ. ಬೇರಿನ್ನಾವುದೇ ಕಾಯ ಚಂದ್ರನನ್ನು ಮೀರಿಸುವಂತಿಲ್ಲ. ಆದರೆ ಬೆಳಗಿನ ಜಾವ ಪ್ರಜ್ವಲ ಶುಕ್ರಗ್ರಹವನ್ನು ಕಂಡವರು ಈ ಮಾತನ್ನು ಒಪ್ಪಲಾರರು. ಚಂದ್ರನಿಲ್ಲದಾಗ ಶುಕ್ರನದೇ ಕಾರುಬಾರು. ಇದುವರೆಗೆ ಬೆಳಗಿನ ಜಾವ ಪೂರ್ವದಲ್ಲಿ ಕಾಣುತ್ತಿದ್ದ ಶುಕ್ರ ದಿನೇದಿನೇ ಪೂರ್ವದ ಅಂಚಿಗೆ ಸರಿದು ಆಗಸ್ಟ್ ಮೊದಲ ವಾರದಲ್ಲಿ ಮಾಯವಾಗಿಬಿಡುತ್ತದೆ. ಶುಕ್ರದ ಈ ಪಲಾಯನದಿಂದ ನಸುಕಿನ ಆಕಾಶ ಖಾಲಿಯಾಗಿಬಿಟ್ಟಿತೆಂದುಕೊಳ್ಳುವುದು ಬೇಡ. ನಸುಕಿನಲ್ಲಿ ತಲೆ ಎತ್ತಿ ನೋಡಿದಿರಾದರೆ ನೆತ್ತಿಗೆ ಸ್ವಲ್ಪ ದಕ್ಷಿಣಕ್ಕೆ ಕಾಣುವ ಕೆಂಪು ಚುಕ್ಕೆ ನಿಮ್ಮನ್ನು ಆಕರ್ಷಿಸುವುದು. ತಿಂಗಳುದ್ದಕ್ಕೂ ಈ ಚುಕ್ಕೆಯನ್ನು ಗಮನಿಸುತ್ತಾ ಬನ್ನಿ. ಅದರ ಪ್ರಕಾಶ ದಿನೇ ದಿನೇ ಹೆಚ್ಚುತ್ತಾ ಬರುವುದನ್ನು ಗಮನಿಸಿ. ಇದೇ ಮಂಗಳ. ಇದರ ಪ್ರಕಾಶ ಈ ತಿಂಗಳಲ್ಲಿ ಗರಿಷ್ಠ ಮುಟ್ಟುವುದು. ನಸುಕಿನಲ್ಲಿ ಶುಕ್ರ ಇಲ್ಲದ ಕೊರತೆಯನ್ನು ಇದು ನೀಗಿಸುವುದಾದರೂ, ತಿಂಗಳ ಕೊನೆಗೆ ಸಂಜೆಯ ಆಕಾಶದಲ್ಲಿ, ಶುಕ್ರದೊಡನೆ ಸ್ಪರ್ಧೆಯೋ ಎಂಬಂತೆ ಕಾಣತೊಡಗುವುದು.

ಮಂಗಳದ ಈ ವೈಭವವನ್ನು ಕಂಡು ಆನಂದಿಸಲು ದೂರದರ್ಶಕ ಬೇಕೇ ಬೇಕು ಎಂದೇನಿಲ್ಲ. ೨೦೦೧ರ ಜೂನ್‌ನಲ್ಲಿ ಇದನ್ನು ಕಂಡಿದ್ದವರು, ಈಗ ಅದು ಇನ್ನೂ ಹೆಚ್ಚು ಪ್ರಕಾಶಮಾನವಾಗಿದೆ ಎಂದು ತಿಳಿಯಬಲ್ಲರು. ಪ್ರತಿ ಎರಡು ವರ್ಷಕ್ಕೊಮ್ಮೆ ಹೀಗೆ ಅದರ ಪ್ರಕಾಶ ಹೆಚ್ಚುವುದಾದರೂ ಹೆಚ್ಚಳ ಎಷ್ಟು ಎಂಬುದು ಮುಖ್ಯವಾಗುತ್ತದೆ. ಇದಕ್ಕೆ ಎರಡು ಕಾರಣಗಳಿವೆ – ಮಂಗಳ ಮತ್ತು ಭೂಮಿಯ ದೂರ ಕನಿಷ್ಠ ಆಗಿರುವುದು ಒಂದು, ಮಂಗಳ-ಸೂರ್ಯರ ದೂರವೂ ಕನಿಷ್ಠ – ಹೀಗೆ ಎರಡು ಕನಿಷ್ಠಗಳ ಸಂಯೋಗದಿಂದ ಕಳೆದ ೬೦ ಸಾವಿರ ವರ್ಷಗಳಲ್ಲಿ ಈ ಬಾರಿ ಪ್ರಕಾಶದ ಗರಿಷ್ಠ ಮುಟ್ಟಿದೆ. ಆದ್ದರಿಂದ ಈ ವೈಭವಯುತ ದರ್ಬಾರನ್ನು ನೋಡಲು ಮೋಡ ಯಾವಾಗ ಚಿಕ್ಕ ಅವಕಾಶ ಕೊಟ್ಟರೂ ತಪ್ಪಿಸಬೇಡಿ.

ದೂರದರ್ಶಕ ಇರುವವರು, ಧೂಳು ಒರೆಸಿ, ಸಜ್ಜಾಗಿ ಇಟ್ಟುಕೊಳ್ಳಿ. ಅದು ದೊಡ್ಡದಾದರೆ ಗ್ರಹದ ಮೇಲ್ಮೈಯ ವಿವರಗಳು ಕಾಣುವುದು ಸಾಧ್ಯವಿದೆ. ಪರ್ವತಗಳ ಶಿಖರಗಳು, ಮೇಲ್ಮೈಯಲ್ಲಿ ಅಡ್ಡಾದಿಡ್ಡಿಯಾಗಿ ಹರಡಿರುವ ಕಾಲುವೆಯಂತಹ ರಚನೆಗಳು, ಧ್ರುವ ಪ್ರದೇಶಗಳ ಹಿಮ ಟೋಪಿಗಳು ಇವನ್ನೆಲ್ಲಾ ಕಾಣಬಹುದು. ಆದರೆ ಅಲ್ಲಿಯ ಹವಾಮಾನವೂ ಕೆಡಬಹುದು. ಜುಲೈ ೯ರ ಧೂಳಿನ ಬಿರುಗಾಳಿ ಒಂದು ವಾರವಾದರೂ ತಗ್ಗಿರಲಿಲ್ಲ. ಇಂತಹದೊಂದು ಬಿರುಗಾಳಿ ಎದ್ದರೆ ಇಡೀ ಗೋಳದ ತುಂಬಾ ಧೂಳು ಹರಡಿ, ಗ್ರಹದ ಮೇಲ್ಮೈ ಮುಚ್ಚಿ ಹೋಗುತ್ತದೆ. ಕಂದು ಬಣ್ಣದಿಂದ ಆವೃತವಾದ ಗ್ರಹದ ಪ್ರಕಾಶವೂ ಸ್ವಲ್ಪ ಮಟ್ಟಿಗೆ ಕುಂದಬಹುದು.

*ಮಂಗಳ ಗ್ರಹ ಸಂಜೆಯ ಹೊತ್ತು ಪೂರ್ವದಲ್ಲಿ ಕಾಣತೊಡಗಿದ ಹಾಗೆ, ಶುಕ್ರಗ್ರಹವೂ ಪಶ್ಚಿಮದಲ್ಲಿ ಕಾಣತೊಡಗುವುದೇ ಆಗಸ್ಟ್‌ನ ವಿಶೇಷ. ಗ್ರಹಗಳು ಆಗಸ್ಟ್‌ನಲ್ಲಿ ಎಷ್ಟು ಚಲಿಸುತ್ತವೆ ಎಂಬುದನ್ನು ಬಾಣದ ಉದ್ದ ತೋರಿಸುತ್ತದೆ.*



ಸಂಜೆಯ ಆಕಾಶದಲ್ಲಿ ಕಾಣುತ್ತಿದ್ದ ಗುರುಗ್ರಹ ಈಗ ಮಾಯವಾದಂತೆಯೇ ಲೆಕ್ಕ. ಆದರೆ ಪಶ್ಚಿಮದ ಅಂಚಿನಲ್ಲಿದ್ದ ಬುಧ ದಿನೇದಿನೇ ಮೇಲೇರಿದಂತೆ ಕಾಣುವುದು. ೧೪ರಂದು ಅದು ಗರಿಷ್ಠ ಎತ್ತರದಲ್ಲಿ ಕಂಡಾಗ ಗುರುತಿಸಬಹುದು. ಮೊದಲ ವಾರದಲ್ಲಿ ನಸುಕಿನಲ್ಲಿ ಕಾಣುತ್ತಿದ್ದ ಶುಕ್ರ ಸೂರ್ಯನನ್ನು ಬಳಸಿಬಂದು ತಿಂಗಳ ಕೊನೆಗೆ ಬುಧದ ಜೊತೆ ಸಂಜೆಯ ಆಕಾಶದಲ್ಲಿ ಹಾಜರಾಗುತ್ತದೆ. ಇನ್ನುಳಿದ ಶನಿಗ್ರಹ ಬೆಳಿಗ್ಗೆ ಪೂರ್ವ ದಿಕ್ಕಿನಲ್ಲಿ ಕಾಣುವುದು.

ಸಂಜೆಯ ಆಕಾಶ ಶುಭ್ರವಾಗಿದ್ದಾಗ ವೃಶ್ಚಿಕ-ಧನು ಈ ಭಾಗದಲ್ಲಿ ಆಕಾಶ ಗಂಗೆಯ ವೈಭವ ಕಾಣುವುದು. ಪಶ್ಚಿಮದಲ್ಲಿ ಕನ್ಯಾ, ಹಸ್ತ ಇವುಗಳು ಕ್ಷೀಣವಾಗಿ ಕಾಣುವುವು. ಪೂರ್ವದಲ್ಲಿ ಬೇಸಿಗೆ ತ್ರಿಕೋಣ ಉಜ್ವಲವಾಗಿ ಕಾಣುವುದು. ಸಿಗ್ನಸ್ (ರಾಜಹಂಸ)ದ ದೆನೆಬ್, ಲೈರಾ (ವೀಣಾ)ದ ಅಭಿಜಿತ್ (ವೇಗಾ), ಅಕ್ವಿಲಾ (ಗರುಡ)ದ ಆಲ್ಟೇರ್ (ಶ್ರವಣ) ಇವೇ ತ್ರಿಕೋಣದ ಮೂರು ನಕ್ಷತ್ರಗಳು. ಉತ್ತರದಲ್ಲಿ ಸಪ್ತರ್ಷಿಮಂಡಲ ಸ್ಫುಟವಾಗಿ ಕಾಣುತ್ತದೆಯಾದರೂ ದಕ್ಷಿಣದಲ್ಲಿ ಕ್ರಕ್ಸ್-ದಕ್ಷಿಣ ಶಿಲುಬೆಯನ್ನು ಗುರುತಿಸುವುದು ಕಷ್ಟವಾಗಬಹುದು.

ಹದಿಮೂರರಂದು ಚಂದ್ರ ಮಂಗಳಗ್ರಹದ ಪಕ್ಕವೇ ಕಾಣುತ್ತದೆ. ಹಿಂದಿನ ದಿನ ಹುಣ್ಣಿಮೆ. (ಆ ದಿನ ಅದು ಶ್ರವಣ ನಕ್ಷತ್ರದ ಸಮೀಪ ಇರುತ್ತದೆ.) ಹುಣ್ಣಿಮೆ ಚಂದ್ರನಿದ್ದರೂ ಮಂಗಳ ಪ್ರಕಾಶಮಾನವಾಗಿ ಕಾಣುತ್ತದೆ. ಹದಿಮೂರರ ಬೆಳಗಿನ ಜಾವ ಪರ್ಸಿಯಡ್ ಉಲ್ಕಾವೃಷ್ಟಿ ಗರಿಷ್ಠ ಮುಟ್ಟುತ್ತದೆ. ಗಂಟೆಗೆ ೩೦-೪೦ ಉಲ್ಕೆಗಳು ಕಾಣುವುವಾದರೂ, ಹುಣ್ಣಿಮೆಯ ಚಂದ್ರನ ಬೆಳಕಿನಲ್ಲಿ ಅವು ಸ್ಫುಟವಾಗಿ ಕಾಣಲಾರವು.

### ಖಗೋಳ ದಿನಚರಿ

| | |
|---|---|
| ೫ | ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಯಲ್ಲಿ) |
| ೧೨ | ೬ಗಂ. ೧೮ ನಿ.ಕ್ಕೆ ಹುಣ್ಣಿಮೆ |
| ೧೩ | ಮಂಗಳದ ಸಮೀಪವೇ ಚಂದ್ರ |
| | ಪರ್ಸಿಯಡ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ |
| ೧೪ | ಬುಧಗ್ರಹ ಗರಿಷ್ಠ ಎತ್ತರದಲ್ಲಿ ಕಾಣುವುದು |
| ೨೦ | ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಯಲ್ಲಿ) |
| ೨೩ | ಶನಿಗ್ರಹದ ಪಕ್ಕದಲ್ಲಿ ಚಂದ್ರ |
| ೨೭ | ಅಮಾವಾಸ್ಯೆ ೨೨ಗಂ. ೫೬ ನಿ. |
| ೨೮ | ಸೂರ್ಯಾಸ್ತವಾಗುವಾಗ ಮಂಗಳಗ್ರಹ ಉದಯಿಸುತ್ತದೆ.* |
| ೨೯ | ಬುಧಗ್ರಹದ ಪಕ್ಕ ಚಂದ್ರ |
| ೩೦ | ಮಂಗಳಗ್ರಹ ಅಪರವಿ ಬಿಂದುವಿನಲ್ಲಿ |

(*೨೮ ರಿಂದ ಮುಂದೆ ಮಂಗಳ ಗ್ರಹ ರಾತ್ರಿ ಇಡೀ ಕಾಣುತ್ತದೆ.)

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ ನೆಹರೂ ತಾರಾಲಯ
ಬೆಂಗಳೂರು - ೫೬೦ ೦೦೧



ಇದೆ. ಇಲಾಖೆಯ ಅಧಿಕಾರಿಗಳು ಹಾಡಿಗಳ ಜನರ ವಿಶ್ವಾಸ ಗಳಿಸಲು ಬಗೆ ಬಗೆಯ ಕಸರತ್ತುಗಳನ್ನು ಮಾಡುವ ವಿಚಾರ ಇಂದು ಗುಟ್ಟಾಗಿ ಉಳಿದಿಲ್ಲ. ಗಿರಿಜನರ ಹಾಡಿಗಳಿಗೊಮ್ಮೆ ಭೇಟಿ ನೀಡಬೇಕು. ಅವರೊಂದಿಗೆ ಕುಳಿತುಕೊಂಡು ಅವರ ಬವಣೆಯನ್ನೊಮ್ಮೆ ಗಮನಿಸಬೇಕು. ತಾಳ್ಮೆಯಿಂದ ಮಾನವೀಯತೆಯಿಂದ ಆಲಿಸಬೇಕು. ಆವಾಗ ಈ ಎಲ್ಲ ವಿಷಯಗಳು ಒಂದೊಂದಾಗಿ ಬಯಲಾಗುತ್ತವೆ.

ಗಿರಿಜನ ಹಾಡಿಗಳಲ್ಲಿ ಶಿಕ್ಷಣ ವ್ಯಾಪಕವಾಗಿ ಹರಡಿಕೊಳ್ಳಬೇಕೆನ್ನುವವರು ಹಾಡಿಗಳ ಜನರ

# ಗಿರಿಜನ ಹಾಡಿಗಳಲ್ಲಿ ಶೈಕ್ಷಣಿಕ ಪ್ರಗತಿ

ದಯನೀಯ ಬದುಕನ್ನು, ಹೊಟ್ಟೆಪಾಡಿಗೋಸ್ಕರ ಅವರು ಅನುಭವಿಸುತ್ತಿರುವ ಸಮಸ್ಯೆಗಳ ಪರಂಪರೆಯನ್ನು ಆಳವಾಗಿ ಅವಲೋಕಿಸಬೇಕು. ಇಲ್ಲದಿದ್ದಲ್ಲಿ ಶಿಕ್ಷಣದ ಆದರ್ಶವನ್ನು ಕಾರ್ಯಗತಗೊಳಿಸುವುದು ಸುಲಭಸಾಧ್ಯವಾಗದು.

ಶಿಕ್ಷಣ ಪಡೆಯುವುದು ಪ್ರತಿಯೊಬ್ಬನ ಮೂಲಭೂತ ಹಕ್ಕೆಂದು ಘೋಷಿಸಿಯಾಗಿದೆ. ಶಿಕ್ಷಣ ಪಡೆಯುವವನ ಬದುಕು ಪರಿವರ್ತನೆಯ ಹಾದಿಯತ್ತ ಹೊರಳಿಕೊಳ್ಳುವುದು ಸಹಜ. ಜೀವನ ವಿಕಾಸದ ಗುರಿಗೆ ಶಿಕ್ಷಣ ಅತೀ ಅನಿವಾರ್ಯ. ಹೀಗಿದ್ದರೂ ಈ ಹೈಟೆಕ್ ಯುಗದಲ್ಲಿಯೂ ಶಿಕ್ಷಣ ವ್ಯಾಪಕವಾಗಿ ಹರಡಿಲ್ಲ. ಅದರಲ್ಲಿಯೂ ಗಿರಿಜನ ಹಾಡಿಗಳಲ್ಲಿ ಶಿಕ್ಷಣವೆನ್ನುವುದು ಕನ್ನಡಿಯೊಳಗಣ ಗಂಟಾಗಿದೆ. ರಾಜ್ಯದ ಎಷ್ಟೋ ಹಾಡಿಗಳಲ್ಲಿ ಶಿಕ್ಷಣ ಗಗನ ಕುಸುಮವಾಗಿರುವುದು ಪರಿಸ್ಥಿತಿಯ ಕಟುವಾಸ್ತವವನ್ನು ಬಿಂಬಿಸುತ್ತಿದೆ.

ನಾಗರಿಕ ಸೌಲಭ್ಯಗಳಿಂದ ಬಹು ದೂರವುಳಿದಿರುವ ಗಿರಿಜನರ ಪ್ರತಿಯೊಂದು ಹಾಡಿಗಳಲ್ಲಿಯೂ ನೂರಾರು ಸಮಸ್ಯೆಗಳಿವೆ. ಎಲ್ಲಕ್ಕಿಂತ ಮುಖ್ಯವಾಗಿ ತಲತಲಾಂತರಗಳಿಂದ ಅವರು ಬಾಳಿ ಬದುಕಿರುವ ಹಾಡಿಗಳಿಂದ ಒಕ್ಕಲೆಬ್ಬಿಸುವ ಆತಂಕ ಅವರನ್ನು ಕಾಡುತ್ತಿದೆ.

ಅರಣ್ಯ ಇಲಾಖೆ ಗಿರಿಜನರನ್ನು ನಿರಂತರವಾಗಿ ಮನವೊಲಿಸುವ ಪ್ರಯತ್ನ ಮಾಡುತ್ತಲೇ

ಗಿರಿಜನರ ಹಾಡಿಗಳಲ್ಲಿ ಇಂದು ಬದುಕು ಹಿಂದಿನಂತಿಲ್ಲ. ಅರಣ್ಯದಲ್ಲಿನ ಕಿರು ಉತ್ಪನ್ನಗಳ ಸಂಗ್ರಹ ಕಾರ್ಯ ಅವರಿಗೆ ದುರ್ಗಮವಾಗುತ್ತಿದೆ. ಪರಿಸರವನ್ನು ನಾಶಗೊಳಿಸದೆ ಕೃಷಿ ಮಾಡಿದರೂ ಅದು ಕಾಡಾನೆಗಳಿಗೆ ಆಹಾರವಾಗುತ್ತಿದೆ. ಈ ಕಾರಣಗಳಿಂದಾಗಿ ಗಿರಿಜನರು ಕೂಲಿ ಕೆಲಸವನ್ನು ಅರಸುತ್ತಾ ತೆರಳುತ್ತಿದ್ದಾರೆ. ದೊರೆಯುವ ಅತ್ಯಲ್ಪ ಕೂಲಿ ಜೀವನ ಹೊರೆಯಲು ಸಾಲುತ್ತಿಲ್ಲ.

ಇನ್ನು ಬರದ ಸಮಸ್ಯೆ ರಾಜ್ಯವನ್ನಿಡೀ ಕಳೆದ ಮೂರು ವರ್ಷಗಳಿಂದ ಕಾಡುತ್ತಿದೆ. ಈ ಸಮಸ್ಯೆ ಹಾಡಿಗಳಲ್ಲಿ ಮತ್ತಷ್ಟು ಭೀಕರವಾಗಿದೆ. ಹೊಳೆ, ಕೆರೆಗಳಲ್ಲಿ ನೀರು ಬತ್ತಿರುವ ಕಾರಣ ವನ್ಯಜೀವಿಗಳು ಇಂದು ನಾಡಿನತ್ತ ಧಾವಿಸುತ್ತಿವೆ. ಜಲಾಶಯಗಳ ಹೂಳಿಗೆ ಸಿಲುಕಿ ಅದೆಷ್ಟೋ ಜಿಂಕೆಗಳು, ಹಲವು ಕಾಡಾನೆಗಳು ಕೊನೆಯುಸಿರೆಳೆದಿವೆ. ಇತ್ತೀಚೆಗೆ ಕಬಿನಿ ಜಲಾಶಯದ ಹಿನ್ನೀರಿನಲ್ಲಿ ಆನೆಯೊಂದು ನೀರರಸುತ್ತಾ ಕೆಸರಿಗೆ ಬಿದ್ದು ಮೇಲೇರಲಾಗದೆ ಮೃತಪಟ್ಟಿತು.



ಗಿರಿಜನ ಹಾಡಿಗಳಲ್ಲಿ ಎಲ್ಲೋ ಅಪರೂಪಕ್ಕೆ ಎಂಬಂತಿರುವ ಕೊಳವೆ ಬಾವಿಗಳಲ್ಲಿ ಅಂತರ್ಜಲ ತಳ ಮುಟ್ಟಿದೆ. ಇಷ್ಟೆಲ್ಲಾ ತೊಂದರೆಗಳನ್ನು ಹೊದ್ದುಕೊಂಡಿರುವ ಗಿರಿಜನರಲ್ಲಿ ಶಿಕ್ಷಣದತ್ತ ಒಲವು ಮೂಡಿಸುವ ಕೆಲಸ ಸಮರ್ಥನೀಯವಾಗಿ ನಡೆದಿಲ್ಲ.

ಆದರೆ ಗಿರಿಜನ ಹಾಡಿಗಳಲ್ಲಿ ಮನಸ್ಸು ಮಾಡಿದರೆ ಶಿಕ್ಷಣದ ಬಗ್ಗೆ ಒಲವು ಮೂಡಿಸುವುದು ಕಷ್ಟವಾಗದು ಅನ್ನುವುದಕ್ಕೆ ಅಲ್ಲೊಂದು ಇಲ್ಲೊಂದು ನಿದರ್ಶನಗಳೂ ಇವೆ! ಹೆಗ್ಗಡದೇವನ ಕೋಟೆಯ ಬಳ್ಳೆ ಹಾಡಿಯಲ್ಲಿ ಅಂತಹ ಒಂದು ಉದಾಹರಣೆ ಇದೆ. ನೂರಾರು ಸಮಸ್ಯೆಗಳಿಗೆ ಸಿಲುಕಿರುವ ಸುಮಾರು ೫೦೦ರಷ್ಟು ಜನಸಂಖ್ಯೆಯಿರುವ ಈ ಹಾಡಿಯಲ್ಲಿ ಶೈಕ್ಷಣಿಕ ಕ್ರಾಂತಿಯೇ ನಡೆದಿದೆ.

ಹಲವು ವರ್ಷಗಳ ಹಿಂದೆ ಈ ಹಾಡಿಯಲ್ಲಿ ಶಾಸ್ತ್ರಕ್ಕೆಂಬಂತೆ ಸರ್ಕಾರಿ ಶಾಲೆಯಿತ್ತು. ಅದರ ಅವ್ಯವಸ್ಥೆ ಹೇಳತೀರದಾಗಿತ್ತು. ಕಟ್ಟಡ ಪಳೆಯುಳಿಕೆಯಂತಿತ್ತು. ಎರಡು ವರ್ಷಗಳ ಹಿಂದೆ ಗಿರಿಜನರು ಈ ಶಾಲೆಯನ್ನು ದತ್ತು ತೆಗೆದುಕೊಂಡರು. ಒಂಭತ್ತು ಮಂದಿ ಸದಸ್ಯರ ಸಮಿತಿ ರಚಿಸಿ ಶಾಲಾ ಕಟ್ಟಡ ನಿರ್ಮಿಸಿದರು. ಶಾಲೆಯ ಹೆಂಚು ಬಿಟ್ಟು ಉಳಿದೆಲ್ಲವನ್ನೂ ಗಿರಿಜನರೇ ಹೊಂದಿಸಿದರು. ಇಂದು ಈ ಶಾಲೆಯಲ್ಲಿ ನೂರಾರು ಚಿಣ್ಣರು ವಿದ್ಯಾಭ್ಯಾಸ ಪಡೆಯುತ್ತಿದ್ದಾರೆ, ತಮ್ಮ ಶೈಕ್ಷಣಿಕ ಬದುಕು ರೂಪಿಸಿಕೊಳ್ಳುತ್ತಿದ್ದಾರೆ. ಬಳ್ಳೆ ಹಾಡಿಯ ಮಾದರಿ ಕಾರ್ಯ ಎಲ್ಲ ಹಾಡಿಗಳಲ್ಲಿಯೂ ವಿಸ್ತರಿಸಬಾರದಂತಿಲ್ಲವಲ್ಲ?


**ಕೇಶವ ಪ್ರಸಾದ್ ಬಿ. ಕಿದೂರು**
೩೪೭, ೪ನೇ ಹಂತ, ೪ನೇ ಅಡ್ಡರಸ್ತೆ, ರೂಪಾನಗರ
[illegible], ಮೈಸೂರು - ೫೭೦ ೦೦೫

# ಜನರ ಅಜ್ಞಾನ ಮತ್ತು ಬಡತನ ಎರಡೇ ನಮ್ಮ ಪ್ರಜಾಪ್ರಭುಗಳ ಪಾಥೇಯ

**ಎಂ. ವಿ. ಭಟ್**

೧೯೭೭ರಲ್ಲಿ ನಾನು ಮಂಗಳೂರು ಕೇಂದ್ರೀಯ ವಿದ್ಯಾಲಯದಲ್ಲಿ ಅಧ್ಯಾಪಕನಾಗಿದ್ದೆ. ಅದೇ ವರ್ಷ ಆಗೋಸ್ತಿನಲ್ಲಿ ಕರ್ಣಾಟಕದ ಒಂದು ನಗರದಿಂದ ಓರ್ವ ಅಧ್ಯಾಪಿಕೆ ಅಲ್ಲಿಗೆ ವರ್ಗವಾಗಿ ಬಂದಳು. ಬಂದ ಕೆಲವೇ ದಿನಗಳಲ್ಲಿ ಮಾತುಗಳಿಂದ, ಹಾವಭಾವಗಳಿಂದ ಆಕೆ ಮಾನಸಿಕವಾಗಿ ಅಸ್ವಸ್ಥೆ ಎಂಬುದು ನನ್ನ ಗಮನಕ್ಕೆ ಬಂತು.

ಆಕೆಯ ಪತಿ ಖಾಸಗಿ ಕಂಪನಿಯೊಂದರಲ್ಲಿ ಉನ್ನತ ಹುದ್ದೆಯಲ್ಲಿದ್ದು ಕೈ ತುಂಬ ಸಂಬಳ ಬರುತ್ತಿದ್ದರೂ, ಸದಾ ಊರೂರು ಸಂಚರಿಸಬೇಕಾದ ಸ್ಥಿತಿಯಲ್ಲಿದ್ದನೆಂದೂ, ಮದುವೆಯಾಗಿ ಏಳೆಂಟು ವರ್ಷ ಸಂದು ಹೋಗಿದ್ದರೂ ಮಕ್ಕಳಾಗಿರಲಿಲ್ಲವೆಂದೂ, ಪರಿಣಾಮವಾಗಿ ಅವಳ ಗಾರ್ಹಸ್ಥ್ಯ ಜೀವನವು ಸುಖ, ಶಾಂತಿದಾಯಕವಾಗಿರಲಿಲ್ಲವೆಂದೂ ತಿಳಿಯಿತು.

ಒಂದು ದಿನ ಆಕೆ ನನ್ನ ಬಳಿಗೆ ಬಂದು "ಸಾರ್, ಉಡುಪಿಯ ಹತ್ತಿರ ಒಬ್ಬರು ಮಂತ್ರವಾದಿಗಳು ಇದ್ದಾರಂತೆ. ಜಾತಕವನ್ನೂ ನೋಡುತ್ತಾರಂತೆ. ಗ್ರಹಚಾರಗಳಿಗೆ ಪರಿಹಾರವನ್ನೂ ಮಾಡಿಕೊಡುತ್ತಾರಂತೆ. ನಿಮಗೆ ಅವರು ಯಾರು, ಎಲ್ಲಿರುವುದೆಂದು ಗೊತ್ತಾ?" ಎಂದು ಕೇಳಿದಳು.

"ಗೊತ್ತಿಲ್ಲಮ್ಮಾ! ಹೆಸರು ಕೇಳಿದ್ದೇನೆ, ಅಷ್ಟೆ!" ಅಂದೆ.

"ನೀವು ಸಂಸ್ಕೃತ ಪಂಡಿತರು. ವೇದಾಧ್ಯಯನ ಮಾಡಿದವರು. ಹಾಗಾಗಿ ನಿಮಗೆ ಗ್ರಹಚಾರ ದೋಷ, ಮಂತ್ರ ತಂತ್ರಗಳ ಬಗ್ಗೆ ಹೆಚ್ಚು ಗೊತ್ತಿರಬಹುದೆಂದು ನಿಮ್ಮ ಹತ್ತಿರ ಕೇಳಿದೆ" ಎಂದೂ ಹೇಳಿದಳು.

ಸ್ವಲ್ಪ ವಿರಮಿಸಿದ ನಂತರ "ಸ್ವಲ್ಪ ವಿಚಾರಿಸಿ ಹೇಳುತ್ತೀರಾ?" ಎಂದು ಆಮೇಲೆ ಕೇಳಿದಳು. ಆಗಬಹುದೆಂದೆ. ಮಂತ್ರವಾದಿಯ ಹೆಚ್ಚಿನ ಮಾಹಿತಿಯ ಬಗ್ಗೆ ಉಡುಪಿಯಲ್ಲಿರುವ ನನ್ನ ಗೆಳೆಯರೊಬ್ಬರಿಗೆ ಅಂದೇ ಪತ್ರವನ್ನೂ ಬರೆದೆ.

ಒಂದು ವಾರದಲ್ಲಿ ಮಂತ್ರವಾದಿಯ ಮನೆ, ವಿಳಾಸ, ಅಲ್ಲಿಗೆ ಹೋಗುವ ದಾರಿ, ಬಸ್ಸು ಇತ್ಯಾದಿ ವಿವರಗಳೊಂದಿಗೆ ಗೆಳೆಯನ ಪತ್ರ ಬಂತು.

"ಅವರು ಎಲ್ಲಾ ಬಗೆಯ ಕಷ್ಟಗಳಿಗೂ ಪರಿಹಾರ ಸೂಚಿಸುತ್ತಾರಲ್ಲದೆ, ಕಷ್ಟ ನಿವಾರಣೆಗೆ ಶಾಂತಿ, ಪೂಜೆಯನ್ನೂ ಮಾಡುತ್ತಾರೆ. ದಕ್ಷಿಣೆ ಇಷ್ಟೇ ಕೊಡಬೇಕೆಂದೇನೂ ಹೇಳುವುದಿಲ್ಲ. ಸಂತೋಷದಿಂದ ಕೊಟ್ಟಿದ್ದನ್ನು ತೆಗೆದುಕೊಳ್ಳುತ್ತಾರೆ. ಮಂಗಳವಾರ, ಶುಕ್ರವಾರ ಮತ್ತು ಶನಿವಾರಗಳಂದು ಮಾತ್ರ ಶಾಂತಿ ಪೂಜೆ. ಎರಡು ಕುಡುಕೆ ಹಸುವಿನ ತುಪ್ಪ, ಎರಡು ತೆಂಗಿನಕಾಯಿ, ಸ್ವಲ್ಪ ಕೆಂಪು ಹೂ ತೆಗೆದುಕೊಂಡು ಬರಬೇಕು. ನಕ್ಷತ್ರ ರಾಶಿ ತಿಳಿದಿರಬೇಕು. ಬರುವ ದಿನವನ್ನು ಅವರಿಗೆ ಮೊದಲೇ ತಿಳಿಸಬೇಕು," ಎಂದೂ ಪತ್ರದಲ್ಲಿ ಬರೆದಿದ್ದರು.

ಪತ್ರವನ್ನು ನಾನು ಅಧ್ಯಾಪಿಕೆಗೆ ಕೊಟ್ಟೆ. ಅದನ್ನು ನೋಡಿ ಆಕೆಗೆ ತುಸು ಸಮಾಧಾನವಾಗಿರಬೇಕು.

ಒಂದು ವಾರದನಂತರ ಆಕೆ ಇನ್ನೊಮ್ಮೆ ನನ್ನ ಬಳಿಗೆ ಬಂದು "ಸಾರ್, ನಾನು ಅವರಿಗೆ ಪತ್ರ ಬರೆದಿದ್ದೇನೆ. ಶುಕ್ರವಾರದಂದು ಬೆಳಿಗ್ಗೆ ಬರುತ್ತೇನೆಂದೂ ತಿಳಿಸಿದ್ದೇನೆ. ಅಂದು ನಮಗೆ ಹೇಗೂ ರಜೆಯೂ ಇದೆ. ನೀವೂ ಬರಬೇಕೆಂದು" ಹೇಳಿದಳು.



ಈ ತಿಂಗಳಿನಲ್ಲಿ ಒಂದೂ ಸರ್ಕಾರಿ ರಜೆ ದಿನವಿಲ್ಲ... ಅದಕ್ಕೇ ನಿಮ್ಮ ನೆನಪಾಗಿ 'ಶೋಕರಜೆ'ಯ ವಿಚಾರ ಬಂತು...

"ಇಲ್ಲಮ್ಮಾ! ಸಾರಿ, ನಾನು ಬರುವುದಿಲ್ಲ. ನನಗೆ ಇದರಲ್ಲೆಲ್ಲಾ ವಿಶ್ವಾಸ ಕಡಿಮೆ. ತಪ್ಪಾಗಿ ತಿಳಕೊಳ್ಳಬೇಡಿ. ನೀವು ಒಬ್ಬರೇ ಹೋಗಬಹುದು" ಅಂದೆ.

"ಇಲ್ಲ ಸರ್, ನೀವು ಬರಲೇಬೇಕು. ನಾನು ತುಂಬಾ ಕಷ್ಟದಲ್ಲಿದ್ದೇನೆ. ನನಗೆ ಈ ಊರಿನ ಪರಿಚಯವೂ ಇಲ್ಲ, ದಯಮಾಡಿ ಬನ್ನಿ" ಎಂದು ಒತ್ತಾಯಿಸಿದಳು. ಒಪ್ಪಿಕೊಂಡೆ. ಮನೆಗೆ ಬಂದು ಪತ್ನಿಗೆ ಎಲ್ಲವನ್ನೂ ಹೇಳಿದೆ. ವಿಶೇಷ ಪರಿಚಯವಿಲ್ಲದ ಹೆಂಗಸೊಬ್ಬಳೊಂದಿಗೆ ನಾನೊಬ್ಬನೇ ಹೋಗುವುದು ಸರಿ ಅಲ್ಲ, ನೀನೂ ಬಾ, ಅಂದೆ. 'ಹೂಂ' ಅಂದಳು.

ಹೋಗುವ ದಿನದಂದು ಬೆಳಿಗ್ಗೆ ಆಕೆ ನಮ್ಮ ಮನೆಗೆ ಬಂದಳು. ನಾನು ಪತ್ನಿ ಹೊರಟು ಹೊರಗೆ ನಿಂತಿದ್ದೆವು. ಪತ್ನಿಯನ್ನು ತೋರಿಸುತ್ತಾ ನಾನು, "ಇವಳೂ ನಮ್ಮೊಂದಿಗೆ ಬರುತ್ತಾಳಂತೆ. ಇವಳಿಗೆ ನಿಮ್ಮಂತೆ ಮಂತ್ರ ತಂತ್ರ, ಮಾಟ, ಪೂಜೆ-ಪುನಸ್ಕಾರಗಳಲ್ಲಿ ನಂಬಿಕೆ ಜಾಸ್ತಿ" ನಸುನಗುತ್ತಾ ಹೇಳಿದೆ.

"ಒಳ್ಳೆಯದೇ ಆಯಿತು ಸಾರ್, ಆದರೆ ಮಂಗಳ ಕಾರ್ಯಗಳಿಗೆ ಮೂವರು ಹೋಗಬಾರದಲ್ಲಾ?" ಅಂದಳು.

"ಹಾಗಾದರೆ ಒಂದು ಕೆಲಸ ಮಾಡೋಣ. ನೀವಿಬ್ಬರೂ ಹೊರಟುಹೋಗಿ, ಬಸ್‌ಸ್ಟ್ಯಾಂಡಿನಲ್ಲಿ ನಿಂತುಕೊಳ್ಳಿ. ನಾನು ಕಾಲುಗಂಟೆ ಬಿಟ್ಟು ಬರುತ್ತೇನೆ. ಮನೆಯಿಂದ ಹೊರಡುವಾಗ ಮೂವರು ಇರಬಾರದು, ಅಷ್ಟೆ!" ಅಂದೆ. ಒಪ್ಪಿದಳು. ಇಬ್ಬರೂ ಹೊರಟುಹೋದರು. ನಾನು ಅವಳ ಅಂಧ ವಿಶ್ವಾಸವನ್ನು ಮನಸ್ಸಿನಲ್ಲೇ ಶಪಿಸಿಕೊಂಡು ಸ್ವಲ್ಪ ಹೊತ್ತಿನ ನಂತರ ಹೋದೆ.

ಮಂತ್ರವಾದಿಯ ಮನೆಗೆ ತಲುಪಿದಾಗ ಗಂಟೆ ಹನ್ನೊಂದಾಗಿತ್ತು. ಶಿಕ್ಷಿತರು, ಅಶಿಕ್ಷಿತರು, ದೊಡ್ಡ ದೊಡ್ಡ ಅಧಿಕಾರಿಗಳೆಂದು ಸುಮಾರು ಹತ್ತಿಪ್ಪತ್ತು ಜನರು ನೆರೆದಿದ್ದರು.

ಮಂತ್ರವಾದಿ, ಯಾನೆ ಜೋಯಿಸರು ಕವಡೆಗಳನ್ನು ಅತ್ತಿತ್ತ ಮಾಡಿ, ಕೂಡಿಸಿ, ಕಳೆದು ಒಬ್ಬರಿಗೆ, ಅವರಿಗೆ ಬಂದೊದಗಿದ ವಿಪತ್ತುಗಳಿಗೆ ಕಾರಣವನ್ನು ಹೇಳುತ್ತಿದ್ದರು. ನಾವು ಸ್ವಲ್ಪ ಹೊತ್ತು ಮೌನವಾಗಿ ಕುಳಿತುಕೊಂಡಮೇಲೆ ಜೋಯಿಸರು ನನ್ನನ್ನು ನೋಡಿ "ಏನು ಬಂದಿರಿ?" ಎಂದು ಕೇಳಿದರು.

ನಾನು ರೋಗಿಯ ಪರಿಚಯ ಮಾಡುತ್ತಾ ವಿಷಯವನ್ನು ಅರುಹಿದೆ. "ಸರಿ, ಗೊತ್ತಾಯಿತು. ಅವರ ಕಷ್ಟವೇನೆಂಬುದೂ ತಿಳಿದಿದೆ. ಪ್ರಾಯಶ್ಚಿತ್ತ ಮಾಡಬೇಕಾಗಿದೆ. ಹೂ ತುಪ್ಪ ತಂದಿದ್ದೀರೇನು?" ಎಂದು ಕೇಳಿದರು. "ಹೌದು" ಎಂದು ಹೇಳಿ ತಂದ ವಸ್ತುಗಳನ್ನು ಅವರ ಮುಂದೆ ಇಟ್ಟದ್ದಾಯಿತು. "ಸರಿ, ಸ್ವಲ್ಪ ಕುಳಿತುಕೊಳ್ಳಿ. ಇವರನ್ನೆಲ್ಲಾ ಕಳುಹಿಸಿದಮೇಲೆ ಶಾಂತಿ ಮಾಡೋಣ" ಅಂದು ಹೇಳಿ ಶಾಂತಿ ಸಾಮಗ್ರಿಗಳನ್ನು ಒಳಗಿಟ್ಟು ಬಂದರು.

ಎಲ್ಲರನ್ನೂ ಕಳುಹಿಸಿಕೊಟ್ಟ ಮೇಲೆ ಕೊಟ್ಟಿಗೆಯ ಜಗಲಿಯಲ್ಲಿ ರೋಗಿಯನ್ನು ಕುಳ್ಳಿರಿಸಿ, ಶಾಂತಿ, ಹೋಮ ಆರಂಭಿಸಿದರು. ತೆಂಗಿನಕಾಯಿ ಒಂದನ್ನು ಎಲೆ ಅಡಿಕೆ ಸಹಿತ ಇಟ್ಟು, ಯಥಾಶಕ್ತಿ ಕಾಣಿಕೆ ಇಡಲು ಹೇಳಿದರು. ಆಕೆ ಇನ್ನೂರಿಟ್ಟು ನಮಸ್ಕರಿಸಿದಳು.

ಮಂತ್ರವಾದಿ ಏನೋ ಜಪಿಸುತ್ತಾ, ಅಗ್ನಿಗೆ ಕೆಂಪು ಹೂಗಳನ್ನು ಹಾಕಿದರು. ಆಜ್ಯವನ್ನು ಸುರಿದರು. ಹವನ ಮಾಡುವಾಗ ಸ್ವಲ್ಪವಾದರೂ ಹೊಗೆ ಬರುವುದು ಸ್ವಾಭಾವಿಕ. ಆದರೆ ಈ ಹವನ ಕ್ರಿಯೆಯ ವೇಳೆ ಹೊಗೆ ಹೊರಡಲೇ ಇಲ್ಲ. ಇಟ್ಟ ಕಟ್ಟಿಗೆಯ ತುಂಡು ಚೆನ್ನಾಗಿ ಉರಿಯಿತು. ''ನೋಡಿ, ನಿಮ್ಮ ಕಷ್ಟಗಳೆಲ್ಲಾ ಪರಿಹಾರವಾಗಿದೆ. ಆದುದರಿಂದಲೇ ಹೊಗೆ ಬರಲೇ ಇಲ್ಲ. ಇದೇ ಲಕ್ಷಣ. ಕೆಲವರಿಗೆ ಪ್ರಾಯಶ್ಚಿತ್ತ ಮಾಡುವಾಗ ವಿಪರೀತ ಹೊಗೆ ಬರುತ್ತದೆ. ಕಷ್ಟ ಪರಿಹಾರವಾಗಲಿಲ್ಲವೆಂದೇ ಅದರ ಅರ್ಥ... ಹೋಗಿ, ಒಳ್ಳೆಯದಾಗುತ್ತದೆ. ನಿಮ್ಮ ಗಂಡನೂ ಬಂದಿದ್ದರೆ ಚೆನ್ನಾಗಿತ್ತು. ಇರಲಿ, ಇನ್ನೊಮ್ಮೆ ಒಟ್ಟಿಗೇ ಬಂದುಬಿಡಿ'' ಎಂದು ಹೇಳಿ, ಹೋಮದ ಭಸ್ಮವನ್ನು ಅವರೇ ರೋಗಿಯ ಹಣೆಗೆ ತಾಗಿಸಿ ಸ್ವಲ್ಪ ಭಸ್ಮವನ್ನು ಕಾಗದದಲ್ಲಿ ಮಡಚಿಕೊಟ್ಟು ಶುಕ್ರವಾರ ಮತ್ತು ಮಂಗಳವಾರ ಸ್ನಾನದ ನಂತರ ಮುಖಕ್ಕೆ ಹಚ್ಚಿಕೊಳ್ಳಿ ಎಂದು ಹೇಳಿದರು.

ಹೆಂಗಸಿಗೆ ತುಂಬಾ ಸಂತೋಷವಾಯಿತು. ನೂರರ ಎರಡು ನೋಟುಗಳನ್ನು ಅವರ ಪಾದ ಕಮಲದಲ್ಲಿಟ್ಟು, ವಂದಿಸಿ ಹೊರಬಂದಳು.

ಹಿಂದಕ್ಕೆ ಬರುವಾಗ ನಾನು ''ಪುನಃ ದಕ್ಷಿಣೆ ಕೊಡಬೇಕಾಗಿದ್ದಿಲ್ಲ. ನೂರು ಕೊಟ್ಟರೂ ಸಾಕಾಗಿತ್ತು.'' ಅಂದೆ. ''ಮೂರು ಅಪಶಕುನ ಸಂಖ್ಯೆಯಲ್ಲಾ, ಸಾರ್? ಹಾಗಾಗಿ ನಾಲ್ಕು ನೂರು ಮಾಡಿದೆ'' ಅಂದಳು.

ಪ್ರಾಯಶ್ಚಿತ್ತ ಮಾಡಿಸಿಕೊಂಡು ಬಂದ ಒಂದು ವಾರದ ನಂತರ ನಮ್ಮ ಮನೆಗೆ ಬಂದ ಉಡುಪಿಯ ಎಲ್‌ಐಸಿ ಏಜೆಂಟರೊಬ್ಬರ ಹತ್ತಿರ ಮಾತನಾಡುವಾಗ ಈ ವಿಷಯ ಬಂತು. ಆಗ ಅವರು ಹೇಳಿದರು : ''ಬರೇ ಮೋಸ ಸ್ವಾಮಿ, ಅದು. ಇಟ್ಟ ದಕ್ಷಿಣೆ ದೊಡ್ಡ ಸಂಖ್ಯೆಯದ್ದಾದರೆ ತುಪ್ಪದೊಂದಿಗೆ ತುಂಬಾ ಕರ್ಪೂರ ಮಿಶ್ರ ಮಾಡಿ ಹೋಮ ಮಾಡುತ್ತಾರೆ. ಆಗ ಹೊಗೆ ಬರುವುದೇ ಇಲ್ಲ. ದಕ್ಷಿಣೆ ಕಡಿಮೆ ಕಂಡುಬಂದರೆ ಕರ್ಪೂರ ಹಾಕದೆ ತುಪ್ಪ ಹೊಯ್ಯುತ್ತಾರೆ. ಹೊಗೆ ಹೊರಡುತ್ತದೆ. 'ನಿಮ್ಮ ಕಷ್ಟ ಸಂಪೂರ್ಣ ಪರಿಹಾರವಾಗಲಿಲ್ಲ, ಇನ್ನೊಮ್ಮೆ ಬಂದು ಪ್ರಾಯಶ್ಚಿತ್ತ ಮಾಡಿಸಿಕೊಂಡು ಹೋಗಿ,' ಅನ್ನುತ್ತಾರೆ. ಸಂತೋಷದಲ್ಲಿ ಕೊಟ್ಟದ್ದನ್ನು ತೆಗೆದುಕೊಳ್ಳುತ್ತೇನೆ ಎಂಬುದರ ಗುಟ್ಟು ಇಷ್ಟೇ!.... ಕಷ್ಟ ಪರಿಹಾರವಾಯಿತೆಂದು ತಿಳಕೊಂಡ ಜನರು ದೊಡ್ಡ ಮೊತ್ತವನ್ನೇ ಕೊಟ್ಟು ಹೋಗುತ್ತಾರೆ'' ಎಂದು ಹೇಳಿದರು. ಅದನ್ನು ಕೇಳಿ ನಮ್ಮ ದೇಶದಲ್ಲಿ ಮೂಢನಂಬಿಕೆಯ ದೆಸೆಯಿಂದ ಶಿಕ್ಷಿತರೆಂದೆನಿಸಿಕೊಂಡ ಜನರೂ ಈ ರೀತಿ ಮೋಸ ಹೋಗುತ್ತಾರಲ್ಲ ಎಂದು ಮನಸ್ಸಿನಲ್ಲೇ ಬೇಸರಪಟ್ಟುಕೊಂಡೆ.

ಮುಂದಿನ ವರ್ಷ ಆಕೆ ಪುನಃ ತನ್ನ ಊರಿಗೇ ವರ್ಗಾಯಿಸಿಕೊಂಡು ಹೋದಳು. ಮುಂದೆಯೂ ಆಕೆಗೆ ಮಕ್ಕಳು ಆಗಲಿಲ್ಲ. ಕಷ್ಟಗಳು ತೊಲಗಿ ಹೋಗಲಿಲ್ಲವೆಂದು ಯಾರೋ ಹೇಳಿದರು.

* * *

ನಮ್ಮ ಮನೆಯ ಹತ್ತಿರ ಓದು ಬರಹ ಸಹ ಬಾರದ ಒಬ್ಬ ಮಂತ್ರವಾದಿ ಇದ್ದಾನೆ. ಹಳ್ಳಿಯ ಜನರು ತಮ್ಮ ಮಕ್ಕಳಿಗೆ ಏನು ಕಾಯಿಲೆ ಬಂದರೂ ಭೂತಪ್ರೇತಗಳ ಪೀಡಾ ಪರಿಹಾರಕ್ಕಾಗಿ ಮೊದಲು ಅವನಲ್ಲಿಗೇ ಕರೆದುಕೊಂಡು ಹೋಗುತ್ತಾರೆ. ಅವನು, ಅವರು ಕೊಟ್ಟ ದುಡ್ಡನ್ನು ಕಟ್ಟಿಕೊಂಡು ಮಂತ್ರ ಮಾಡಿ ರೋಗಿಯ ಕೊರಳಿಗೆ ತಾಯಿತ ಕಟ್ಟಿ, ಕೈಗೆ ಏಳು ಗಂಟುಗಳುಳ್ಳ ಕಪ್ಪು ನೂಲನ್ನು ಕಟ್ಟಿ ಕಳುಹಿಸಿಕೊಡುತ್ತಾನೆ. ಮಗುವಿಗೆ ಕಾಯಿಲೆ ಗುಣವಾಗುವುದಿಲ್ಲ. ಕೊನೆಗೆ ಡಾಕ್ಟರರ ಬಳಿಗೆ ಕರೆದುಕೊಂಡು ಹೋಗುತ್ತಾರೆ. ಪ್ರಯೋಜನವಾಗದೆ ಮಗು ತೀರಿಹೋಗುತ್ತದೆ. ಹೀಗೆ ವರ್ಷದಲ್ಲಿ ಹತ್ತಿಪ್ಪತ್ತು ಮಕ್ಕಳನ್ನಾದರೂ ಆತ ಕೊಲ್ಲುತ್ತಾನೆ. ಸ್ವಾರಸ್ಯವೆಂದರೆ ಅವನ ಮೊಮ್ಮಕ್ಕಳಿಗೆ ಏನಾದರೂ ಕಾಯಿಲೆ ಬಂದರೆ ಅವನು ಅವರನ್ನು ಎತ್ತಿಕೊಂಡು ನನ್ನ ಮಗನ ಕ್ಲಿನಿಕಿಗೆ ಓಡಿ ಹೋಗುತ್ತಾನೆ. ಹೇಗಿದೆ ನೋಡಿ!

* * *

ನಮ್ಮ ತೋಟದ ಎಳನೀರುಗಳನ್ನು ಕೊಂಡು ಹೋಗಲು ತಿಂಗಳಿಗೊಮ್ಮೆ ಹತ್ತಿರದ ಎಳನೀರ ವ್ಯಾಪಾರಿಯೊಬ್ಬ ಬರುತ್ತಾನೆ. ಅವನು ಆರು ತಿಂಗಳಿಗೊಮ್ಮೆ ದಕ್ಷಿಣ ಕನ್ನಡ ಜಿಲ್ಲೆಯ ಒಂದು ಪ್ರಸಿದ್ಧ ಯಾತ್ರಾಸ್ಥಳಕ್ಕೆ ಹೋಗಿ, ಇನ್ನೂರು ಮುನ್ನೂರು ಖರ್ಚು ಮಾಡಿ, ತಲೆಮುಡಿ ಒಪ್ಪಿಸಿ, ಕಾಣಿಕೆ ಹಾಕಿ ಬರುವ ರೂಢಿ ಇಟ್ಟುಕೊಂಡಿದ್ದ. ಒಮ್ಮೆ ಅವನಿಗೆ ಆರೇಳು ತಿಂಗಳು ಕಳೆದರೂ, ವ್ಯಾಪಾರದಲ್ಲಿ ಇಳಿಮುಖವಾಗಿ ದುಡ್ಡಿಲ್ಲದೆ ಅಲ್ಲಿಗೆ ಹೋಗಲು ಸಾಧ್ಯವೇ ಆಗಲಿಲ್ಲ. ಈ ಎಲ್ಲಾ ಕಾರಣಗಳಿಂದ ಸಾಲದ ಹೊರೆ ಹೊತ್ತುಕೊಂಡು ಜೀವನದಲ್ಲಿ ನಿರಾಶನಾಗಿ

## ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯ ಸಾಹಿತ್ಯ ಪ್ರಚಾರ ಆಂದೋಲನ

ಸುದ್ದಿಚಿತ್ರ





ಜನಸಾಮಾನ್ಯರಿಗೆ ಆರೋಗ್ಯದ ಬಗ್ಗೆ ಅರಿವು ಮೂಡಿಸುವ ನಿಟ್ಟಿನಲ್ಲಿ ನವಕರ್ನಾಟಕ ಪ್ರಕಾಶನ ಮತ್ತು ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು ಜಂಟಿಯಾಗಿ ಆಯೋಜಿಸಿರುವ 'ವೈದ್ಯ ಸಾಹಿತ್ಯ ಪ್ರಚಾರ ಆಂದೋಲನ'ದ ಪುಸ್ತಕ ಪ್ರದರ್ಶನ ಮತ್ತು ಮಾರಾಟ ಕಾರ್ಯಕ್ರಮವು ವಿವಿಧ ಆಸ್ಪತ್ರೆಗಳಲ್ಲಿ ನಡೆಯುತ್ತಿದೆ. ದಿನಾಂಕ ೦೭.೦೭.೦೩ರಂದು ವೈದ್ಯಕೀಯ ಶಿಕ್ಷಣ ನಿರ್ದೇಶಕಿಯಾದ ಡಾ॥ ಆರ್. ಸೀತಾಲಕ್ಷ್ಮಿ ಅವರು ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಕಾರ್ಯಕ್ರಮವನ್ನು ಉದ್ಘಾಟಿಸಿ ಚಾಲನೆ ನೀಡಿದರು. ಈ ಕಾರ್ಯಕ್ರಮ ಪ್ರತಿ ಆಸ್ಪತ್ರೆಯಲ್ಲಿ ಒಂದು ವಾರ ಕಾಲ ನಡೆಯಲಿದೆ. ನವಕರ್ನಾಟಕ ಪ್ರಕಾಶನದ ವ್ಯವಸ್ಥಾಪಕ ನಿರ್ದೇಶಕ ಆರ್. ಎಸ್. ರಾಜಾರಾಮ್, ವೈದ್ಯ ಸಾಹಿತ್ಯ ಪರಿಷತ್ ಅಧ್ಯಕ್ಷೆ ಡಾ॥ ವಸುಂಧರಾ ಭೂಪತಿ, ಡಾ॥ ಲೀಲಾವತಿ ದೇವದಾಸ್ ಮತ್ತಿತರರು ಉದ್ಘಾಟನಾ ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಈಗಾಗಲೇ ಬೆಂಗಳೂರಿನ ವಿಕ್ಟೋರಿಯಾ, ವಾಣಿವಿಲಾಸ ಹಾಗೂ ಕೆಂಪೇಗೌಡ ಆಸ್ಪತ್ರೆಗಳಲ್ಲಿ ಪುಸ್ತಕ ಪ್ರದರ್ಶನ ಮತ್ತು ಮಾರಾಟ ಕಾರ್ಯಕ್ರಮ ಯಶಸ್ವಿಯಾಗಿದ್ದು ಉತ್ತಮ ಪ್ರತಿಕ್ರಿಯೆ ಬಂದಿದೆ. ಮುಂದೆ ಕೆ. ಸಿ. ಜನರಲ್ ಮತ್ತು ಸರಕಾರಿ ಆಯುರ್ವೇದ ಆಸ್ಪತ್ರೆಗಳಲ್ಲಿ ನಡೆಯಲಿದೆ.

ಕುಪಿತಕ್ಕೆ ಒಳಿಯಾದ. ಇದಕ್ಕೆಲ್ಲಾ ಆ ಮಂಜುನಾಥನ ದರ್ಶನ ಮಾಡದಿರುವುದೇ ಕಾರಣ ಎಂದು ನಿಶ್ಚಯಿಸಿ, ಮಾನಸಿಕ ಸಂತುಲನ ಪೂರ್ತಿ ಕಳಕೊಂಡು ಒಂದು ದಿನ ಮುಂಜಾನೆ ಮಡದಿ ಮಕ್ಕಳನ್ನು ಅನಾಥ ಮಾಡಿ ಆತ್ಮಹತ್ಯೆ ಮಾಡಿಕೊಂಡ.

* * *

ಒಂದು ತಿಂಗಳ ಹಿಂದೆ ಊರಿಗೆ ಹೋಗಿದ್ದೆ. ಬರುವ ಮೊದಲು ನೆಂಟರೊಬ್ಬರ ಮನೆಗೂ ಹೋದೆ. ದಾರಿಯಲ್ಲಿ ಹೋಗುತ್ತಿದ್ದಾಗ ಪೊಲೀಸರ, ರಾಜಕೀಯ ಪುಢಾರಿಗಳ ಕಾರುಗಳು ಒಂದರ ಹಿಂದೆ ಒಂದು ಹೋಗುತ್ತಿರುವುದನ್ನು ಕಂಡೆ. ಮಂತ್ರಿಯೊಬ್ಬನ ಸವಾರಿ ಹಳ್ಳಿಗೆ ಹೋಗುತ್ತಿದೆ ಎಂದು ಯೋಚಿಸಿ ಮುಂದಕ್ಕೆ ಹೋದಾಗ ರಸ್ತೆಯ ಪಕ್ಕದಲ್ಲೇ, ನನ್ನ ಚಿರಪರಿಚಿತ ಮಂತ್ರವಾದಿಯೊಬ್ಬನು ಹೊಸದಾಗಿ ಕಟ್ಟಿಸಿದ ಮಂತ್ರಶಾಲೆಯ ಉದ್ಘಾಟನೆ ಸಮಾರಂಭ ನೆರವೇರುತ್ತಿರುವುದನ್ನು ಕಂಡೆ. ಅದರ ಉದ್ಘಾಟನೆ ಊರಿನ ಪ್ರಮುಖ ರಾಜಕೀಯ ಮುಖಂಡನೊಬ್ಬನ ದಿವ್ಯ ಹಸ್ತದಿಂದ ನೆರವೇರುತ್ತಿತ್ತು.

ಈಗಿನ ಯುವಕ ಮಂತ್ರವಾದಿಯ ತಂದೆ ಹಿಂದೆ ಪ್ರಸಿದ್ಧ ಮಂತ್ರವಾದಿಯಾಗಿದ್ದು, ಸಾಕಷ್ಟು ಸಂಪಾದಿಸಿದ್ದ. ಹಿಂದುಳಿದ ವರ್ಗಕ್ಕೆ ಸೇರಿ ಉಚ್ಚವರ್ಣೀಯರಿಗೆ ಅಸ್ಪೃಶ್ಯನಾಗಿದ್ದರೂ ಅವರು ಕಷ್ಟ ಪರಿಹಾರಕ್ಕೆ, ರೋಗರುಜಿನಗಳ ಪರಿಹಾರಕ್ಕೆ, ಅವನ ಬಳಿಗೆ ಹೋಗದೆ ಇರುತ್ತಿದ್ದಿಲ್ಲ, ಅಥವಾ ಮನೆಗೇ ಬರಮಾಡಿಕೊಳ್ಳುತ್ತಿದ್ದರು. ಹಾಗೆ ಅವನು ಬಂದರೆ, ಮನೆಯೊಳಗೆ ಬಾರದೆ ಹೊರ ಅಂಗಳದಲ್ಲಿ ರೋಗಿಯನ್ನು ಮಣೆಯಲ್ಲಿ, ತೆಂಕು ದಿಕ್ಕಿಗೆ ಅಭಿಮುಖವಾಗಿ ಕುಳ್ಳಿರಿಸಿ, ಒಂದು ಹಿಡಿ ನೆಕ್ಕಿ ಸೊಪ್ಪನ್ನು ಕೈಯಲ್ಲಿ ಹಿಡಕೊಂಡು, ಬಾಯಲ್ಲಿ ಏನೋ ಮಣಮಣ ಮಾಡುತ್ತಾ ಮೆತ್ತಗೆ ತಲೆಗೆ ಹೊಡೆಯುತ್ತಿದ್ದ. ಸ್ವಲ್ಪ ಹೊತ್ತು ಹೀಗೆ ಮಾಡಿ, ಆಮೇಲೆ ಅದರಿಂದ ಏಳು ಎಲೆಗಳನ್ನು ಕಿತ್ತು ಬಾಯಿಯಿಂದ ಊದಿ ತೆಂಕು ದಿಕ್ಕಿಗೆ ಎಸೆಯುತ್ತಿದ್ದ. ಕೊನೆಗೆ ವಿಭೂತಿಯನ್ನು ಮಂತ್ರಿಸಿ, ಅಂಗಾಂಗಗಳಿಗೆ ತಾಗಿಸಿ, ಒಂದು ಚಿಟಿಕೆ ರೋಗಿಯ ಬಾಯಿಗೂ ಹಾಕುತ್ತಿದ್ದ. ಸಂಸ್ಕಾರ ಮುಗಿದ ಮೇಲೆ ಕೊಟ್ಟ ಕಾಸನ್ನು ಕಟ್ಟಿಕೊಂಡು ಹೊರಟುಹೋಗುತ್ತಿದ್ದ. ಈಗ ಅವನು ತೀರಾ ಮುದುಕನಾದುದರಿಂದ ಅವನ ಕೆಲಸವನ್ನು ಅವನ ಮಗ ಉತ್ತರಾಧಿಕಾರಿಯಾಗಿ ನೆರವೇರಿಸುತ್ತಿದ್ದಾನೆ. ಅವನೇ ಹೊಸತಾಗಿ ಕಟ್ಟಿಸಿದ ಮಂತ್ರಶಾಲೆಯ ಉದ್ಘಾಟನೆ ಅದು. ಮಗ ತಂದೆಗಿಂತ ಹೆಚ್ಚು ಬುದ್ಧಿವಂತನಾಗಿ, ಪ್ರಸಿದ್ಧನಾಗಿ ಕೊಡಗು, ಚಿಕ್ಕಮಗಳೂರು ಮೊದಲಾದ ದೂರದೂರದ ಊರುಗಳಿಂದಲೂ ಜನರು ಬಂದು ಕೃತಾರ್ಥರಾಗಿ ಹೋಗುತ್ತಾರಂತೆ. ಹೀಗೆ ಚಿಕ್ಕಮಗಳೂರಿನ ಒಬ್ಬ ಪ್ರಸಿದ್ಧ ಧನಿಕ, ಕಾಫಿ ತೋಟದ ಮಾಲಿಕ ತನ್ನ ಒಬ್ಬನೇ ಮಗನನ್ನು ಈತ ಮಂತ್ರಶಕ್ತಿಯಿಂದ ಬದುಕಿಸಿದ್ದಾನೆಂದು ಸಂತೋಷದಿಂದ ವಿದೇಶಿ ಕಾರೊಂದನ್ನು ಕಾಣಿಕೆಯಾಗಿ ನೀಡಿದ್ದಾನಂತೆ.

ಆತನ ಹೊಸ ಮಂತ್ರಾಲಯದ ಪಕ್ಕದಲ್ಲಿದ್ದ ಭವ್ಯ ಬಂಗಲೆಯ ಮುಂದೆ ನಿರ್ಮಿಸಿದ ವೇದಿಕೆ ಯಲ್ಲಿ ನಿಂತುಕೊಂಡು ರಾಜಕೀಯ ಪುಢಾರಿ ಸೇರಿದ ಜನರನ್ನು ಉದ್ದೇಶಿಸಿ ''...ನಂತಹ ಮಂತ್ರವಾದಿಗಳು ಪ್ರತಿಯೊಂದು ಹಳ್ಳಿಯಲ್ಲೂ ಇದ್ದು ಬಡಜನರ ಸೇವೆ ಮಾಡುತ್ತಾ ಇರಬೇಕು. ಶತಮಾನಗಳಿಂದ ನಡೆದು ಬಂದ, ನಮ್ಮ ಸಂಸ್ಕೃತಿಯ ಅಂಗವಾದ ಮಂತ್ರ, ತಂತ್ರ, ಮಾಟ, ಭೂತಪ್ರೇತಗಳ ಪೀಡಾ ಪರಿಹಾರ, ತಂಬಿಲ, ಬಲಿ ಮೊದಲಾದವುಗಳನ್ನು ಮರೆಯದೆ ಪ್ರೋತ್ಸಾಹಿಸಬೇಕಾದ್ದು ಪ್ರತಿಯೊಬ್ಬನ ಕರ್ತವ್ಯವಾಗಿದೆ. ಇದರಿಂದ ಹಳ್ಳಿಯ ಜನರು ಮದ್ದಿಗಾಗಿ ಡಾಕ್ಟರರ ಬಳಿಗೆ ಹೋಗಿ, ಹಣ, ಸಮಯ, ಖರ್ಚು ಮಾಡಿ, ಆಮೇಲೆ ಒದ್ದಾಡುವುದು ನಿಲ್ಲುತ್ತದೆ. ಇಂತಹ ಮಂತ್ರವಾದಿಗಳಿಂದ ಅಲ್ಪ ಖರ್ಚಿನಲ್ಲಿ ರೋಗರುಜಿನ ಗುಣವಾಗುವುದಾದರೆ ಧನಿಕರೂ, ಶಿಕ್ಷಿತರೂ ಇತ್ತ ಬಂದೇ ಬರುತ್ತಾರೆ. ಸರ್ಕಾರವೂ ಇಂತಹ ಕೆಲಸಗಳಿಗೆ ಪ್ರೋತ್ಸಾಹ ಕೊಟ್ಟು ಹೆಚ್ಚೆಚ್ಚು ಪ್ರಚುರಪಡಿಸಬೇಕು....'' ಇತ್ಯಾದಿ ಇತ್ಯಾದಿಯಾಗಿ ಭಾಷಣ ಮಾಡುತ್ತಿರುವುದನ್ನು ಕಂಡೆ. ನನಗೆ ಅಯ್ಯೋ ಎನಿಸಿತು. ಇಂತಹ ಮುಖಂಡರಿಂದಲೇ ನಮ್ಮ ದೇಶ ಕೆಟ್ಟುಹೋಯಿತು. ಇಂತಹವರು ಇರುವಲ್ಲಿವರೆಗೆ ಈ ದೇಶ ಉದ್ಧಾರವಾಗದೆಂದೂ ಅನಿಸಿತು. ಇಂತಹ ಮೂರ್ಖ ಶಿಖಾಮಣಿಗಳ ವೈಶಿಷ್ಟ್ಯವೆಂದರೆ ಸಮಯಸಾಧಕತನ. ಬಾರ್ ಒಂದರ ಉದ್ಘಾಟನೆಗೆ ಹೋದರೆ ಬೀದಿ, ಬೀದಿ ಬಾರುಗಳಿರಬೇಕೆಂದು ಹೇಳುತ್ತಾರೆ. ಮದ್ಯ ನಿಷೇಧಕ್ಕೆ ಸಂಬಂಧಿಸಿದ ಒಂದು ಸಭೆಗೆ ಹೋದರೆ ಯಾರೂ ಕುಡಿಯಬಾರದು. ಕುಡಿತದ ದೆಸೆಯಿಂದಲೇ ಹಳ್ಳಿಯ ನಮ್ಮ ಬಡಜನರು ಮತ್ತಷ್ಟೂ ಬಡವರಾಗುತ್ತಿದ್ದಾರೆ... ಗಾಂಧೀಜಿ ಸಂಪೂರ್ಣ ಪಾನ ನಿಷೇಧಕ್ಕೆ ಕರೆ ಕೊಟ್ಟಿದ್ದರು ಅನ್ನುತ್ತಾರೆ. – ಚುನಾವಣೆಯಲ್ಲಿ ಓಟು ಗಿಟ್ಟಿಸುವುದಕ್ಕಾಗಿ. ಜನರು ಏನಾದರೆ ಅವರಿಗೇನು ಬಂತು. ಆರಿಸಿಹೋದಮೇಲೆ !

ಭೂತಪ್ರೇತಗಳ ಪೀಡಾ ನಿವೃತ್ತಿಗೆ ಒಂದು ತೆಂಗಿನ ಕಾಯಿಯನ್ನು (ತೆಂಕು ದಿಕ್ಕಿನ) ಮಂತ್ರಿಸಿ, ರೋಗಿಯ ತಲೆಗೆ ಮೂರುಬಾರಿ ಪ್ರದಕ್ಷಿಣೆ ಬರಿಸಿ, ಮನೆಯಗಳಕ್ಕೆ ತೂಗುಹಾಕುವ ಕ್ರಮವೂ ಅನೇಕ ಕಡೆ ಕಂಡು ಬರುತ್ತದೆ. ಬೆಂಗಳೂರಿನಿಂದ ಮಂಗಳೂರಿಗೆ ಹೋಗುವಾಗ ನಗರ ಆರಂಭವಾಗುವಲ್ಲಿ, ಏಡಿಲ ಎಂಬ ಸ್ಥಳದಲ್ಲಿ, ಮಾರ್ಗದ ಎಡಬದಿಯಲ್ಲಿರುವ ಒಂದು ಮನೆಯಲ್ಲಿ ಹೀಗೆ ಮಾಡಿಗೆ ತೂಗು ಹಾಕಿಕೊಂಡಿರುವ ಅನೇಕ ತೆಂಗಿನಕಾಯಿಗಳನ್ನು ಕಾಣಬಹುದು.

* * *

ನಾವು ಮೂರ್ಖರಾಗಿ ಆರಿಸಿ ಕಳುಹಿಸಿದ ನಮ್ಮ ಅನೇಕ ಶಾಸಕರು, ಅಧಿಕಾರಿಗಳು ತಮ್ಮ ತಮ್ಮ ಕುಟುಂಬದ ಸರ್ವತೋಮುಖ ಕಲ್ಯಾಣಕ್ಕಾಗಿ ಹಳ್ಳಿಯ ಬಡಜನರನ್ನು ಅಜ್ಞಾನವೆಂಬ ಅಂಧಕಾರದಿಂದ ಮೇಲೇರಿ ಬಾರದಂತೆ ತಳ್ಳಿ, ಶಾಶ್ವತವಾಗಿ ಬಡವರಾಗಿಯೇ ಉಳಿಯುವಂತೆಯೂ ಮಾಡಿಬಿಟ್ಟಿದ್ದಾರೆಂಬುದಕ್ಕೆ ಮೊನ್ನೆ ನನ್ನ ಸ್ನೇಹಿತರೊಬ್ಬರು ಹೇಳಿದ, ನಡೆದ ಘಟನೆಯೊಂದನ್ನು ಹೇಳಿ ಲೇಖನಕ್ಕೆ ವಿರಾಮವನ್ನು ಕೊಡುತ್ತೇನೆ.

ಅವರ ಮನೆಯ ಹತ್ತಿರ ಇದ್ದ ಧನಿಕನೊಬ್ಬ ಸತ್ತು ಹೋದ. ಸಾಯುವ ವಯಸ್ಸೇನೂ ಆಗಿದ್ದಿಲ್ಲವಂತೆ. ಧನಿಕನಿಗೆ ಒಬ್ಬನೇ ಮಗ. ಬೇಕಾದಷ್ಟು ಆಸ್ತಿ ಸಂಪತ್ತು ಇತ್ತು. ಪರಿಚಿತರ, ಬಂಧುಗಳ, ಸ್ನೇಹಿತರ ಸಂಖ್ಯೆ ಬಲು ದೊಡ್ಡದು. ಧನಿಕನಾದರೂ ತುಂಬಾ ಉದಾರಿ. ಬಡವರಿಗೆ ಕಷ್ಟಕಾರ್ಪಣ್ಯದಲ್ಲಿ ಕಂಗಾಲಾದವರಿಗೆ ಮುಕ್ತ ಹಸ್ತದಿಂದ ಧನಸಹಾಯ ಮಾಡುತ್ತಿದ್ದುದರಿಂದ

ಊರ ಜನರಿಗೆ ತುಂಬಾ ಬೇಕಾದವನಾಗಿದ್ದ. ಎಲ್ಲರೂ ಅವನನ್ನು ಕೊಂಡಾಡುತ್ತಿದ್ದರು.

ಇಂತಹ ಪುಣ್ಯಪುರುಷ ಸತ್ತುಹೋದ ಸುದ್ದಿಯನ್ನು ಕೇಳಿ ಜನರ ಹಿಂಡೇ ಅವನ ಮನೆಯ ಬಾಗಿಲಿಗೆ ಬಂದು, ಅಂತಿಮ ದರ್ಶನ ಪಡೆದು ಹೋಗುತ್ತಿದ್ದರಂತೆ.

ಮರುದಿನ ಸಂಜೆ ಅವನ ತೋಟದ ಮೂಲೆಯಲ್ಲಿ ಹೆಣವನ್ನು ಮಣ್ಣಲ್ಲಿ ಹಾಕಿ, ಮೇಲಿಂದ ಅನೇಕ ಹೂಮಾಲೆಗಳನ್ನು ಬಂಧುಗಳು, ಸ್ನೇಹಿತರು ಹಾಕಿ ಬಂದರಂತೆ. ಇನ್ನೇನು ಕತ್ತಲೆಯಾಯಿತೆನ್ನುವಷ್ಟರಲ್ಲಿ ವಾಯು ವಿಹಾರಕ್ಕೆ ಹೋದ ಮಿತ್ರನು ಆ ದಾರಿಯಾಗಿ ಬರುತ್ತಿದ್ದಾಗ ಹೂವಾಡಿಗಿತ್ತಿಯೊಬ್ಬಳು ದೂಷೆಯ ಬಳಿಗೆ ಹೋಗಿ ಹೂಮಾಲೆಗಳನ್ನೆತ್ತಿ, ಓರಣವಾಗಿ ಮಡಚಿ, ಬುಟ್ಟಿಯಲ್ಲಿಟ್ಟುಕೊಂಡು ಮೆಲ್ಲಗೆ ಹೊರಟುಹೋಗುತ್ತಿರುವುದನ್ನು ಕಂಡನಂತೆ. ಆ ಹೆಂಗಸು ಅಪರಿಚಿತೆಯೇನೂ ಅಲ್ಲವಂತೆ. ಆಕೆಯ ಗಂಡ ಕೆಲವು ದಿನಗಳ ಹಿಂದೆ ಬಡತನವನ್ನು ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡಿದ್ದನಂತೆ. ಐದಾರು ಮಕ್ಕಳು ಬೇರೆ. ಹೆಂಗಸು, ಮಕ್ಕಳ ಹಾಗೂ ತನ್ನ ಹೊಟ್ಟೆ ತುಂಬಿಸಲು ದಾರಿ ಕಾಣದೆ ಮನೆ ಮನೆಗೆ ಹೋಗಿ ಹೂ ಮಾರುತ್ತಿದ್ದಳಂತೆ.

ಧನಿಕನ ಹೆಣದ ಮೇಲಿನ, ಬೆಲೆ ಬಾಳುವ ಹೂವನ್ನಾದರೂ ಮಾರಿ ಮರುದಿನ ಆಕೆ, ಆಕೆಯ ಮಕ್ಕಳು ಹೊಟ್ಟೆ ತುಂಬ ಊಟ ಮಾಡಿರಬಹುದು. 'ಭುಭುಕ್ಷಿತಃ ಕಿಂ ನ ಕರೋತಿ ಪಾಪಂ.' ಹಸಿದವ ಹೊಟ್ಟೆಗಾಗಿ ಎಂತಹ ಪಾಪವನ್ನಾದರೂ ಮಾಡಲು ಹಿಂಜರಿಯುವುದಿಲ್ಲವಂತೆ.

ಹೇಗಿದೆ ನೋಡಿ, ನಮ್ಮ ಜನರ ಬಡತನ! ಬಡವರ ಉದ್ಧಾರಕ್ಕಾಗಿ ಅನೇಕ ಯೋಜನೆಗಳಿವೆ. ಯೋಜನೆಗಳ ಲಾಭ ಮಾತ್ರ ಅವರಿಗೆ ದಕ್ಕದೆ ಅಧಿಕಾರಿಗಳು, ರಾಜಕೀಯ ಮುಖಂಡರು ತಿಂದು ತೇಗುತ್ತಾರೆ. ನೀವು ನೋಡಿರಬಹುದು, ಚಳಿ ಇರಲಿ, ಮಳೆ ಇರಲಿ ಅಥವಾ ಉರಿ ಬಿಸಿಲಿರಲಿ, ರಸ್ತೆಯ ಬದಿಯಲ್ಲಿ ಕೇಬಲ್‌ಗಳಿಗೆ, ನೀರಿನ ಪೈಪುಗಳಿಗೆ ಮಣ್ಣನ್ನು ಅಗೆಯುವ ಕೃಶಕಾಯದ ಹೆಂಗಸರನ್ನು, ಗಂಡಸರನ್ನು. ಅವರ ಚಿಕ್ಕ ಮಕ್ಕಳು ಹತ್ತಿರದ ಮರದ ಬುಡದಲ್ಲಿ ಅಳುತ್ತಲೋ, ಆಟವಾಡುತ್ತಲೋ ಇರುವುದನ್ನೂ ಕಾಣಬಹುದು. ಇವರ ರಕ್ತವನ್ನು ಹೀರಿ ಗುತ್ತಿಗೆದಾರ ಬೊಜ್ಜನ್ನು ಬೆಳೆಸಿಕೊಂಡಿರುತ್ತಾನೆ. ಈ ಬಡ ಕಾರ್ಮಿಕರಿಗಾಗಿ ಒಂದು ಬಿಂದು ಕಣ್ಣೀರು ನಮ್ಮ ಕಂಗಳಿಂದ ಇಳಿದು ಬರುತ್ತದೆಯೇ? ಹಿಂದಿಯ ಪ್ರಸಿದ್ಧ ಕಾದಂಬರಿಕಾರ ಶ್ರೀ ಪ್ರೇಮಚಂದರು ಒಂದು ಕಡೆ ಹೇಳುತ್ತಾರೆ, 'ಈ ದೊಡ್ಡ ದೊಡ್ಡ ಜನರು ಮೇಲೆ ನೋಡಿ ನಡೆಯುತ್ತಾರೆ. ಅವರ ದೃಷ್ಟಿ ಎಂದೂ ಕೆಳಗೆ ಹರಿಯುವುದಿಲ್ಲ', ಎಂದು. ಎಷ್ಟು ನಿಜ!

ಎಂ. ವಿ. ಭಟ್
'ಶ್ರೀಮಿತ್ತೂರು', ಮೇದರಹಳ್ಳಿ, ಚಿಕ್ಕಬಾಣಾವರ
ಬೆಂಗಳೂರು - ೫೬೦ ೦೯೦

# ಗಿಳಿಯು ಪಂಜರದೊಳಿಲ್ಲ





ಅದೇ ಘಮ ಘಮ ಪರಿಮಳ
ಅಂತಪುರದ ಸಂದುಗೊಂದಿಗಳ
ತುಂಬ ಹರಡಿದೆ.
ಹೂದಾನಿಗಳೂ ಈಗಷ್ಟೇ ಅರಳಿದಂತಿದೆ
ಮಂಚದ ಮೇಲಿನ ಶೃಂಗಾರ
ಒಂದಿನಿತೂ ಕದಡಿಲ್ಲ.
ಅಪ್ಪಣೆ ವಿನಃ ಒಂದು ನೊಣವೂ ಬರುವಂತಿಲ್ಲ.
ಅಲ್ಲಿ ಎಲ್ಲವೂ ಎಂದಿನಂತೆಯೇ ಇದೆ.
ಇನ್ನೇನು ರಾಜ ಬರುವ ಸಮಯ.
ಓಹ್! ಬಂದೇ ಬಿಟ್ಟ
ಸಖಿಯರೆಲ್ಲ ಚುರುಕಾಗುತ್ತಾರೆ
ಬಾಗಿಲು ತೆರೆದುಕೊಳ್ಳುತ್ತದೆ.
ಸ್ವಾಗತ ಸ್ವಾಗತ ಸುಸ್ವಾಗತ.
ಎಲ್ಲವೂ ಯಾಂತ್ರಿಕ.

ಆದರೆ, ಒಳಗಡೆ ಏನೋ ಕೊರತೆ,
ಗುಮಾನಿ.
ಎಲ್ಲ ಅಲ್ಲಲ್ಲೇ ಇದೆ.
ಹೂದಾನಿ, ಮಂಚ, ಆಸನ, ನಿಲುಗನ್ನಡಿ.
ಆದರೂ ಏನೋ ಇಲ್ಲ ಎಂಬಂತಿದೆ.

ಹೌದು, ಗಿಳಿಯು ಪಂಜರದೊಳಿಲ್ಲ.
ಪಂಜರ ಚಿನ್ನದ್ದಾದರೇನು?!
ಅಲ್ಲೂ ಗಾಳಿ ಬೆಳಕಿರುವಂತೆ
ಮನಸಿದೆ, ಹೃದಯವಿದೆ
ಕಾತರ ಕುತೂಹಲವಿದೆ.
ಆವರಣದ ಸಂಸ್ಕೃತಿಯಲ್ಲಿ
ಇಂದ್ರಿಯಗಳ ಹಪಹಪಿಕೆ ಅನಾವರಣಗೊಂಡಿದೆ.
ರೆಕ್ಕೆ ಬಲಿತಿದೆ, ಪುಕ್ಕ ಕೆದರಿದೆ.
ಪಂಜರ ಬರಿದಾಗಿದೆ.

ಹೇಮಾವತಿ ವೆಂಕಟ್
ಸುಳ್ಯ ಅಂಚೆ, ದಕ್ಷಿಣ ಕನ್ನಡ ೫೭೪೨೩೯

# ಸಾದರ ಸ್ವೀಕಾರ

**ನಮ್ಮೂರು ನಮ್ಮವರು (ನೆನಪುಗಳು)**
*ಟಿ. ಎಸ್. ಸಂಜೀವರಾವ್*
**ಪುಟ : ೯೮** **ಬೆಲೆ : ರೂ. ೪೫**
**ಟಿ. ಎಸ್. ಸಂಜೀವರಾವ್**
೯೭೬, ೬೬ನೇ ಕ್ರಾಸ್, ೫ನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ಸುಖೀ ವಿವಾಹ ಜೀವನ (ಲೇಖನಗಳು)**
*ಚಿಕ್ಕಮಗಳೂರು ಧ್ರುವ ಹರೀಶ್*
**ಪುಟ : ೧೪೮** **ಬೆಲೆ : ರೂ. ೬೦**
**ವ್ಯಕ್ತಿತ್ವ ವಿಕಾಸ ಅಧ್ಯಯನ ಕೇಂದ್ರ**
೭೬, ೪ನೇ ಮುಖ್ಯರಸ್ತೆ, ಶಕ್ತಿ ಗಣಪತಿ ನಗರ
ಬೆಂಗಳೂರು - ೫೬೦ ೦೭೯

**ದ್ವೀಪದಲ್ಲಿ ದ್ವಿಪದಿ (ಕವನ ಸಂಕಲನ)**
*ಕಿರಣ*
**ಪುಟ : ೬೪** **ಬೆಲೆ : ರೂ. ೫೫**
**ಇಂಚರ ಪ್ರಕಾಶನ,** ನಂ. ೧೬೭
೧೦ನೇ ಮುಖ್ಯರಸ್ತೆ, ೩ನೇ ಘಟ್ಟ
ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮

**ಹೊಸ್ತಿಲು ಹಿಮಾಲಯದ ಮಧ್ಯೆ (ಕವನ ಸಂಕಲನ)**
*ವಾಸುದೇವ ನಾಡಿಗ್*
**ಪುಟ : ೬೦** **ಬೆಲೆ : ರೂ. ೪೦**
**ಸಂಚಯ,** ೧೦೦, ೨ನೇ ಮುಖ್ಯರಸ್ತೆ, ೬ನೇ ಬ್ಲಾಕ್
೩ನೇ ಸ್ಟೇಜ್, ೩ನೇ ಫೇಸ್, ಬನಶಂಕರಿ
ಬೆಂಗಳೂರು - ೫೬೦ ೦೮೫

**ರಸ್ತೆಪುರಾಣ (ಲೇಖನ ಸಂಕಲನ)**
*ಎಚ್. ಶಾಂತರಾಜ್ ಐತಾಳ್*
**ಪುಟ : ೯೪** **ಬೆಲೆ : ರೂ. ೪೦**
**ಬಳಕೆದಾರರ ವೇದಿಕೆ,** ಕಲ್ಪನಾ ಚಿತ್ರಮಂದಿರದ ಬಳಿ
ಉಡುಪಿ - ೫೭೬ ೧೦೧

**ಸಾಹಿತ್ಯ ಸೌರಭ (ಪ್ರಬಂಧ ಸಂಕಲನ)**
*ಜಯದೇವಪ್ಪ ಜೈನಕೇರಿ*
**ಪುಟ : ೧೭೮** **ಬೆಲೆ : ರೂ. ೮೦**
**ಶಾಂತಲಾ ಪ್ರಕಾಶನ,** ನಂ.೮೭, ಶಾಂತಲಾ
ಕುವೆಂಪುರಸ್ತೆ, ಶಿವಮೊಗ್ಗ - ೫೭೭ ೨೦೧

**ಚುಟುಕು ಚಂದ್ರಿಕೆ (ಹನಿಗವನಗಳು)**
*ಪ್ರೊ// ಹೇಮಾ ಸೊನೊಳ್ಳಿ (ಅಲ್ಲಣ್ಣವರ)*
**ಪುಟ : ೯೭** **ಬೆಲೆ : ರೂ. ೫೦**
**ಸ್ನೇಹಾ ಪ್ರಕಾಶನ,** ಶ್ರೀ ವಿರೂಪಾಕ್ಷ ಮುರಿಗೆಪ್ಪ ಅಂಗಡಿ
ಕಡೋಲಕರ ಗಲ್ಲಿ, ಖಾನಾಪುರ, ಬೆಳಗಾವಿ ಜಿಲ್ಲೆ

# ಸರ್ವಜ್ಞ ಮತ್ತು ಜೀವನಾನುಭವ




**ಹು**ಟ್ಟು, ಬೆಳೆದು, ಬದುಕಿನ ಪರಿಸರದ ಹಿನ್ನೆಲೆಯಲ್ಲಿ, ಸಾಹಿತ್ಯಕ ರಚನೆಗೆ ವಸ್ತುವನ್ನು ಆಯ್ಕೆ ಮಾಡಿಕೊಂಡ ವಿಚಾರದಲ್ಲಿ, ವೈಯಕ್ತಿಕ ಇತಿವೃತ್ತದ ದೃಷ್ಟಿಯಲ್ಲಿ, ಇಡೀ ಸಮಾಜವನ್ನು ತನ್ನ ನಿಶಿತಮತಿಯಿಂದ ಅಭಿಮುಖೀಕರಿಸಿ ಕೊಂಡ ಉದ್ದೇಶದಲ್ಲಿ – ಸರ್ವಜ್ಞನು, ಇಡೀ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರತ್ಯೇಕ ಸ್ಥಾನ ಪಡೆಯುತ್ತಾನೆ.

ವಾಸ್ತವ ಬದುಕಿನೊಂದಿಗೆ ದುಷ್ಟ ಬದುಕಿನ ಸಂಘರ್ಷವನ್ನು ಮತ್ತು ನೈತಿಕ ಬದುಕಿನ ಅನುಸಂಧಾನವನ್ನು ಏಕಕಾಲದಲ್ಲೇ ಮಾಡಬೇಕಾದ ಸಾಮಾಜಿಕ ಚಿಂತನೆಗೆ ಸರ್ವಜ್ಞ ಒಂದು ವಿಶಿಷ್ಟ ಮತ್ತು

ಸರ್ವಜ್ಞನೆಂಬವನು । ಗರ್ವದಿಂದಾದವನೆ ?<br>
ಸರ್ವರೊಳೊಂದೊಂದು ನುಡಿಗಲಿತು ವಿದ್ಯದ<br>
ಪರ್ವತವೆ ಆದ ಸರ್ವಜ್ಞ ।

ಸದಾ ಸಂಚಾರಿಯಾದ ಈತ ಸಮಾಜದೊಂದಿಗಿನ ತನ್ನ ಬದುಕಿನ ಘಟನೆಗಳನ್ನು ಅನುಸಂಧಾನಗೊಳಿಸಿ ಅದರ ಫಲಶ್ರುತಿಯಾಗಿ ಬಂದ ತಿಳುವಳಿಕೆಯನ್ನು ಚಿಕಿತ್ಸಕ ಬುದ್ಧಿಗೆ ಪರಿವರ್ತಿಸಿರುವುದು ಸರ್ವಜ್ಞನ ಇಡೀ ಬದುಕಿನ ಕಾಲಾವಧಿಯ ಚಿತ್ರವನ್ನು ಮೂಡಿಸುತ್ತದೆ. 'ಬೀದಿಯಲ್ಲಿ ಬಿದ್ದಿರುವ ಅರಿವು' ಕಾಣುವುದು ಅಂತಃಚಕ್ಷುವಿಗೆ ಎಂದು ಹೇಳುವ ಅಲ್ಲಮಪ್ರಭುವಿನ ತತ್ವಜ್ಞಾನೀಯ ದೃಷ್ಟಿ, ಅದಕ್ಕೆ ಸಮಾನವಾದ ಮನೋಭಾವನೆಯ ಅಂತರ್ದೃಷ್ಟಿ ಸರ್ವಜ್ಞನಲ್ಲಿದೆ.

ಸಮಾಜವೆಂಬ ವಿಶಾಲವೇದಿಕೆಯಲ್ಲಿ ಕ್ಷೇತ್ರ ಕಾರ್ಯದ ಲಾಭಾಂಶಗಳನ್ನು ಪ್ರಕಟಪಡಿಸುವ ಆತನ ವಿಚಾರಗಳು ಪ್ರಾಯೋಗಿಕ ಜ್ಞಾನದಿಂದ ಲಭಿಸಿದವು; ಎಂದೇ ಆತನ ವಿಚಾರಗಳಿಗೆ ಹೆಚ್ಚು ಮಹತ್ವವಿದೆ. ರಾಜಾಸ್ಥಾನದಲ್ಲಿ ಕುಳಿತು ಮಹಾಕಾವ್ಯ ರಚಿಸಿ ವಿದ್ವತ್ ಸಭಿಕರಿಂದ ಪ್ರಶಂಸೆ, ಚಕ್ರವರ್ತಿಯಿಂದ ಸನ್ಮಾನ - ಮನ್ನಣೆ ಪಡೆಯುವ ಮಹಾಕವಿಯ ಸಾಹಿತ್ಯಕ್ಕಿಂತಲೂ ಮೇಲ್ಮಟ್ಟದಲ್ಲಿ ನಿಲ್ಲುವ ಸಾಹಿತ್ಯ ಸರ್ವಜ್ಞನದಾಗುತ್ತದೆ.

ಆತನ ಒಂದು ಪ್ರಸಿದ್ಧ ತ್ರಿಪದಿಯನ್ನು ಇಲ್ಲಿ ಗಮನಿಸಬಹುದು :

ಆನೆ ಹೋಗುತಿರಲು । ಶ್ವಾನ ತಾ ಬೊಗಳುವುದು ।<br>
ಶ್ವಾನನಂತಾನೆ ಬೊಗಳಿದರೆ ।<br>
ಆನೆಯ ಮಾನಕ್ಕೇ ಹಾನಿ ಸರ್ವಜ್ಞ ।

ವಾಸ್ತವವಾಗಿ ಈ ತ್ರಿಪದಿಯಲ್ಲಿ ಸರ್ವಜ್ಞ ಹೇಳುತ್ತಿರುವುದು ಆನೆ ಮತ್ತು ನಾಯಿಗಳನ್ನು ಕುರಿತಾಗಿ ಅಲ್ಲ; ಆನೆಯಂತಿರುವ ಮತ್ತು ನಾಯಿಯಂತಿರುವ ಮನುಷ್ಯರ ಬಗ್ಗೆಯೇ. ಇಲ್ಲಿ ಮನುಷ್ಯರ ಉಲ್ಲೇಖವೇ ಇಲ್ಲ ಅವನಲ್ಲಿರುವ ಗಾಂಭೀರ್ಯ ಮತ್ತು ಕೀಳುತನಗಳನ್ನು ಈ ಎರಡೂ ಪ್ರಾಣಿಗಳಲ್ಲಿ ಸರ್ವಜ್ಞ ಕಾಣುತ್ತಾನೆ. ಇಲ್ಲಿ ಆನೆ ಮತ್ತು ನಾಯಿ ರೂಪಕಗಳು. ಮನುಷ್ಯನ ಎರಡು ರೂಪಗಳು ಈ ಪ್ರಾಣಿಗಳ ಮೂಲಕ ಕಾಣುತ್ತವೆಯೇ ವಿನಾ ಪ್ರಾಣಿಗಳೇ ಸ್ವತಃ ಬಂದು ಓದುಗನ ಕಣ್ಣ ಮುಂದೆ ನಿಲ್ಲುವುದಿಲ್ಲ ತ್ರಿಪದಿಯಲ್ಲಿ ಯಾವುದೇ ನಿರ್ದಿಷ್ಟವಾದ ವ್ಯಕ್ತಿಯನ್ನು ಅಥವಾ ಆತನ ಹುದ್ದೆ, ಅಧಿಕಾರ, ಉಪನಾಮಗಳನ್ನು ಹೆಸರಿಸುವುದು ಅಥವಾ ಉಲ್ಲೇಖಿಸುವುದು ಆಗಿಲ್ಲದಿರುವುದರಿಂದಲೇ ಅದು ಸಾರ್ವತ್ರಿಕತೆಯನ್ನು ಸಾರ್ವಕಾಲಿಕತೆ ಯನ್ನು ಸಂಪಾದಿಸುತ್ತದೆ. ಇದು ಸಮಾಜಮುಖಿಯಾದ ಜೀವನಾನುಭವದಲ್ಲಿ ಒಡ ಮೂಡುತ್ತದೆ. ಪರಿಪೂರ್ಣಗೊಂಡ ಮನಸ್ಸು ಅನುಭವವನ್ನು ಅದೇ ಹಿನ್ನೆಲೆಗೆ ಸರಿಯಾಗಿ ದುಡಿಸಿಕೊಳ್ಳುವ ರೀತಿ ಇದು. ತನ್ನ ಕಾಲಕ್ಕೆ ಎಲ್ಲ ಧಾರ್ಮಿಕ ವಿಚಾರಗಳಲ್ಲಾದ ಸಾಮಾಜಿಕ ವಿಷಮತೆಯನ್ನು ಸರ್ವಜ್ಞ ನೇರವಾಗಿಯೇ ವಿಮರ್ಶಿಸಿದ್ದಾನೆ.

- 'ಮಿಂದುಂಬ ಹಾರುವಂಗೆ। ಸಂಧ್ಯಾವಂದನೆಯೇಕೆ ?' – ಎಂಬಲ್ಲಿ ಬ್ರಾಹ್ಮಣ ಮತದ,
- 'ಹೆರೆಗಳೆದ ಉರಗನ । ಗರಳ ತಾ ತಪ್ಪುವದೆ ?। ಪರತತ್ವ ಬೋಧೆಯರಿಯದ ಶ್ರವಣ ತಾ । ಸಿರಿಯ ತೊರೆದೇನು ?' – ಎಂಬಲ್ಲಿ ಜೈನಧರ್ಮವನ್ನು ,
- 'ತುರುಕನ ನೆರೆ ಹೊಲ್ಲ। ಹುರುಕನ ಕೆಳೆ ಹೊಲ್ಲ। ತಿರಿಗೂಳನಟ್ಟು ಉಣ ಹೊಲ್ಲ, ಪರಸತಿಯ ಸರಸವೇ ಹೊಲ್ಲ।' – ಎಂಬಲ್ಲಿ ಮುಸ್ಲಿಂ ಧರ್ಮವನ್ನು ,
- 'ಕತ್ತೆ ಬೂದಿಲಿ ಹೊರಳಿ । ಮತ್ತೆ ಯತಿಯಪ್ಪುದೇ । ತತ್ತ್ವವರಿಯದಲೆ ಭಸಿತವಿಟ್ಟವ ಶುದ್ಧ। ಕತ್ತೆಯಂತೆಂದ' – ಎಂಬಲ್ಲಿ ವೀರಶೈವಧರ್ಮವನ್ನು ಆತ ಪ್ರಶ್ನಿಸುತ್ತಾನೆ.

ಧರ್ಮ ತನ್ನ ಅಂಧಾಚಾರಗಳ ಮೂಲಕ ಹೇಗೆ ತನ್ನ ಮೂಲೋದ್ದೇಶವನ್ನು, ಮೂಲ ಪರಿಭಾವನೆಯನ್ನು ಪಲ್ಲಟಗೊಳಿಸುತ್ತಿದೆ ಎಂಬುದು ಆತನ ಇಂಥ ವಚನಗಳ ಮೂಲ ಆಶಯವಾಗಿದೆ. ಸಾಮಾಜಿಕ ವಿಷಮತೆಗೆ ಕಾರಣವಾದ ಜಾತಿ ವ್ಯವಸ್ಥೆಯನ್ನೂ ಮತ್ತಿತರ ಅಸಮಾನತೆ ಬಿತ್ತುವ ವ್ಯವಸ್ಥೆಯ ಕ್ರೂರಕೃತ್ಯಗಳನ್ನೂ ಆತ ಸರಳ ಭಾಷೆ, ಶೈಲಿಯ ಮೂಲಕ ಮನನ ಮಾಡುವಲ್ಲಿ ಸರ್ವಜ್ಞನಿಗಿರುವ ಸಾಮಾಜಿಕ ಕಳಕಳಿಯ ಇತ್ಯಾತ್ಮಕ ಅಂಶವಾಗಿದೆ.

**ಡಾ|| ಮೃತ್ಯುಂಜಯ ರುಮಾಲೆ**<br>
ವಿಜಯನಗರ ಕಾಲೇಜು, ಹೊಸಪೇಟೆ - ೫೮೩ ೨೦೧

## ಸುಖ



ಮೊನ್ನೆ ನಾವು<br>
ನಮ್ಮ ಸುಖಗಳ<br>
ಕಷ್ಟದ ಕೈಯ್ಯಲಿ<br>
ಅಡವಿಟ್ಟೆವು.

ಆಗ ನಮಗೆ<br>
ನಾಳಿನ ಸುಖದ ಕನಸು<br>
ನಿರೀಕ್ಷೆಗಳಿದ್ದವು.

ಕಷ್ಟಗಳು ನಮ್ಮ ನಾಳೆಗಳನು<br>
ನಾಳೆಯಾಗಿಸುತ್ತಲೇ<br>
ಬಂದವು.

ಈ ನಡುವೆ<br>
ಅಡವಿಟ್ಟ ಸುಖಗಳಲಿ<br>
ಕೆಲವು ನಿನ್ನೆ ಕೊಳ್ಳೆಯಾದವು<br>
ಹಲವು ಕಳೆದುಹೋದವು.

ಇಂದು ನಾವು<br>
ಸುಖದ ಎಲ್ಲ ಸಂಗತಿಗಳ<br>
ಕಳೆದುಕೊಂಡು ಕಷ್ಟವಾಗಿದ್ದೇವೆ<br>
ಮತ್ತು ಇಂದಿಗೂ ಕನಸು<br>
ನಿರೀಕ್ಷೆಗಳ ಉಳಿಸಿಕೊಂಡಿದ್ದೇವೆ.

ನಾಳೆ ಸುಖಗಳು<br>
ನಮ್ಮ ಕಾಲಿನಡಿ<br>
ಒತ್ತೆಯಾಗಲಿವೆ; ಎಂತಿದ್ದರೂ<br>
ಅವು ಕಷ್ಟದ ಸ್ವತ್ತು!

**ಗಣೇಶ ಹೊಸ್ಮನೆ**<br>
ಜಾನ್ಮನೆ - ೫೮೧ ೩೧೫, ಶಿರಸಿ (ಉ. ಕ)

**HOSATHU** Kannada Monthly / August 2003 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna